- ರಾಜ್ಯಶಾಸ್ತ್ರವು ಸಾಮಾನ್ಯ ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸುವುದರ ಮೂಲಕ ಸರ್ಕಾರ ಮತ್ತು ಜನಪತ್ರಿನಿಧಿಗಳು ಜಾಗೃತವಾಗಿಯೂ ಮತ್ತು ಸಕ್ರಿಯವಾಗಿ ಇರುವಂತೆ ನೋಡಿಕೊಳ್ಳುತ್ತದೆ.
- ರಾಜ್ಯಶಾಸ್ತ್ರದ ಜ್ಞಾನವು ಉತ್ತಮ ನಾಯಕರು ಮತ್ತು ಸಮಾಜಸೇವಕರುಗಳು ಜನರ ಸಮಸ್ಯೆಗಳನ್ನು ತಿಳಿದು ಪರಿಣಾಮಕಾರಿಯಾದ ಪರಿಹಾರ ಕ್ರಮಗಳನ್ನು ಅನುಸರಿಸಲು ಸಹಾಯಕವಾಗುತ್ತದೆ.
- ರಾಜ್ಯಶಾಸ್ತ್ರದ ಜ್ಞಾನವು ಉತ್ತಮ ನಾಯಕರುಗಳನ್ನು ಮತ್ತು ಉತ್ತಮ ನಾಗರಿಕರನ್ನು ಸೃಷ್ಟಿಸುವಲ್ಲಿ ಸಹಕರಿಸುತ್ತದೆ.
- ರಾಜ್ಯಶಾಸ್ತ್ರವು ರಾಜಕೀಯ ಸಂಸ್ಥೆಗಳಾದಂತಹ ರಾಜಕೀಯ ಪಕ್ಷಗಳು, ಒಕ್ಕೂಟಗಳು, ಸ್ಥಳೀಯ ಸಂಸ್ಥೆಗಳು ಇತ್ಯಾದಿಗಳನ್ನು ತಿಳಿಯಲು ಸಹಾಯಕವಾಗುತ್ತದೆ.
- ಜನರು ಸಕ್ರಿಯವಾಗಿ ರಾಜಕೀಯದಲ್ಲಿ ತೊಡಗಿಸಿಕೊಳ್ಳಲು ಪೂರಕವಾಗುವ ತತ್ವ ಹಾಗೂ ನೀತಿಗಳನ್ನು ಪ್ರೋತ್ಸಾಹಿಸಲು ರಾಜ್ಯಶಾಸ್ತ್ರವು ನೆರವಾಗುತ್ತದೆ.
- ರಾಜ್ಯಶಾಸ್ತ್ರವು ಅಂತರಾಷ್ಟ್ರೀಯ ಸಂಬಂಧಗಳ ಬಗೆಗಿನ ಜ್ಞಾನವನ್ನು ನೀಡುವುದರ ಜೊತೆಗೆ ವಿಶೇಷವಾಗಿ ದೇಶದೇಶಗಳ ನಡುವಿನ ಯುದ್ಧಗಳ ಬಗ್ಗೆ ಹಾಗೂ ಶಾಂತಿ ಮತ್ತು ಸಹಕಾರದ ಮಹತ್ವವನ್ನು ತಿಳಿಸುತ್ತದೆ.

ಈ ಮೇಲಿನ ಎಲ್ಲಾ ಕಾರಣಗಳಿಂದಾಗಿ ರಾಜ್ಯಶಾಸ್ತ್ರದ ಅಧ್ಯಯನವು ರಾಜ್ಯವೊಂದರ ಅವಶ್ಯಕತೆ, ಉತ್ತಮ ರಾಜ್ಯಾಡಳಿತ, ನಾಯಕರುಗಳ ಪಾತ್ರ ಹಾಗು ಪ್ರಜೆಗಳ ಭಾಗವಹಿಸುವಿಕೆಯ ಸ್ಪಷ್ಟ ಅರಿವನ್ನುಂಟುಮಾಡುತ್ತದೆ. ರಾಜ್ಯಶಾಸ್ತ್ರವು ಪ್ರಜೆಗಳೆಲ್ಲರೂ ಉತ್ತಮ, ಜವಾಬ್ದಾರಿಯುತ, ಸುಸಂಸ್ಕೃತ ಮತ್ತು ಕ್ರಿಯಾಶೀಲ ನಾಗರಿಕರಾಗುವಂತೆ ಸಹಕರಿಸುತ್ತದೆ. ರಾಜ್ಯಶಾಸ್ತ್ರದ ಜ್ಞಾನವು ನ್ಯಾಯಯುತ, ಶಾಂತ, ಪ್ರಗತಿದಾಯಕ ಮತ್ತು ಸುಖಿ ರಾಜ್ಯವನ್ನು ಸಂಸ್ಥಾಪಿಸುವಲ್ಲಿ ಮಹತ್ತರ ಕೊಡುಗೆಯನ್ನು ನೀಡುವುದರ ಮೂಲಕ ಸಹಸ್ರ ಸಹಸ್ರ ಸಂಖ್ಯೆಯ ಜನರ ಕನಸನ್ನು ನನಸಾಗಿಸುತ್ತದೆ.



## ಅಭ್ಯಾಸಗಳು

**I ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ರಾಜಕೀಯ ಎಂಬ ಪದ ಉತ್ಪತ್ತಿಗೊಂಡ ಗ್ರೀಕ್ ಪದ ______________ .

2 'ರಿಪಬ್ಲಿಕ್' ಗ್ರಂಥದ ಕರ್ತೃ ______________ .

3 ಅರಿಸ್ಟಾಟಲ್ ರಾಜ್ಯಶಾಸ್ತ್ರವನ್ನು ಕುರಿತು ರಚಿಸಿದ ಕೃತಿ ______________ .

4 ರಾಜ್ಯಶಾಸ್ತ್ರದ ಬಗೆಗಿನ ಮಾಹಿತಿ ಹೊಂದಿರುವ ಕೌಟಿಲ್ಯನ ಕೃತಿ ______________ .

## II ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.

1 ರಾಜ್ಯಶಾಸ್ತ್ರ ಎಂದರೇನು ?

2 ರಾಜ್ಯಶಾಸ್ತ್ರದ ಕ್ರಮಬದ್ಧ ಅಧ್ಯಯನ ಯಾರಿಂದ ಪ್ರಾರಂಭವಾಯಿತು?

3 ರಾಜ್ಯಶಾಸ್ತ್ರದ ಪಿತಾಮಹರೆಂದು ಯಾರನ್ನು ಕರೆಯುತ್ತಾರೆ?

4 ರಾಜ್ಯಶಾಸ್ತ್ರದ ಒಂದು ವ್ಯಾಖ್ಯೆ ನೀಡಿ.

5 ರಾಜ್ಯಶಾಸ್ತ್ರದ ಅಧ್ಯಯನದ ಯಾವುದಾದರೊಂದು ಪ್ರಯೋಜನ ತಿಳಿಸಿ?

## III ಚಟುವಟಿಕೆಗಳು.

1 ಭಾರತದಲ್ಲಿ ಹಿಂದೆ ಇದ್ದ ರಾಜಕೀಯ ವ್ಯವಸ್ಥೆಯನ್ನು ಬಿಂಬಿಸುವ ಚಿತ್ರಪಟಗಳ ಸಂಗ್ರಹ ಪುಸ್ತಕವನ್ನು ಸಿದ್ಧಪಡಿಸಿ.

2 ನಿಮ್ಮ ತರಗತಿಯಲ್ಲಿ ಶಿಕ್ಷಕರ ಸಹಾಯದೊಂದಿಗೆ ಅರಿಸ್ಟಾಟಲನು ರಾಜ್ಯಶಾಸ್ತ್ರದ ಬಗ್ಗೆ ನೀಡಿದ ಹೇಳಿಕೆಯನ್ನು ಚರ್ಚಿಸಿ.

3 'ಮಾನವನ ಸಾಮಾಜಿಕ ಅವಶ್ಯಕತೆಗಳು ರಾಜ್ಯ ಸೃಷ್ಟಿಗೆ ನಾಂದಿಯಾದವು' ಈ ವಿಚಾರವಾಗಿ ನಿಮ್ಮ ತರಗತಿಯಲ್ಲಿ ವಿಚಾರವಿನಿಮಯದ ಕಾರ್ಯಕ್ರಮವೊಂದನ್ನು ಏರ್ಪಡಿಸಿ.

## IV ಯೋಜನಾ ಕಾರ್ಯಗಳು (Project Work).

1 ನೀವೊಬ್ಬ ಪುರಾತನ ಗ್ರೀಸ್ ದೇಶದ ಪ್ರಜೆಯೆಂದು ಭಾವಿಸಿಕೊಂಡು ನಗರ ರಾಜ್ಯದ ಯಾವುದಾದರೊಂದು ನಿರ್ದಿಷ್ಟ ವಿಚಾರವೊಂದರ ಬಗ್ಗೆ ಚರ್ಚಿಸಿ.

2 'ಸರ್ವಾಧಿಕಾರಿ ಧೋರಣೆಯು ವ್ಯಕ್ತಿಯ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ ಸಂಸ್ಥೆಗಳನ್ನು ದಮನಗೊಳಿಸುತ್ತದೆ' – ಈ ವಿಚಾರಕ್ಕೆ ಸಂಬಂಧಿಸಿದ ಮಾಹಿತಿ ಮತ್ತು ಚಿತ್ರ ಪಟಗಳನ್ನು ಸಂಗ್ರಹಿಸಿ.

3 ಮಹಾಕಾವ್ಯಗಳಲ್ಲಿ ಕಾಣಬರುವ ರಾಜಕೀಯ ವಿಚಾರಗಳ ಬಗೆಗಿನ ಮಾಹಿತಿಯನ್ನು ಸಂಗ್ರಹಿಸಿ.

# ಅಧ್ಯಾಯ–2
# ಪೌರ ಮತ್ತು ಪೌರತ್ವ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- 'ಪೌರ' ಮತ್ತು 'ಪೌರತ್ವ'ದ ಅರ್ಥ ವ್ಯತ್ಯಾಸ ತಿಳಿಯುವುದು.
- ಪೌರನಿಗೆ ದೇಶವು ನೀಡುವ ಸೌಲಭ್ಯಗಳ ಬಗ್ಗೆ ತಿಳಿಯುವುದು.
- ಪೌರ ಮತ್ತು ವಿದೇಶಿಯನ ನಡುವಿನ ವ್ಯತ್ಯಾಸ ಗುರುತಿಸುವುದು.
- 'ಪೌರತ್ವ' ಪಡೆಯುವ, ವಿಧಾನಗಳು ಮತ್ತು ಕಳೆದುಕೊಳ್ಳುವ ವಿಧಾನಗಳ ಬಗ್ಗೆ ತಿಳಿಯುವುದು.

**ಅರ್ಥ** : **'ಪೌರತ್ವ'** ಎಂಬ ಪದ ಕಾಲಕಾಲಕ್ಕೆ ವಿವಿಧ ಅರ್ಥವನ್ನು ಪಡೆದಿದೆ. ಗ್ರೀಕರ ಕಾಲದಲ್ಲಿ ಪೌರತ್ವ ಎಂಬುದು ಸಂಕುಚಿತ ಅರ್ಥವನ್ನು ಹೊಂದಿತ್ತು. ಆಗಿನ ಕಾಲದಲ್ಲಿ ಗ್ರೀಕ್ ನಗರ – ರಾಜ್ಯಗಳ ನಿವಾಸಿಗಳಾಗಿದ್ದು, ರಾಜ್ಯದ ಆಡಳಿತದಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದವರಿಗೆ ಮಾತ್ರ ಪೌರರು ಎನ್ನುವ ಮಾತು ಅನ್ವಯವಾಗುತ್ತಿತ್ತು. ರಾಜ್ಯದಲ್ಲಿ ವಾಸಿಸುತ್ತಿದ್ದವರೆಲ್ಲರೂ ಪೌರರಾಗಿರುವುದಿಲ್ಲ. ರಾಜ್ಯದ ಆಡಳಿತ, ನ್ಯಾಯ ವಿತರಣೆ ಮತ್ತು ಶಾಸನೀಯ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದವರಿಗೆ ಮಾತ್ರ ಪೌರರು ಎಂದು ಕರೆಯಲಾಗುತ್ತಿತ್ತು. ಉಳಿದಂತೆ ಸ್ತ್ರೀಯರು, ಗುಲಾಮರು, ಕಾರ್ಮಿಕರು, ಮಕ್ಕಳು, ವಿದೇಶಿಯರು, ವ್ಯಾಪಾರಿಗಳು ಮುಂತಾದವರು ಪೌರರಾಗಿರಲಿಲ್ಲ, ಇದು ಪೌರತ್ವದ ಬಗೆಗೆ ಇದ್ದ ಪುರಾತನ ಗ್ರೀಕರ ಪರಿಕಲ್ಪನೆಯಾಗಿತ್ತು.

ಆದರೆ, ಆಧುನಿಕ ಕಾಲದ ಪೌರತ್ವದ ಪರಿಕಲ್ಪನೆ ವಿಶಾಲಾರ್ಥವನ್ನು ಹೊಂದಿದೆ. ಒಂದು ನಾಗರಿಕ ಸಮಾಜದ / ರಾಜ್ಯದ ಸದಸ್ಯತ್ವ ಹೊಂದಿ, ತಾನು ವಾಸಿಸುವ ರಾಜ್ಯಕ್ಕೆ ನಿಷ್ಠೆಯಿಂದ ಇದ್ದು, ರಾಜ್ಯವು ನೀಡುವ ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ಅನುಭವಿಸುವ ಯಾವುದೇ ವ್ಯಕ್ತಿಯನ್ನು ಪೌರನೆಂದು ಕರೆಯಲಾಗಿದೆ. ನಾಗರಿಕ ಸಮಾಜದ ಸದಸ್ಯನಾಗಿದ್ದು, ನಿರ್ದಿಷ್ಟ ಕರ್ತವ್ಯಗಳಿಗೆ ಬದ್ಧನಾಗಿ, ಸಾಮಾನ್ಯ ಪ್ರಾಧಿಕಾರಕ್ಕೆ ಒಳಪಟ್ಟು, ಅದು ನೀಡುವ ಸೌಲಭ್ಯಗಳನ್ನು ಸಮಾನವಾಗಿ ಅನುಭೋಗಿಸುವವನೇ ಪೌರ ಎಂದು ವ್ಯಾಟೆಲ್ ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ಒಬ್ಬ ವ್ಯಕ್ತಿಯು ಪೌರ ಎನಿಸಿಕೊಳ್ಳಬೇಕಾದರೆ, ಅವನು ರಾಜ್ಯದ ಖಾಯಂ ನಿವಾಸಿಯಾಗಿದ್ದು, ರಾಜ್ಯದ ಸದಸ್ಯತ್ವವನ್ನು ಹೊಂದಿರಬೇಕು; ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ಅನುಭೋಗಿಸುವುದು; ಹಕ್ಕುಗಳ ಜೊತೆಗೆ ಕೆಲವು ಕರ್ತವ್ಯಗಳನ್ನು ನಿರ್ವಹಿಸಬೇಕು ಮತ್ತು ರಾಜ್ಯಕ್ಕೆ ನಿಷ್ಠೆಯಿಂದ ಇರಬೇಕು.

ಪ್ರಜೆಗಳಿಗೂ ಮತ್ತು ಪೌರರಿಗೂ ನಿಖರ ವ್ಯತ್ಯಾಸವನ್ನು ಕಾಣುತ್ತೇವೆ. 1947 ಕ್ಕಿಂತ ಮುಂಚೆ ನಾವೆಲ್ಲ ಬ್ರಿಟಿಷರ ಆಳ್ವಿಕೆಯಲ್ಲಿನ ಪ್ರಜೆಗಳಾಗಿದ್ದೆವು. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ನಾವುಗಳೆಲ್ಲಾ ಭಾರತೀಯ ಪೌರರಾಗಿದ್ದೇವೆ. ಸಾಮಾನ್ಯವಾಗಿ ಒಂದು ರಾಜ್ಯಕ್ಕೆ ಸಂಬಂಧಿಸಿದ ಹಾಗೂ ಅಲ್ಲಿ ವಾಸಿಸುತ್ತಿರುವ ಜನರು ಆ ರಾಜ್ಯದ ಪೌರರೆನಿಸಿಕೊಳ್ಳುತ್ತಾರೆ. ಒಬ್ಬ ಪೌರನಾಗಿರಬೇಕಾದರೆ ಅವನು ವಾಸಿಸುವ ರಾಜ್ಯ ಅಥವಾ ದೇಶದ ಕಾನೂನುಗಳ ಅನುಪಾಲಕನಾಗಿರಬೇಕು. ರಾಜ್ಯ ಅಥವಾ ದೇಶವೊಂದು ಪೌರರಿಗೆ ರಕ್ಷಣೆ ಮತ್ತು ಸವಲತ್ತುಗಳನ್ನು ಒದಗಿಸಿದರೆ, ಪೌರನು ದೇಶದ ನೀತಿ, ನಿಯಮ, ಕಾನೂನುಗಳ ಪರಿಪಾಲಕನಾಗಿ ದೇಶದ ಪ್ರಗತಿಯಲ್ಲಿ ತನ್ನ ಏಳಿಗೆಯನ್ನು ಕಾಣಬೇಕು.

ಪೌರನಾದವನು ಒಂದು ದೇಶದ ಸದಸ್ಯ ಪ್ರಜೆಯಾಗಿ ಆ ದೇಶದಲ್ಲಿ ಹಲವಾರು ಅನುಕೂಲಗಳನ್ನು ಹಾಗೂ ಸೌಲಭ್ಯತೆಗಳನ್ನು ಅನುಭೋಗಿಸುತ್ತಾನೆ, ಅವುಗಳೆಂದರೆ

- ರಾಷ್ಟ್ರದಿಂದ ಭದ್ರತೆ ಮತ್ತು ರಕ್ಷಣೆಗಳನ್ನು ಪಡೆಯುತ್ತಾನೆ.
- ರಾಷ್ಟ್ರವು ಕಾನೂನು ಮತ್ತು ಸುವ್ಯವಸ್ಥೆಯನ್ನು ನೀಡುವುದರಿಂದ ಅವನು ಶಾಂತಿಯುತ ಜೀವನ ನಡೆಸುತ್ತಾನೆ.
- ಇಂದಿನ ಸಮಾಜ ಕಲ್ಯಾಣ ಯೋಜನೆಗಳ ಅಡಿಯಲ್ಲಿ ರಾಜ್ಯ ಒದಗಿಸುವ ಶಿಕ್ಷಣ, ಆರೋಗ್ಯ, ವಿಮೆ, ಆಶ್ರಯ, ಉದ್ಯೋಗ ಹಾಗೂ ಇತರೆ ಸೌಲಭ್ಯಗಳನ್ನು ಅನುಭವಿಸುತ್ತಾನೆ. ಪೌರನು ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ಅನುಭೋಗಿಸುತ್ತಾನೆ.
- ರಾಜ್ಯ ನೀಡುವ ಮೂಲಭೂತ ಹಕ್ಕುಗಳನ್ನು ಅನುಭವಿಸುತ್ತಾನೆ.ಚುನಾವಣೆಗಳಲ್ಲಿ ಪ್ರತಿನಿಧಿಸುವ, ಸ್ಪರ್ಧಿಸುವ ಮತ್ತು ಮತ ಚಲಾಯಿಸುವ ರಾಜಕೀಯ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳುವ ಅವಕಾಶವನ್ನು ಪಡೆಯುತ್ತಾನೆ.
- ರಾಷ್ಟ್ರಾಧ್ಯಕ್ಷ, ಉಪರಾಷ್ಟ್ರಾಧ್ಯಕ್ಷ, ಸರ್ವೋಚ್ಚ ಹಾಗೂ ಶ್ರೇಷ್ಠ ನ್ಯಾಯಾಲಯಗಳ ನ್ಯಾಯಾಧೀಶರು ಹಾಗೂ ಇತರೆ ಉನ್ನತ ಹುದ್ದೆಗಳನ್ನು ಅಲಂಕರಿಸುವ ಅರ್ಹತೆಗಳನ್ನು ಪಡೆಯುತ್ತಾನೆ.
- ಎಲ್ಲಾ ಸಾರ್ವಜನಿಕ ಸೇವೆಗಳಿಗೆ ನೇಮಕಾತಿ ಪಡೆಯುವ ಅರ್ಹತೆ ಹೊಂದಿರುತ್ತಾನೆ.

**ಪೌರ ಮತ್ತು ವಿದೇಶಿ ನಡುವಿನ ವ್ಯತ್ಯಾಸಗಳು**

ಒಂದು ರಾಜ್ಯದಲ್ಲಿ ಹುಟ್ಟಿ, ಬೆಳೆದು ಅಲ್ಲಿಯ ಪೌರತ್ವವನ್ನು ಹೊಂದಿ ಅಲ್ಲಿಯೇ ಶಾಶ್ವತವಾಗಿ ನೆಲೆಸಿರುವವರನ್ನು ಅಲ್ಲಿನ ಪೌರರು ಎಂದು ಕರೆಯಲಾಗುತ್ತದೆ. ಆದರೆ, ಯಾವುದೇ ರಾಜ್ಯದ ಪೌರನಾಗಿದ್ದು ತಾತ್ಕಾಲಿಕವಾಗಿ ಬೇರೊಂದು ದೇಶದಲ್ಲಿ ನೆಲೆಸಿದವರನ್ನು ವಿದೇಶಿಯರು ಎಂದು ಕರೆಯಲಾಗುತ್ತದೆ. ಅವನು ತಾತ್ಕಾಲಿಕವಾಗಿ ನೆಲೆಸಿರುವ ದೇಶದಲ್ಲಿ ವಿದೇಶಿಯನಾಗಿರುತ್ತಾನೆ. ಆದರೆ ತನ್ನ ತಾಯಿನಾಡಿನ ಪೌರನಾಗಿರುತ್ತಾನೆ. ಪೌರ ಮತ್ತು ವಿದೇಶಿ ನಡುವಿನ ವ್ಯತ್ಯಾಸಗಳನ್ನು ಈ ಕೆಳಗಿನಂತೆ ವಿವರಿಸಬಹುದು.

1. ಪೌರನು ತನ್ನ ದೇಶದ ಶಾಶ್ವತ ನಿವಾಸಿಯಾಗಿದ್ದು, ಪೂರ್ಣಸದಸ್ಯನಾಗಿರುತ್ತಾನೆ. ವಿದೇಶಿಯನು ತಾತ್ಕಾಲಿಕ ನಿವಾಸಿ ಅಥವಾ ಪ್ರವಾಸಿಗನು.

2. ಪೌರನಿಗೆ ರಾಜಕೀಯ ಹಕ್ಕು ಲಭ್ಯವಿರುತ್ತವೆ. ಅವನು ಮತದಾನದಲ್ಲಿ ಭಾಗವಹಿಸಬಹುದು. ಚುನಾವಣೆಯಲ್ಲಿ ಸ್ಪರ್ಧಿಸಬಹುದು; ಸರ್ಕಾರದ ಹುದ್ದೆಯನ್ನು ಹೊಂದಬಹುದು. ವಿದೇಶಿಯನಿಗೆ ಇವು ದೊರಕುವುದಿಲ್ಲ.

3. ಪೌರ ಅಥವಾ ನಾಗರಿಕನು ತನ್ನ ರಾಜ್ಯಕ್ಕೆ ನಿಷ್ಠೆ ತೋರುತ್ತಾನೆ. ಆದರೆ ವಿದೇಶಿಯನು ಪೌರನಾಗಿ ಮತ್ತೊಂದು ರಾಷ್ಟ್ರದ ಹಂಗಾಮಿ ಸದಸ್ಯನಾಗಿರುತ್ತಾನೆ. ತಾನು ಹಂಗಾಮಿಯಾಗಿ ನೆಲೆಸಿರುವ ರಾಷ್ಟ್ರದ ಕಾನೂನುಗಳನ್ನು ಗೌರವಿಸಬೇಕು ಹಾಗೂ ಪಾಲಿಸಬೇಕು.

4. ರಾಜ್ಯಸರ್ಕಾರ ಅನಪೇಕ್ಷಿತ ವಿದೇಶಿಯನನ್ನು ಕಾನೂನು ಬಾಹಿರ ಚಟುವಟಿಕೆ, ವಿದೇಶಿ ಪರವನಾಗಿ ಅವಧಿಯ ಮುಕ್ತಾಯ ಮುಂತಾದ ಕಾರಣಗಳಿಂದ ದೇಶ ಬಿಟ್ಟು ಹೋಗುವಂತೆ ಆದೇಶಿಸಬಹುದು. ಆದರೆ ಪೌರನಿಗೆ ಅಂತಹ ಆಜ್ಞೆ ವಿಧಿಸುವಂತಿಲ್ಲ.

**ಪೌರತ್ವವನ್ನು ಪಡೆಯುವ ವಿಧಾನಗಳು**

ಪೌರತ್ವ ಪಡೆಯುವಲ್ಲಿ ಎರಡು ವಿಧಾನಗಳಿವೆ. ಅವುಗಳೆಂದರೆ :

1. ಜನನ ಸ್ಥಾನ 2. ಸಹಜೀಕರಣ

**1. ಜನನ :** ಜನನ ಸ್ಥಾನದ ಆಧಾರದ ಮೇಲೆ ಪೌರತ್ವ ನೀಡಿಕೆಯ ನಿಯಮಗಳು ಆಚರಣೆಯಲ್ಲಿರುವುದು ಕಂಡು ಬರುತ್ತದೆ. ಒಂದು ರಾಜ್ಯದಲ್ಲಿ ಜನನವಾದರೆ ಪೌರತ್ವ ಪಡೆಯಲು ಅರ್ಹನಾಗುತ್ತಾನೆ. ಆದರೆ ಜನ್ಮಸ್ಥಳವನ್ನು ಆಧರಿಸಿ ಪೌರತ್ವ ನೀಡುವುದು ತರ್ಕಬದ್ಧವಾಗಿಲ್ಲ ಎಂದು ವಾದಿಸಲಾಗಿದೆ. ಏಕೆಂದರೆ ಹೆರಿಗೆ ಆಕಸ್ಮಿಕವಾಗಿ ಇನ್ನೊಂದು ದೇಶದಲ್ಲಿ ಆಗುವ ಸಾಧ್ಯತೆ ಇರುತ್ತದೆ.

**2. ಸಹಜೀಕರಣ :** ಸಹಜೀಕರಣ ಮೂಲಕವೂ ಒಂದು ರಾಜ್ಯದ ಪೌರತ್ವ ಪಡೆಯಬಹುದಾಗಿದೆ. ಯಾವುದೇ ದೇಶವು ವಿಧಿಸುವ ಕರಾರು ಹಾಗೂ ನಿಯಮಗಳನ್ನು ಈಡೇರಿಸಿದಾಗ ಆ ದೇಶದ ಪೌರತ್ವ ಪಡೆಯಲು ಅರ್ಹರಾಗುತ್ತಾರೆ. ಸಹಜೀಕರಣದ ನಿಯಮಗಳು ದೇಶದಿಂದ ದೇಶಕ್ಕೆ ಭಿನ್ನವಾಗಿರುವುದಾದರೂ ಅದರ ಸಾಮಾನ್ಯ ನಿಯಮಗಳು ಈ ಕೆಳಗಿನಂತಿವೆ :

ಎ) **ವಾಸಸ್ಥಳ :** ಒಂದು ದೇಶದ ಪೌರನು ಬೇರೊಂದು ದೇಶದಲ್ಲಿ ದೀರ್ಘಕಾಲ ವಾಸವಾಗಿದ್ದರೆ ಆ ದೇಶದ ಪೌರತ್ವವನ್ನು ಪಡೆಯಬಹುದು. ಈ ರೀತಿಯ ವಾಸದ ಅವಧಿ ದೇಶದಿಂದ ದೇಶಕ್ಕೆ ಭಿನ್ನವಾಗಿದೆ. ಅಮೆರಿಕ ಮತ್ತು ಇಂಗ್ಲೆಂಡ್ ರಾಷ್ಟ್ರಗಳಲ್ಲಿ ನಿರಂತರ ವಾಸದ ಅವಧಿ 5 ವರ್ಷಗಳಾಗಿದ್ದರೆ, ಫ್ರಾನ್ಸ್ ದೇಶದಲ್ಲಿ ಈ ಅವಧಿ 10 ವರ್ಷ.

ಬಿ) **ವಿವಾಹ :** ಒಂದು ದೇಶದ ಮಹಿಳೆ ವಿದೇಶದ ಪುರಷನೊಂದಿಗೆ ವಿವಾಹವಾದರೆ ಅವಳು ತನ್ನ ಪತಿಯ ದೇಶದ ಪೌರತ್ವ ಪಡೆಯುತ್ತಾಳೆ. ಆದರೆ ಪತಿಯು ತನ್ನ ಹೆಂಡತಿಯ ದೇಶದ ಪೌರತ್ವ ಪಡೆಯುವುದಿಲ್ಲ. ಜಪಾನ್ ಹಾಗೂ ಕೆಲವು ದೇಶಗಳು ಮಾತ್ರ ಇದಕ್ಕೆ ಅಪವಾದವಾಗಿವೆ.

ಸಿ) **ವಿದೇಶಿ ಸರ್ಕಾರಿ ಸೇವೆ :** ಒಂದು ದೇಶದ ಪೌರನು ವಿದೇಶಿ ಸರ್ಕಾರ ಸೇವೆಗೆ ಸೇರಿದರೆ ಆ ದೇಶದ ಪೌರತ್ವವನ್ನು ಪಡೆಯಬಹುದು. ವಿದೇಶಿಯರ ದೇಶನಿಷ್ಠೆಯ ಬಗ್ಗೆ ಸಂಶಯದಿಂದಾಗಿ ಹಲವು ದೇಶಗಳು ವಿದೇಶಿಯರನ್ನು ರಾಜ್ಯಸೇವೆಗೆ ಸೇರಿಸಿಕೊಳ್ಳುವುದಿಲ್ಲ.

ಡಿ) **ಆಸ್ತಿ ಸಂಪಾದನೆಯ ಮೂಲಕ :** ಒರ್ವ ವ್ಯಕ್ತಿಯು ಬೇರೆ ದೇಶದಲ್ಲಿ ಆಸ್ತಿಯನ್ನು ಖರೀದಿಸಿದರೆ ಆ ದೇಶವು ಆತನಿಗೆ ಪೌರತ್ವ ನೀಡಬಹುದು. ಮೆಕ್ಸಿಕೊ ದೇಶದಲ್ಲಿ ಇಂತಹ ನಿಯಮವಿದೆ. ಆದರೆ ಇಂದಿನ ರಾಷ್ಟ್ರಗಳು ವಿದೇಶಿಯರಿಗೆ ಭೂಮಿಯನ್ನು ಕೊಳ್ಳಲು ಆಸ್ಪದ ಕೊಡುವುದು ಅಪರೂಪ.

ಇ) **ಮನವಿಯ ಮೂಲಕ :** ನಿಗದಿತ ಅರ್ಜಿ ಅಥವಾ ಮನವಿ ಸಲ್ಲಿಸುವ ಮೂಲಕ ಬೇರೆ ದೇಶದ ಪೌರತ್ವವನ್ನು ಪಡೆಯಬಹುದು. ಹೀಗೆ ಮನವಿ ಸಲ್ಲಿಸುವವರು ನಿರ್ದಿಷ್ಟ ಕರಾರುಗಳನ್ನು ಪೂರೈಸಬೇಕಾಗುತ್ತದೆ. ಸಾಮಾನ್ಯವಾಗಿ ಅರ್ಜಿ ಸಲ್ಲಿಸುವ ವ್ಯಕ್ತಿಯು ದಿವಾಳಿಕೋರನಾಗಿರದೆ ಉತ್ತಮ ನಡತೆಯನ್ನು ಹೊಂದಿರಬೇಕೆಂದು ಪೌರತ್ವ ನೀಡುವ ದೇಶ ಬಯಸುತ್ತದೆ.

**ಭಾರತದ ಪೌರತ್ವವನ್ನು ಪಡೆಯುವ ವಿಧಾನಗಳು**

ಭಾರತದೇಶದಲ್ಲಿ ಪೌರತ್ವಕ್ಕೆ ಸಂಬಂಧಿಸಿದಂತೆ ಕಾನೂನು ಮತ್ತು ಶಾಸನಗಳನ್ನು ನಿರ್ಮಿಸುವ ಅಧಿಕಾರವನ್ನು ಸಂಸತ್ತು ಹೊಂದಿರುತ್ತದೆ. ರಾಜ್ಯ ಶಾಸಕಾಂಗವು ಈ ವಿಚಾರದಲ್ಲಿ ಯಾವುದೇ ಅಧಿಕಾರ ಹೊಂದಿರುವುದಿಲ್ಲ. ಭಾರತದಲ್ಲಿ 1955ರಲ್ಲಿ ಪೌರತ್ವ ಕಾಯಿದೆಯನ್ನು ಜಾರಿಗೆ ತರಲಾಯಿತು. ಈ ಕಾಯಿದೆಯು ಪೌರತ್ವ ಪಡೆಯುವ ಮತ್ತು ಕಳೆದುಕೊಳ್ಳುವ ಬಗೆಯನ್ನು ವಿವರಿಸಿದೆ. ಈ ಕಾಯಿದೆಯು ಪುನಃ 1986 ರಲ್ಲಿ ತಿದ್ದುಪಡಿಯಾಗಿದೆ. ಪೌರತ್ವ ಪಡೆಯುವ ನಿಯಮಗಳನ್ನು ಬಹು ಕಟ್ಟುನಿಟ್ಟಾಗಿ ರೂಪಿಸಿದೆ. 1955 ರ ಪೌರತ್ವ ಕಾಯಿದೆಯು ಪೌರತ್ವ ಪಡೆಯುವ ವಿಧಿಗಳನ್ನು ಕೆಳಗಿನಂತೆ ನಿರ್ದೇಶಿಸುತ್ತದೆ. ಅವುಗಳೆಂದರೆ:

1. **ಜನ್ಮದತ್ತ ಪೌರತ್ವ (Citizenship by Birth):** ಭಾರತದಲ್ಲಿ 26ನೇ ಜನವರಿ 1950ರಿಂದ ಜನ್ಮ ಪಡೆದಿರುವ ಪ್ರತಿಯೊಬ್ಬ ವ್ಯಕ್ತಿಯು ಜನ್ಮದತ್ತವಾಗಿ ಭಾರತೀಯ ಪೌರನಾಗುತ್ತಾನೆ. 1950ರ ಜನವರಿ 26 ಕ್ಕೆ ಮೊದಲು ಜನಿಸಿದವರಿಗೆ (ಹಾಗೂ ಭಾರತದಲ್ಲಿ ನೆಲೆಸಿದವರಿಗೆ ) ಪೌರತ್ವವನ್ನು ನೀಡಲಾಗಿದೆ.

2. **ರಕ್ತಸಂಬಂಧ (Citizenship by Descent) / ಅನುವಂಶಿಕ ಪೌರತ್ವ :** ವ್ಯಕ್ತಿಯೊಬ್ಬ 26ನೇ ಜನವರಿ 1950ರ ನಂತರದಲ್ಲಿ ವಿದೇಶದಲ್ಲಿ ಹುಟ್ಟಿದ್ದು, ಆ ಸಮಯದಲ್ಲಿ ಆ ವ್ಯಕ್ತಿಯ ತಾಯಿ ಅಥವಾ ತಂದೆ ಭಾರತದ ಪೌರನಾಗಿದ್ದರೆ ಅವನೂ ಕೂಡ ಭಾರತೀಯ ಪೌರತ್ವ ಪಡೆಯಬಹುದಾಗಿದೆ.

3. **ನೋಂದಣಿ ಪೌರತ್ವ (Citizenship by Registration):** ಭಾರತೀಯ ನಾಗರಿಕನಲ್ಲದ ಯಾವುದೇ ವ್ಯಕ್ತಿಯು ಭಾರತದ ಪೌರನಾಗಬೇಕೆಂದು ಬಯಸಿದರೆ ಭಾರತ ಸಂವಿಧಾನದ ಪ್ರಕಾರ ಅಥವಾ ಪೌರತ್ವ ಕಾಯಿದೆಯ ಪ್ರಕಾರ ನೋಂದಣಿ ಮಾಡಿಕೊಂಡು ಪೌರತ್ವವನ್ನು ಪಡೆಯಬಹುದು.

4. **ಸಹಜ ಪೌರತ್ವ (Citizenship by Naturalisation):** ಭಾರತದ ರಾಷ್ಟ್ರಪತಿಯವರಿಗೆ ಪೌರತ್ವಕ್ಕಾಗಿ ಪರಕೀಯರು ಅಂದರೆ ಅನ್ಯ ದೇಶದವರು ಅರ್ಜಿಸಲ್ಲಿಸಿ ಪೌರತ್ವವನ್ನು ಸಂಪಾದಿಸಿಕೊಳ್ಳಬಹುದು. ಇಂತಹ ಸಂಧರ್ಭದಲ್ಲಿ ಅರ್ಜಿದಾರರು ಭಾರತದಲ್ಲಿ ಕನಿಷ್ಠ ಐದು ವರ್ಷಗಳ ವಾಸವಾಗಿದ್ದು ಇನ್ನಿತರೆ ನಿಬಂಧನೆಗಳನ್ನು ಪೂರೈಸಬೇಕಾಗುತ್ತದೆ.

5. **ನೂತನ ಭೂಪ್ರದೇಶದ ಸೇರ್ಪಡೆಯಿಂದ ಪೌರತ್ವ (By incorporation of new Territory):** ಯಾವುದಾದರೂ ನೂತನ ಪ್ರದೇಶವು ಭಾರತದ ಭೂಪ್ರದೇಶಕ್ಕೆ ಸೇರ್ಪಡೆಯಾದರೆ ಆ ಭೂ ಪ್ರದೇಶದಲ್ಲಿರುವಂತಹ ಜನತೆ ಭಾರತ ಸರ್ಕಾರದ ಆದೇಶದ ಮೂಲಕ ಭಾರತದ ಪೌರತ್ವ ಪಡೆಯುತ್ತಾರೆ.

**ಭಾರತದ ಪೌರತ್ವವನ್ನು ಕಳೆದುಕೊಳ್ಳುವ ವಿಧಾನ (Loss of Citizenship)**

ಪೌರತ್ವವನ್ನು ಪಡೆಯುವಂತೆ ಅದನ್ನು ಹಲವು ಕಾರಣಗಳಿಂದಾಗಿ ಕಳೆದುಕೊಳ್ಳಬಹುದು. ಅಂತಹ ಕಾರಣಗಳೆಂದರೆ :

1. **ಪರಿತ್ಯಾಗ (Renunciation) :** ಯಾವುದೇ ಭಾರತೀಯ ಪೌರ, ಮತ್ತೊಂದು ರಾಷ್ಟ್ರದ ಪೌರತ್ವ ಪಡೆದರೆ ಸ್ವ-ಇಚ್ಛೆಯಿಂದ ನೋಂದಣಿಯ ಮೂಲಕ ಪ್ರಕಟಿಸಿ ಭಾರತದ ಪೌರತ್ವವನ್ನು ತ್ಯಾಗಮಾಡಬಹುದು.

2. **ಅಂತ್ಯಗೊಳ್ಳುವಿಕೆ (Termination) :** ಭಾರತದ ಯಾವುದೇ ಪೌರನೊಬ್ಬ ವಿದೇಶವೊಂದರ ಪೌರತ್ವ ಪಡೆದರೆ ಅವನಿಂದ ಅರ್ಜಿ ಸಲ್ಲಿಕೆಯನ್ನು ನಿರೀಕ್ಷಿಸದೆ ಕಾನೂನು ಬದ್ದವಾಗಿ ಆತನ ಭಾರತದ ಪೌರತ್ವವನ್ನು ಅಂತ್ಯಗೊಳಿಸಲಾಗುತ್ತದೆ.

3. **ಪದಚ್ಯುತಿ (By Deprivation) :** ಯಾರಾದರು ವ್ಯಕ್ತಿಯೊಬ್ಬ ವಂಚನೆಯ ಮೂಲಕ ಭಾರತದ ಪೌರತ್ವವನ್ನು ಹೊಂದಿದ್ದರೆ ಅಥವಾ ಅವನು / ಅವಳು ರಾಷ್ಟ್ರ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರೆ ಅಥವಾ ಭಾರತದ ಸಂವಿಧಾನಕ್ಕೆ ಅವಿಧೇಯನಾಗಿ ನಡೆದುಕೊಂಡರೆ ಅಂತಹವರನ್ನು ಭಾರತ ಸರ್ಕಾರವು ಪೌರತ್ವದಿಂದ ರದ್ದುಗೊಳಿಸಬಹುದು. ಇದು ಬಲವಂತದ ಪದಚ್ಯುತಿಯಾಗಿದೆ.

**ಪೌರತ್ವದ ವಿಧಗಳು:** ಪೌರತ್ವದಲ್ಲಿ ಎರಡು ವಿಧಗಳಿವೆ. ಮೊದಲನೆಯದು ಏಕ ಪೌರತ್ವ ಮತ್ತೊಂದು ದ್ವಿ ಪೌರತ್ವ. ಏಕ ಪೌರತ್ವದಲ್ಲಿ ವ್ಯಕ್ತಿಯೊಬ್ಬ ತಾನು ವಾಸಿಸುವ ದೇಶದ ಯಾವುದೇ ರಾಜ್ಯದವನಾಗಿದ್ದರೂ ರಾಷ್ಟ್ರೀಯ ಪೌರತ್ವವನ್ನು ಹೊಂದುವುದಾಗಿದೆ. ಇಂತಹ ಸಂಧರ್ಭದಲ್ಲಿ ರಾಜ್ಯಗಳ ಪೌರತ್ವ ಎಂಬುದಿರುವುದಿಲ್ಲ. ಉದಾ : ಒಕ್ಕೂಟ ರಾಜ್ಯ ವ್ಯವಸ್ಥೆಯಿರುವ ಅಮೆರಿಕಾ ಮತ್ತು ಸ್ವಿಟ್ಜರ್‌ಲೆಂಡ್‌ಗಳಲ್ಲಿ ದ್ವಿ ಪೌರತ್ವ ವ್ಯವಸ್ಥೆ ಜಾರಿಯಲ್ಲಿದೆ. ಇದರಲ್ಲಿ ರಾಜ್ಯ ಹಾಗೂ ರಾಷ್ಟ್ರಗಳಿಗೆ ಪ್ರತ್ಯೇಕವಾಗಿ ಪೌರತ್ವ ಹೊಂದಿರುತ್ತಾರೆ.

**ಪೌರತ್ವ ಮತ್ತು ಸರ್ಕಾರ :** ರಾಜ್ಯ ಮತ್ತು ಪೌರರ ನಡುವೆ ಅತ್ಯಂತ ನಿಕಟ ಸಂಬಂಧವಿದ್ದು, ಪೌರರಿಲ್ಲದೆ ರಾಜ್ಯವಿರುವುದಿಲ್ಲ ಎಂಬುದು ತಿಳಿದುಬರುತ್ತದೆ. ರಾಜ್ಯ ಅಥವಾ ಸರ್ಕಾರವೊಂದು ಪ್ರಜೆಗಳ ಹಿತರಕ್ಷಣೆ ಮಾಡುವುದರ ಜೊತೆಗೆ ಪರಕೀಯರ ದಾಳಿಗಳಿಂದ ರಕ್ಷಣೆ ಒದಗಿಸಿ ಕಾನೂನು ವ್ಯವಸ್ಥೆಯ ಮೂಲಕ ಐಕ್ಯತೆಯನ್ನು ಕಾಪಾಡುವಲ್ಲಿ ಯಶಸ್ವಿಯಾಗುತ್ತದೆ.

ರಾಜ್ಯವು ಕಾನೂನುಗಳನ್ನು ರಚಿಸಿಕೊಂಡು ದಂಗೆ ದಾಳಿಗಳನ್ನು ಹತ್ತಿಕ್ಕಿ ರಾಜ್ಯದಲ್ಲಿ ಶಾಂತಿ ನೆಲೆಸುವಂತೆ ನೋಡಿಕೊಳ್ಳುತ್ತದೆ. ಸರ್ಕಾರವು ಪ್ರಜೆಗಳ ಉಪಯೋಗಕ್ಕಾಗಿ ಹಲವು ಸಾಮಾಜಿಕ, ಆರ್ಥಿಕ, ಮತ್ತು ಶೈಕ್ಷಣಿಕ ಯೋಜನೆಗಳನ್ನು ಅನುಷ್ಠಾನಕ್ಕೆ ತರುತ್ತದೆ. ಸರ್ಕಾರವು ಅನಕ್ಷರತೆ, ಬಡತನ, ಅಸಮಾನತೆ ಮತ್ತು ನಿರುದ್ಯೋಗಗಳಂತಹ ಸಮಸ್ಯೆಗಳ ನಿವಾರಣೆಗೆ ವಿವಿಧ ಕಾರ್ಯಯೋಜನೆಗಳನ್ನು ಕೈಗೊಳ್ಳುವುದರ ಜೊತೆಗೆ ಸಂವಿಧಾನವು ಮೂಲಭೂತ ಹಕ್ಕುಗಳನ್ನು ನೀಡಿದೆ.

ರಾಷ್ಟ್ರದ ಪೌರರು ತನ್ನ ದೇಶಕ್ಕಾಗಿ ಕೆಲವು ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಹಕ್ಕು ಮತ್ತು ಕರ್ತವ್ಯಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಂತಿದ್ದು ಪೌರನಿಗೆ ಹಲವು ಪ್ರಯೋಜನಗಳನ್ನು ನೀಡುತ್ತದೆ. ಆದ್ದರಿಂದ ಪೌರನು ತನ್ನ ರಾಷ್ಟ್ರಕ್ಕೆ ಕೆಳಗಿನ ಕೆಲವು ನಿರ್ಬಂಧನೆ ಮತ್ತು ಕಾರ್ಯಗಳನ್ನು ನೆರವೇರಿಸಬೇಕಾಗುತ್ತದೆ.

- ಪೌರನು ಸರ್ಕಾರದ ಕಾನೂನುಗಳಿಗೆ ವಿಧೇಯನಾಗಿದ್ದು ಸಂವಿಧಾನವನ್ನು ಗೌರವಿಸಬೇಕು.
- ಪೌರನು ರಾಷ್ಟ್ರದ ಗೌರವ ಮತ್ತು ಘನತೆಗಳನ್ನು ರಕ್ಷಿಸಿಕೊಂಡು ವಚನಬದ್ಧನಾಗಿರಬೇಕು.
- ಪೌರನು ರಾಷ್ಟ್ರವಿರೋಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬಾರದು.
- ಪೌರನು ಭ್ರಷ್ಟಾಚಾರ, ಪಕ್ಷಪಾತ, ವರದಕ್ಷಿಣೆ, ಬಾಲ್ಯವಿವಾಹ ಇತ್ಯಾದಿ ಅನಿಷ್ಟ ಪದ್ದತಿಗಳನ್ನು ವಿರೋಧಿಸಿ ಅವುಗಳನ್ನು ತಡೆಯಲು ಸಂವಿಧಾನಾತ್ಮಕ ಮಾರ್ಗೋಪಾಯಗಳನ್ನು ಪಾಲಿಸಬೇಕು.

- ಸರ್ಕಾರದ ಗುಣಮಟ್ಟವು ಅಲ್ಲಿನ ಪೌರರ ಗುಣಮಟ್ಟದ ಮೇಲೆ ಅವಲಂಭಿತವಾಗಿರುವುದರಿಂದ ಪೌರರು ರಾಜಕೀಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು.
- ಪೌರನು ತನ್ನ ವೈಯಕ್ತಿಕ ಆಸಕ್ತಿಗಿಂತ ರಾಷ್ಟದ ಆಸಕ್ತಿಯನ್ನು ಎತ್ತಿ ಹಿಡಿದು ರಾಷ್ಟ್ರದ ಪ್ರಗತಿಗಾಗಿ ಶ್ರಮಿಸಬೇಕು. ಪೌರನು ಸ್ವಾರ್ಥಿಯಾಗದೆ ಸೇವಾಮನೋಭಾವನೆಯನ್ನು ರೂಢಿಸಿಕೊಂಡು ದೇಶಕ್ಕಾಗಿ ತ್ಯಾಗಮಾಡುವುದಕ್ಕೂ ಸಿದ್ದನಿರಬೇಕು.
- ಪೌರನು ರಾಷ್ಟ್ರ ರಕ್ಷಣೆ ಹಾಗೂ ತೆರಿಗೆ ಪಾವತಿಸುವ ಜವಾಬ್ದಾರಿಗಳನ್ನು ಹೊಂದಿರಬೇಕು.

ಈ ಮೇಲಿನ ಕಾರ್ಯಗಳ ಜೊತೆಗೆ ಇನ್ನೂ ಅನೇಕ ಕರ್ತವ್ಯಗಳನ್ನು ಸಂವಿಧಾನದಲ್ಲಿ ಸಂಯೋಜನೆಗೊಳಿಸಿ ಕೊಳ್ಳಲಾಗಿದೆ. ಪೌರರಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಪ್ರಜ್ಞೆಯನ್ನು ಜಾಗೃತಗೊಳಿಸುವುದೇ ಮೂಲಭೂತ ಕರ್ತವ್ಯಗಳ ಉದ್ದೇಶವಾಗಿರುತ್ತದೆ. ರಾಷ್ಟ್ರದ ಹಿತದೃಷ್ಟಿಯಿಂದ ಪೌರನು ಯಾವುದನ್ನು ಮಾಡಬೇಕು ಹಾಗೂ ಮಾಡಬಾರದು ಎಂಬುದನ್ನು ತಿಳಿಯಲು ಇದು ಸಹಾಯಕವಾಗಿದೆ. ಪ್ರತಿಯೊಬ್ಬ ಪೌರನೂ ತನ್ನ ಸಮುದಾಯ, ರಾಷ್ಟ್ರ ಮತ್ತು ಸ್ವಂತ ಪ್ರಗತಿಗಾಗಿ ಮೂಲಭೂತ ಕರ್ತವ್ಯಗಳನ್ನು ಪಾಲಿಸಿಕೊಂಡು ಹೋಗಬೇಕಾಗುತ್ತದೆ. ಪೌರ ಹಾಗೂ ಸರ್ಕಾರದ ನಡುವೆ ಸೌಹಾರ್ದ ಸಂಬಂಧ ಇರಬೇಕಾಗುತ್ತದೆ. ಈ ಸಂಬಂಧವು ಕೊಡುಕೊಳ್ಳುವಿಕೆಗಳ ತತ್ವವನ್ನು ಆಧರಿಸಿರಬೇಕು.



ನಮ್ಮ ಸಂವಿಧಾನದ 1976ರ ತಿದ್ದುಪಡಿಯಲ್ಲಿ ಮೂಲಭೂತ ಕರ್ತವ್ಯಗಳನ್ನು ಅಳವಡಿಸಲಾಗಿದೆ. ಸಂವಿಧಾನದ ಪರಿಚ್ಛೇಧ 51(A) ರಲ್ಲಿ ಮೂಲಭೂತ ಕರ್ತವ್ಯಗಳು ಸೇರಿಸಲ್ಪಟ್ಟಿವೆ.

## ಅಭ್ಯಾಸಗಳು

**I ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ಬ್ರಿಟೀಷರ ಆಳ್ವಿಕೆಯಲ್ಲಿ ಭಾರತದಲ್ಲಿ ವಾಸವಿದ್ದ ಜನರನ್ನು ________ ಎಂದು ಕರೆಯಲಾಗುತ್ತದೆ.

2 ನಮ್ಮ ದೇಶದಲ್ಲಿ ಪರದೇಶದವರು ತಾತ್ಕಲಿಕವಾಗಿ ವಾಸವಾಗಿದ್ದರೆ ಅವರನ್ನು ________ ಎಂದು ಕರೆಯಲಾಗುತ್ತದೆ.

3 ಪೌರತ್ವ ಕಾಯಿದೆಯು ಜಾರಿಗೆ ಬಂದ ವರ್ಷ________.

4 ನೀವು ಪೌರತ್ವ ಪಡೆದಿರುವ ವಿಧಾನವೆಂದರೆ________ಆಗಿದೆ.

**II ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.**

1 ಪೌರತ್ವ ಎಂದರೇನು ?

2 ಪೌರ ಅನುಭೋಗಿಸುವ ಲಾಭಗಳಾವುವು?

3 ಭಾರತದಲ್ಲಿ ಪೌರತ್ವದ ಕಾನೂನು ಮತ್ತು ಶಾಸನಗಳನ್ನು ರೂಪಿಸುವ ಅಧಿಕಾರ ಹೊಂದಿರುವ ಅಂಗವನ್ನು ಹೆಸರಿಸಿ.

4 ಪೌರತ್ವ ಪಡೆಯುವ ವಿಧಾನಗಳನ್ನು ತಿಳಿಸಿ.

5 ಪರಕೀಯರ ಪೌರತ್ವ ಸಂಪಾದನೆಯ ವಿಧಾನವನ್ನು ವಿವರಿಸಿ.

6 ಪೌರತ್ವವನ್ನು ಕಳೆದುಕೊಳ್ಳುವ ವಿಧಾನಗಳಾವುವು?

7 ಪೌರತ್ವವನ್ನು ಮುಕ್ತಗೊಳಿಸುವ ಸನ್ನಿವೇಶವೊಂದನ್ನು ತಿಳಿಸಿ.

8 ಪೌರತ್ವದ ವಿಧಗಳನ್ನು ತಿಳಿಸಿ ಹಾಗೂ ಅವುಗಳಿಗಿರುವ ವ್ಯತ್ಯಾಸಗಳನ್ನು ಬರೆಯಿರಿ.

9 ಪೌರನ ಕರ್ತವ್ಯಗಳಾವುವು?

## III ಚಟುವಟಿಕೆಗಳು.

1 ಮೂಲಭೂತ ಹಕ್ಕುಗಳ ಸಚಿತ್ರ ಮಾಲಿಕೆಯೊಂದನ್ನು ತಯಾರಿಸಿ ನಿಮ್ಮ ಶಾಲೆಯಲ್ಲಿ ಪ್ರದರ್ಶಿಸಿ.

2 ನಿಮ್ಮ ಶಿಕ್ಷಕರ ಮಾರ್ಗದರ್ಶನದಡಿಯಲ್ಲಿ ಮೂಲಭೂತ ಹಕ್ಕುಗಳಿಂದಾಗುವ ಅನುಕೂಲತೆಗಳನ್ನು ಚರ್ಚಿಸಿ.

3 ನಿಮ್ಮ ಶಿಕ್ಷಕರ ಮಾರ್ಗದರ್ಶನದಡಿಯಲ್ಲಿ ಸಮಾನತೆಯ ಹಕ್ಕು ಮತ್ತು ಸ್ವಾತಂತ್ರ್ಯದ ಹಕ್ಕುಗಳ ಪ್ರಾಮುಖ್ಯತೆಯನ್ನು ಚರ್ಚಿಸಿ.

4 ಪೌರತ್ವವನ್ನು ಸಂಪಾದಿಸುವ ಮತ್ತು ಕಳೆದುಕೊಳ್ಳುವ ವಿಧಾನಗಳ ಚಿತ್ರಪಟವನ್ನು ತಯಾರಿಸಿ ನಿಮ್ಮ ಶಾಲೆಯಲ್ಲಿ ಪ್ರದರ್ಶಿಸಿ.

5 ಭಾರತದಲ್ಲಿನ ಏಕ ಪೌರತ್ವ ವಿಧಾನದ ಅನುಕೂಲಗಳನ್ನು ಚರ್ಚಿಸಿ.

6 ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿರುವಂತೆ ದ್ವಿಪೌರತ್ವ ನೀತಿಯನ್ನು ಭಾರತದಲ್ಲಿ ಅಳವಡಿಸಿಕೊಂಡರೆ ಅದರಿಂದಾಗುವ ಪ್ರಯೋಜನಗಳನ್ನು ಚರ್ಚಿಸಿ.

## IV ಯೋಜನಾ ಕಾರ್ಯಗಳು.

1 ಮೂಲಭೂತ ಹಕ್ಕುಗಳ ಉಲ್ಲಂಘನೆ ಮತ್ತು ಅವುಗಳಿಗಾಗಿ ಕೈಗೊಂಡ ಪರಿಹಾರ ಕ್ರಮಗಳ ಬಗ್ಗೆ ದಿನ ಪತ್ರಿಕೆ ಮತ್ತು ನಿಯತಕಾಲಿಕಗಳಿಂದ ಮಾಹಿತಿ ಸಂಗ್ರಹಿಸಿ.

2 ಭಾರತೀಯನೊಬ್ಬ ವಿದೇಶದಲ್ಲಿ ತಾತ್ಕಾಲಿಕವಾಗಿ ನೆಲೆಸುವುದಕ್ಕಾಗಿ ಅನುಸರಿಸಬೇಕಾದ ಪ್ರಕ್ರಿಯೆಯ ಬಗ್ಗೆ ಸಂಬಂಧಿಸಿದ ಅಧಿಕಾರಿಯಿಂದ ಮಾಹಿತಿ ಸಂಗ್ರಹಿಸಿ.

## ಅಧ್ಯಾಯ–3

# ಪ್ರಜಾಪ್ರಭುತ್ವ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಪ್ರಜಾಪ್ರಭುತ್ವದ ಅರ್ಥವನ್ನು ತಿಳಿಯುವುದು.
- ವಿವಿಧ ರೂಪದ ಸರಕಾರಗಳನ್ನು ಅರ್ಥೈಸುವುದು.
- ಪ್ರಜಾಪ್ರಭುತ್ವದ ವಿಧಗಳನ್ನು ಗುರುತಿಸಿ, ಇವುಗಳ ನಡುವಿನ ವ್ಯತ್ಯಾಸ ಅರಿಯುವುದು.
- ಪ್ರಜಾಪ್ರಭುತ್ವದ ಲಕ್ಷಣಗಳು, ಯಶಸ್ಸಿನ ಅಂಶಗಳು, ಮತ್ತು ಪ್ರಜಾಪ್ರಭುತ್ವದ ಅನುಕೂಲ ಮತ್ತು ಅನನುಕೂಲಕರವಾದ ಅಂಶಗಳನ್ನು ಗುರುತಿಸುವುದು.
- ಭಾರತದಲ್ಲಿ ಜಾರಿಯಲ್ಲಿರುವ ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ, ಚುನಾವಣಾ ವ್ಯವಸ್ಥೆ, ಬಗ್ಗೆ ತಿಳಿಯುವುದು.
- ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿನ ರಾಜಕೀಯ ಪಕ್ಷಗಳ ಕರ್ತವ್ಯ ಜವಾಬ್ದಾರಿಯನ್ನು ತಿಳಿಯುವುದು.
- ಪ್ರಜಾಪ್ರಭುತ್ವದಲ್ಲಿ ಸಮೂಹ ಮಾಧ್ಯಮಗಳು ಜವಾಬ್ದಾರಿಯನ್ನು ವಿಶ್ಲೇಷಿಸುವುದು.
- 2005 ರ ಮಾಹಿತಿ ಹಕ್ಕು ಕಾಯ್ದೆ ಬಗ್ಗೆ ತಿಳಿಯುವುದು.

ಪ್ರಜಾಪ್ರಭುತ್ವವೆಂಬುದು ಅತ್ಯಂತ ಪುರಾತನ ಸರ್ಕಾರಗಳಲ್ಲೊಂದು. ಪ್ರಾಚೀನ ಭಾರತದಲ್ಲೂ ಪ್ರಜಾಪ್ರಭುತ್ವದ ಹೆಗ್ಗುರುತುಗಳು ಕಾಣಿಸಿವೆ. ಪ್ರಜಾಪ್ರಭುತ್ವ ಮಾದರಿ ಸರ್ಕಾರ ಸ್ಥಾಪನೆಗಾಗಿ ಅನೇಕ ಕ್ರಾಂತಿಗಳು, ದಂಗೆಗಳು ಪ್ರಪಂಚದ ಬೇರೆ ಬೇರೆ ಪ್ರದೇಶಗಳಲ್ಲಿ ನಡೆದಿರುವುದಕ್ಕೆ ಪುರಾವೆಗಳಿವೆ. 'ಡೆಮಾಕ್ರಸಿ' ಎಂಬ ಪದವು ಗ್ರೀಕ್ ಭಾಷೆಯ ಪದವಾದ 'ಡೆಮೋಕ್ರೀಷಿಯಾ' (Demokratia) ಪದದಿಂದ ಉತ್ಪತ್ತಿ ಹೊಂದಿದ್ದು 'ಜನರ ಆಡಳಿತ' ಎಂಬ ಅರ್ಥವನ್ನು ಹೊಂದಿದ್ದಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾವಣೆಗಳು ಮಹತ್ತರ ಪಾತ್ರವಹಿಸುತ್ತವೆ. ಜನರು ತಮ್ಮದೇ ಆದ ಸರ್ಕಾರವನ್ನು ರಚಿಸಿಕೊಳ್ಳಲು ಚುನಾವಣೆಗಳು ಅವಕಾಶಗಳನ್ನು ಒದಗಿಸಿಕೊಡುತ್ತವೆ. ಚುನಾವಣೆಗಳು ಒಬ್ಬ ಪ್ರಜೆ ಒಂದು ಮತ ಎನ್ನುವ ತತ್ವದ ಮೇಲೆ ಕಾರ್ಯವೆಸಗುತ್ತದೆ. ಸರ್ಕಾರವು ಜನರಿಂದ ರಚಿತಗೊಂಡಿದ್ದು ಜನರೆ ನಿರ್ಧಾರ ಕೈಗೊಳ್ಳುವ ಪ್ರಭುಗಳಾಗಿರುತ್ತಾರೆ. ಅಮೆರಿಕಾದ ಮಾಜಿ ಅಧ್ಯಕ್ಷರಾಗಿದ್ದ ಅಬ್ರಹಾಂ ಲಿಂಕನ್‌ರು ಪ್ರಜಾಪ್ರಭುತ್ವವನ್ನು 'ಜನರಿಂದ, ಜನರಿಗಾಗಿ ಮತ್ತು ಜನರಿಗೋಸ್ಕರ ರಚಿತಗೊಂಡ ಸರ್ಕಾರ.' ಎಂದು ವ್ಯಾಖ್ಯಾನಿಸಿದ್ದಾರೆ. ಪ್ರಜಾಪ್ರಭುತ್ವದಲ್ಲಿ ಪರಮಾಧಿಕಾರವನ್ನು ಪ್ರಜೆಗಳೇ ಹೊಂದಿರುತ್ತಾರೆ.

**ವಿವಿಧ ರೂಪದ ಸರ್ಕಾರಗಳು**


ಅಬ್ರಹಂ ಲಿಂಕನ್

**ರಾಜಪ್ರಭುತ್ವ (Monarchy) :** ಚಕ್ರಾಧಿಪತ್ಯ ರೂಪದ ಸರ್ಕಾರವು ಬಹು ಪ್ರಾಚೀನವಾದ ಸರ್ಕಾರ. ರಾಜ ಅಥವಾ ಅರಸ ಈ ಸರ್ಕಾರದ ಅಧಿಪತಿ. ರಾಜನು ಪರಮಾಧಿಕಾರವನ್ನು ಹೊಂದಿರುತ್ತಾನೆ. ಕಾನೂನುಗಳ ನಿರ್ಮಾಪಕ ರಾಜನೇ ಆಗಿರುತ್ತಾನೆ. ಇಂತಹ ಲಕ್ಷಣಗಳುಳ್ಳ ಚಕ್ರಾಧಿಪತ್ಯವನ್ನು 'ನಿರಂಕುಶ ಚಕ್ರಾಧಿಪತ್ಯ' (Absolute Monarchy) ಎಂದು ಕರೆಯಲ್ಪಡುತ್ತದೆ. ಈಗಲೂ ಕೂಡ ಕತಾರ್, ಕುವೈತ್ ಮತ್ತು ಕೆಲ ಮಧ್ಯಪೂರ್ವ ದೇಶಗಳಲ್ಲಿ ನಿರಂಕುಶ ಚಕ್ರಾಧಿಪತ್ಯ ಸರ್ಕಾರಗಳಿರುವುದು ಕಾಣಬರುತ್ತದೆ.

ಈ ಸಮಕಾಲಿನಾವಧಿಯಲ್ಲಿಯೇ ಜಪಾನ್ ಮತ್ತು ಇಂಗ್ಲೆಂಡುಗಳಲ್ಲಿ ಸಂವಿಧಾನಾತ್ಮಕ ಚಕ್ರಾಧಿಪತ್ಯ ಸರ್ಕಾರಗಳು ಆಡಳಿತ ನಡೆಸುತ್ತಿರುವುದನ್ನು ನಾವು ನೋಡಬಹುದಾಗಿದೆ. ಸಂವಿಧಾನಾತ್ಮಕ ಚಕ್ರಾಧಿಪತ್ಯದಲ್ಲಿ ರಾಜ ಅಥವಾ ರಾಣಿ ಸರ್ಕಾರದ ಅಧಿಪತಿಯೆಂದು ನಾಮನಿರ್ದೇಶಕರಾಗಿದ್ದು, ಚುನಾಯಿತ ಮಂಡಳಿಗಳು ಕಾನೂನು ಮತ್ತು ನಿಯಮಗಳನ್ನು ರೂಪಿಸಿ ಆಡಳಿತ ನಿರ್ವಹಿಸುತ್ತವೆ.

**ಸರ್ವಾಧಿಕಾರತ್ವ (Dictatorship) :** ಸರ್ಕಾರದ ಇನ್ನೊಂದು ರೂಪವೆಂದರೆ ಸರ್ವಾಧಿಕಾರಿ ಸರ್ಕಾರವಾಗಿದೆ. ಜರ್ಮನಿಯ ಅಡಾಲ್ಫ್ ಹಿಟ್ಲರ್ ಮತ್ತು ಇಟಲಿಯ ಬೆನಿಟೊ ಮುಸಲೋನಿಯವರುಗಳು ಸರ್ವಾಧಿಕಾರಿ ಸರ್ಕಾರಗಳನ್ನು ಹೊಂದಿದ್ದವರಾಗಿದ್ದರು. ಸರ್ವಾಧಿಕಾರಿ ಸರ್ಕಾರಗಳಲ್ಲಿ ಪಟ್ಟಾಭಿಷಕ್ತನಾಗಿರದ ವ್ಯಕ್ತಿಯೊಬ್ಬನ ಕೈಯಲ್ಲಿ ಸರ್ವ ಅಧಿಕಾರ ಕೇಂದ್ರೀಕೃತವಾಗಿರುತ್ತದೆ. ಸಾಧಾರಣವಾಗಿ ಸರ್ವಾಧಿಕಾರಿಗಳು ಪ್ರಜಾಪ್ರಭುತ್ವದ ಮೌಲ್ಯ ಮತ್ತು ತತ್ವಗಳಿಗೆ ಕನಿಷ್ಠ ಪ್ರಮಾಣದ ಗೌರವ ನೀಡುತ್ತಾರೆ.

**ಸೈನಿಕ ಸರ್ವಾಧಿಕಾರ (Military Dictatorship) :** ಸೈನಿಕ ಸರ್ವಾಧಿಕಾರ ರೂಪದ ಸರ್ಕಾರದಲ್ಲಿ ರಾಜಕೀಯ ಅಧಿಕಾರವು ಸೈನ್ಯದ ಉನ್ನತ ಅಧಿಕಾರಿಯ ಕೈಯಲ್ಲಿರುತ್ತದೆ. ಇಂತಹ ಸರ್ಕಾರಗಳು ಪ್ರಜೆಗಳ ವಾಕ್ ಸ್ವಾತಂತ್ರ್ಯವನ್ನು, ಸರ್ಕಾರದ ಯೋಜನೆಗಳನ್ನು ವಿಮರ್ಶಿಸುವ ಹಾಗೂ ಸಂಘಟನೆಗಳನ್ನು ರಚಿಸಿಕೊಳ್ಳುವ ಹಕ್ಕುಗಳನ್ನು ಕಸಿದುಕೊಳ್ಳುತ್ತವೆ. ಮಾಧ್ಯಮಗಳು ಮತ್ತು ನ್ಯಾಯಾಂಗಗಳು ಸೈನ್ಯದ ಹಿಡಿತದಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಈ ಹಿಂದೆ ಪಾಕಿಸ್ತಾನದಲ್ಲಿಯೂ ಸೈನಿಕ ಸರ್ಕಾರ ಆಡಳಿತ ನಡೆಸಿತ್ತು ಎಂಬುದು ತಿಳಿದಿರುವಂತಹದ್ದಾಗಿದೆ.

**ಕಮ್ಯೂನಿಸ್ಟ್ ಸರ್ಕಾರ (Communist Government) :** ಕಮ್ಯೂನಿಸ್ಟ್ ಸರ್ಕಾರದಲ್ಲಿ ಜನರಿಗೆ ನಿರ್ಬಂಧಿತವಾದ ಸ್ವಾತಂತ್ರ್ಯವಿರುತ್ತದೆ. ಕಮ್ಯೂನಿಸ್ಟ್‌ಪಕ್ಷವನ್ನು ಹೊರತುಪಡಿಸಿ ಬೇರಾವ ರಾಜಕೀಯ ಪಕ್ಷವೂ ಈ ದೇಶದಲ್ಲಿ ಉಳಿಯುವುದಿಲ್ಲ. ಇಂತಹ ಸರ್ಕಾರಗಳು ಖಾಸಗಿ ಒಡೆತನಕ್ಕೆ ಆಸ್ಪದ ಕೊಡುವುದಿಲ್ಲವಾದ್ದರಿಂದ ಉತ್ಪಾದನೆಗೊಂಡ ಎಲ್ಲವೂ ರಾಷ್ಟ್ರೀಕೃತಗೊಳ್ಳುತ್ತದೆ. ಚೀನಾ, ಉತ್ತರ ಕೊರಿಯಾ ಮತ್ತು ಕ್ಯೂಬಾ ದೇಶಗಳಲ್ಲಿ ಕಮ್ಯೂನಿಸ್ಟ್ ಸರ್ಕಾರಗಳು ಆಡಳಿತರೂಢವಾಗಿವೆ.

ಎಲ್ಲಾ ಪ್ರಕಾರದ ಸರ್ಕಾರಗಳು ಗುಣಾವಗುಣಗಳನ್ನು ಹೊಂದಿವೆಯಾದರೂ ಪ್ರಜಾಪ್ರಭುತ್ವ ಮಾದರಿ ಸರ್ಕಾರಗಳು ಅವಗುಣಗಳಿಗಿಂತ ಗುಣಗಳನ್ನೇ ಹೆಚ್ಚು ಹೊಂದಿವೆ. ಪ್ರಜಾಪ್ರಭುತ್ವ ಸರ್ಕಾರಗಳು ಜನಸಾಮಾನ್ಯರ ಬಗ್ಗೆ ಕಾಳಜಿ ಮತ್ತು ಜನಸಾಮಾನ್ಯರು ಹಾಗೂ ಅವರ ಸಾಮರ್ಥ್ಯಗಳ ಬಗ್ಗೆ ಅತ್ಯಂತ ನಂಬಿಕೆಯನ್ನು ಹೊಂದಿರುವುದರಿಂದ ಈ ಸರ್ಕಾರಗಳು ಅತ್ಯಂತ ಜನಪ್ರಿಯ ಸರ್ಕಾರಗಳೆನಿಸಿಕೊಂಡಿವೆ.

**ಪ್ರಜಾಪ್ರಭುತ್ವದ ವಿಧಗಳು :** ಪ್ರಜಾಪ್ರಭುತ್ವದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷ ಪ್ರಜಾಪ್ರಭುತ್ವ ಎಂಬ ಎರಡು ವಿಧಗಳಿವೆ.

**ಪ್ರತ್ಯಕ್ಷ ಪ್ರಜಾಪ್ರಭುತ್ವ (Direct Democracy) :** ಈ ಪ್ರಕಾರದ ಸರ್ಕಾರದಲ್ಲಿ ಜನರು ತಮ್ಮದೇ ಸರ್ಕಾರವನ್ನು ಚುನಾವಣೆ ಮೂಲಕ ರಚಿಸಿಕೊಂಡು ಅವರ ಪ್ರಗತಿಗೆ ಸಹಕಾರಿಯಾಗುವ ನಿಯಮ, ಕಾನೂನುಗಳನ್ನು ರೂಪಿಸಿಕೊಳ್ಳುತ್ತಾರೆ. ಪ್ರತ್ಯಕ್ಷ ಪ್ರಜಾಪ್ರಭುತ್ವ ಮಾದರಿ ಸರ್ಕಾರಗಳನ್ನು ಸಾಧಾರಣವಾಗಿ ಜನಸಂಖ್ಯೆ ಮತ್ತು ವಿಸ್ತೀರ್ಣಗಳಲ್ಲಿ ನಿಯಮಿತ ವ್ಯಾಪ್ತಿಯನ್ನು ಹೊಂದಿರುವ ದೇಶಗಳು ಪಾಲಿಸುತ್ತವೆ. ಈ ವ್ಯವಸ್ಥೆಗಳು ಪ್ರಾಚೀನ ಗ್ರೀಕ್ ಮತ್ತು ಪ್ರಸ್ತುತ ಸ್ವಿಜ್ಜರ್‌ಲೆಂಡ್ ದೇಶಗಳಲ್ಲಿ ಚಾಲ್ತಿಯಲ್ಲಿವೆ. ಪ್ರತ್ಯಕ್ಷ ಪ್ರಜಾಪ್ರಭುತ್ವವು ಪ್ರಜಾಭಿಪ್ರಾಯ ಮತ್ತು ನೇತೃತ್ವದ ಆಧಾರದ ಮೇಲೆ ಪರಿಣಾಮಕಾರಿಯಾಗಬಲ್ಲುದುದಾಗಿದೆ. ಭಾರತದಲ್ಲಿ ಈ ಪ್ರಕಾರದ ಸರ್ಕಾರದ ರಚನೆ ಅದರ ಭೌಗೋಳಿಕ ವ್ಯಾಪ್ತಿ ಮತ್ತು ಜನಸಂಖ್ಯೆ ಪ್ರಮಾಣದಿಂದಾಗಿ ರೂಢಿಸಿಕೊಳ್ಳುವುದು ಅಸಾಧ್ಯವಾದುದಾಗಿದೆ.

**ಪರೋಕ್ಷ ಪ್ರಜಾಪ್ರಭುತ್ವ (Indirect Democracy) :** ಈ ಪ್ರಕಾರದ ಅಂದರೆ ಪರೋಕ್ಷ ಪ್ರಜಾಪ್ರಭುತ್ವ ಮಾದರಿಯ ಸರ್ಕಾರವು ಭಾರತ, ಅಮೇರಿಕಾ ಸಂಯುಕ್ತ ಸಂಸ್ಥಾನಗಳಂತಹ ರಾಷ್ಟ್ರಗಳಿಗೆ ಅತ್ಯಂತ ಸೂಕ್ತವಾದದ್ದಾಗಿದೆ. ಪರೋಕ್ಷ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನರು ತಮ್ಮ ಪ್ರತಿನಿಧಿಗಳನ್ನು ಆವರ್ತಿತ ಚುನಾವಣೆಗಳಲ್ಲಿ ಚುನಾಯಿಸಿ ಶಾಸನ ಸಭೆಗಳಿಗೆ ಕಳುಹಿಸಿಕೊಡುತ್ತಾರೆ. ಚುನಾಯಿತಗೊಂಡ ಈ ಸದಸ್ಯರುಗಳು ಶಾಸನಗಳನ್ನು ಅಥವಾ ಕಾನೂನುಗಳನ್ನು ರೂಪಿಸಿಕೊಂಡು ಆಡಳಿತ ನಿರ್ವಹಣೆ ಮಾಡುತ್ತಾರೆ. ಈ ದೃಷ್ಠಿಯಿಂದ ಪ್ರಜಾಪ್ರಭುತ್ವವನ್ನು ಕಾಲಕಾಲಕ್ಕೆ ನಡೆಯುವ ಚುನಾವಣೆಗಳಲ್ಲಿ ಚುನಾಯಿತಗೊಂಡ ಜನಪ್ರತಿನಿಧಿಗಳ ಸರ್ಕಾರ ಎಂದು ವ್ಯಾಖ್ಯಾನಿಸಬಹುದಾಗಿದೆ. ಹೀಗೆ ಚುನಾಯಿತಗೊಂಡ ಪ್ರತಿನಿಧಿಗಳು ತಮ್ಮ ರಾಷ್ಟ್ರನಾಯಕನನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

**ಪ್ರಜಾಪ್ರಭುತ್ವದ ಲಕ್ಷಣಗಳು**

1. ಪ್ರಜಾಪ್ರಭುತ್ವವು ಜನತೆಯ ಸಮ್ಮತಿಯನ್ನು ಆಧರಿಸಿದೆ. ಇದು ಜನರ ಸರ್ಕಾರ.
2. ಇದು ಪ್ರಾತಿನಿಧಿಕ ಸರ್ಕಾರವಾಗಿದ್ದು, ಜನರು ತಮ್ಮ ಪ್ರತಿನಿಧಿಗಳನ್ನು ಚುನಾಯಿಸುತ್ತಾರೆ. ಪ್ರತಿನಿಧಿಗಳು ಜನರ ಪರವಾಗಿ ಕಾನೂನುಗಳನ್ನು ರಚಿಸುತ್ತಾರೆ.
3. ಇದು ಸಾರ್ವತ್ರಿಕ ವಯಸ್ಕ ಮತದಾನದ ತತ್ವವನ್ನು ಆಧರಿಸಿದೆ.
4. ಇಲ್ಲಿ ಚುನಾವಣೆಗಳು ನಿಗದಿತ ಕಾಲಕ್ಕೆ ನಿಷ್ಪಕ್ಷಪಾತವಾಗಿ ಹಾಗೂ ಮುಕ್ತವಾಗಿ ಚುನಾವಣೆಗಳು ನಡೆಯುತ್ತವೆ.
5. ನಾಗರಿಕರು ಯಾವ ತಾರತಮ್ಯವಿಲ್ಲದೆ ಸ್ವತಂತ್ರವಾಗಿ ಹಾಗೂ ಮುಕ್ತವಾಗಿ ಹಕ್ಕುಗಳನ್ನು ಅನುಭವಿಸುತ್ತಾರೆ. ಆದುದರಿಂದ ಪ್ರಜಾಪ್ರಭುತ್ವದಲ್ಲಿ ವೈಯಕ್ತಿಕ ಅಭಿವೃದ್ಧಿಗೆ ಅವಕಾಶವಿದೆ.

6. ಪ್ರಜಾಪ್ರಭುತ್ವ ಸರ್ಕಾರವು ಜನತೆಗೆ ಸ್ಪಂದಿಸುವ ಸರ್ಕಾರವಾಗಿದೆ.

7. ಸರ್ಕಾರವು ಜನರ ಆಶೋತ್ತರಗಳಿಗೆ ಸ್ಪಂದಿಸದಿದ್ದರೆ, ಅಂತಹ ಸರ್ಕಾರವನ್ನು ಶಾಂತಿಯುತ ಹಾಗೂ ಸಂವಿಧಾನಾತ್ಮಕ ವಿಧಾನಗಳಿಂದ ಬದಲಾಯಿಸುವ ಹಕ್ಕು ಜನತೆಗೆ ಇರುತ್ತದೆ.

8. ಈ ಸರ್ಕಾರದಲ್ಲಿ ಎಲ್ಲಾ ಪ್ರಜೆಗಳು ಕಾನೂನು ದೃಷ್ಟಿಯಲ್ಲಿ ಸಮಾನರು ಎಂಬ ಕಾನೂನಿನ ಆಧಿಪತ್ಯ ತತ್ವವನ್ನು ಅನುಸರಿಸಲಾಗುತ್ತದೆ. ಸರ್ಕಾರದ ಅಧಿಕಾರಗಳು ಸಂವಿಧಾನಾತ್ಮಕ ನಿಯಮಗಳ ಮಿತಿಗೊಳಪಟ್ಟಿವೆ.

9. ರಾಜಕೀಯ ಪಕ್ಷಗಳ ಅಸ್ತಿತ್ವ ಪ್ರಜಾಪ್ರಭುತ್ವದ ಮತ್ತೊಂದು ಲಕ್ಷಣವಾಗಿದೆ. ಜನರು ತಮ್ಮದೇ ಆದ ಪಕ್ಷಗಳನ್ನು ರಚಿಸಿಕೊಳ್ಳಲು ಪ್ರಜಾಪ್ರಭುತ್ವದಲ್ಲಿ ಅವಕಾಶವಿರುತ್ತದೆ.

10. ಪ್ರಜಾಪ್ರಭುತ್ವವು ಪ್ರತಿಯೊಬ್ಬ ವ್ಯಕ್ತಿಯ ಘನತೆಯನ್ನು ಎತ್ತಿಹಿಡಿಯುತ್ತದೆ.

11. ಸಮಾನತೆ ಮತ್ತು ಸ್ವಾತಂತ್ರ್ಯ ಪ್ರಜಾಪ್ರಭುತ್ವದ ಪ್ರಮುಖ ತತ್ವಗಳಾಗಿದೆ. ಜಾತಿ, ಧರ್ಮ, ಲಿಂಗ ಮತ್ತು ಅಂತಸ್ತು ಇವುಗಳ ಆಧಾರದ ಮೇಲೆ ಜನರಲ್ಲಿ ತಾರತಮ್ಯ ಮಾಡುವಂತಿಲ್ಲ.

12. ಪ್ರಜಾಪ್ರಭುತ್ವದಲ್ಲಿ ಅಂತಿಮ ಅಧಿಕಾರ (ಪರಮಾಧಿಕಾರ) ಜನತೆಯಲ್ಲಿದ್ದು, ಸರ್ಕಾರ ಜನರಿಂದ ಅಧಿಕಾರ ಪಡೆಯುತ್ತದೆ. ಈ ಉದ್ದೇಶಕ್ಕಾಗಿ ನಿಗದಿತಕಾಲಕ್ಕೆ ಚುನಾವಣೆಗಳು ನಡೆಯುತ್ತವೆ. ಭಾರತದಲ್ಲಿ ಸಾರ್ವತ್ರಿಕ ಚುನಾವಣೆಗಳು ಐದು ವರ್ಷಕ್ಕೊಮ್ಮೆ ನಡೆಯುತ್ತವೆ.

13. ಪ್ರಜಾಪ್ರಭುತ್ವವು ಕಲ್ಯಾಣ ರಾಜ್ಯವಾಗಿದ್ದು, ಜನರ ಸರ್ವತೋಮುಖ ಅಭಿವೃದ್ಧಿಗಾಗಿ ವಿಶೇಷ ಗಮನಹರಿಸುತ್ತದೆ.

**ಪ್ರಜಾಪ್ರಭುತ್ವದ ಯಶಸ್ಸಿಗೆ ಅವಶ್ಯಕವಾಗುವ ಅಂಶಗಳು**

1. ಪ್ರಜಾಪ್ರಭುತ್ವವನ್ನು ರಕ್ಷಿಸುವ ಮನೋಭಾವ ಜನರಲ್ಲಿರಬೇಕು.

2. ಜನರು ಸದಾ ಜಾಗರೂಕತೆಯಿಂದಿರಬೇಕು.

3. ಪ್ರಜಾಪ್ರಭುತ್ವದ ಯಶಸ್ಸು ಯಾವತ್ತೂ ತಾಳ್ಮೆಯನ್ನು ಅವಲಂಬಿಸಿರುವುದಾಗಿದೆ. ಜನರು ಕೊಡುವ ಹಾಗೂ ತೆಗೆದುಕೊಳ್ಳುವ ತತ್ವಪಾಲಕರಾಗಬೇಕು.

4. ಪ್ರಜಾಪ್ರಭುತ್ವದ ಯಶಸ್ಸು ಉತ್ತಮ ನಾಯಕತ್ವವನ್ನು ಅವಲಂಬಿಸಿರುತ್ತದೆ. ನಾಯಕನಾದವನು ಸಾಮಾನ್ಯ ಪ್ರಜೆಯ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ, ಅವುಗಳಿಗೆ ಪರಿಹಾರ ನೀಡುವ, ಸೇವಾ ಮನೋಭಾವ, ದೇಶಭಕ್ತಿ ಮತ್ತು ತ್ಯಾಗಮಾಡುವ ಗುಣಗಳನ್ನು ಹೊಂದಿರಬೇಕು.

5. ವಿರೋಧ ಪಕ್ಷವು ಆಡಳಿತ ಪಕ್ಷದ ಕಾರ್ಯ ವೈಖರಿಗಳ ಬಗ್ಗೆ ಸದಾ ಎಚ್ಚರಿಕೆಯಿಂದಿದ್ದು ಅವರುಗಳ ಸರ್ವಾಧಿಕಾರಿ ಧೋರಣೆಗಳನ್ನು ನಿಯಂತ್ರಿಸುತ್ತಿರಬೇಕು.

6. ವಿದ್ಯಾವಂತ ಮತ್ತು ಪ್ರಜ್ಞಾವಂತ ಮತದಾರ ಪ್ರಜಾಪ್ರಭುತ್ವದ ಯಶಸ್ಸಿಗೆ ಕಾರಣನಾಗಬಲ್ಲ.

7. ಪ್ರಜಾಪ್ರಭುತ್ವದ ಯಶಸ್ಸು ಜನರ ಮೇಲೆ ಅವಲಂಬಿತವಾಗಿದ್ದು, ಜನರು ಕಡ್ಡಾಯವಾಗಿ ಮತ ಚಲಾಯಿಸಬೇಕು ಮತ್ತು ಜನರು ಭ್ರಷ್ಟ ಹಾಗೂ ಅನಿಷ್ಟ ಮಾರ್ಗಗಳನ್ನು ಅನುಸರಿಸಬಾರದು. ಜನರು ತಮ್ಮ ಸಮಸ್ಯೆಗಳಿಗೆ ಸ್ಪಂದಿಸುವಂತಹ ಯೋಗ್ಯ ಹಾಗೂ ಭ್ರಷ್ಟರಲ್ಲದ ಅಭ್ಯರ್ಥಿಗಳನ್ನು ಚುನಾಯಿಸಬೇಕು.

8. ಸ್ವತಂತ್ರ ನಿರ್ಭಯ, ನಿಷ್ಪಕ್ಷಪಾತ ಪ್ರತಿಕಾ ಮಾಧ್ಯಮ ಪ್ರಜಾಪ್ರಭುತ್ವದ ಯಶಸ್ಸಿಗೆ ಪ್ರಮುಖ ಕಾರಣವಾಗುತ್ತದೆ.

9. ಉತ್ತಮವಾಗಿ ಸಂಘಟಿತವಾದ ಪರಿಣಾಮಕಾರಿ ಮತ್ತು ಜವಾಬ್ದಾರಿಯುತ ಸ್ಥಳೀಯ ಸಂಸ್ಥೆಗಳು ಪ್ರಜಾಪ್ರಭುತ್ವದ ಯಶಸ್ಸಿಗೆ ಕಾರಣವಾಗುತ್ತದೆ.

**ಪ್ರಜಾಪ್ರಭುತ್ವದ ಅನುಕೂಲಗಳು**

ಪ್ರಪಂಚದ ಬಹುತೇಕ ರಾಷ್ಟ್ರಗಳು, ಪ್ರಜಾಪ್ರಭುತ್ವ ಮಾದರಿ ಸರ್ಕಾರಗಳು ಬಹು ಅನುಕೂಲಕಾರಿಯಾದವುಗಳೆಂದು ಸ್ವೀಕರಿಸಿ ಆಚರಣೆಯಲ್ಲಿ ರೂಡಿಸಿಕೊಂಡಿವೆ. ಪ್ರಜಾಪ್ರಭುತ್ವದ ಅನುಕೂಲಗಳು ಈ ಕೆಳಗಿನಂತಿವೆ :

1. ಪ್ರಜಾಪ್ರಭುತ್ವವು ಪ್ರಜೆಗಳ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಸ್ವತಂತ್ರ ನ್ಯಾಯಾಂಗದಡಿಯಲ್ಲಿ ರಕ್ಷಿಸುತ್ತದೆ.
2. ಪ್ರಜಾಪ್ರಭುತ್ವವು ಸಮಾನತೆಯ ತತ್ವಾಧಾರಿತವಾದುದಾಗಿದೆ.
3. ಪ್ರಜಾಪ್ರಭುತ್ವದಲ್ಲಿ ಜನರು ನಿರ್ಧಾರ ಕೈಗೊಳ್ಳುವಲ್ಲಿ ಸ್ವತಃ ಭಾಗಿಯಾಗಿ ಕಾನೂನು ರಚಿಸಿಕೊಳ್ಳುವ ಅವಕಾಶವಿರುತ್ತದೆ.
4. ಜನರು ತಮ್ಮ ಆಯ್ಕೆಯ ಪ್ರತಿನಿಧಿ ಮತ್ತು ಸರ್ಕಾರವನ್ನು ಚುನಾಯಿಸಿಕೊಳ್ಳಬಹುದಾಗಿದೆ.
5. ಪ್ರಜಾಪ್ರಭುತ್ವದಲ್ಲಿ ನಿರ್ಧಾರಕ ತೀರ್ಪುಗಳು ಸಾರ್ವಜನಿಕರ ಅಭಿಪ್ರಾಯ ಮತ್ತು ಚರ್ಚೆಗಳ ಮೂಲಕ ನಿರ್ಧರಿಸಲಾಗುತ್ತವೆ.
6. ವಿರೋಧ ಪಕ್ಷವು ಆಡಳಿತ ಪಕ್ಷದ ದುರುಪಯೋಗವನ್ನು ಪರೀಕ್ಷಿಸಿ ತಡೆಗಟ್ಟುವ ಅವಕಾಶವಿದೆ.
7. ವ್ಯಕ್ತಿಯ ವ್ಯಕ್ತಿತ್ವ ವಿಕಸನಕ್ಕೆ ಮೂಲಭೂತ ಹಕ್ಕು ಅವಕಾಶ ಕಲ್ಪಿಸುತ್ತವೆ.
8. ಪ್ರಜಾಪ್ರಭುತ್ವವು ಶಾಂತಿಯುತವಾಗಿ ಚುನಾವಣೆ ಮೂಲಕ ಸರ್ಕಾರಗಳನ್ನು ಬದಲಿಸಲು ಅವಕಾಶವಿರುವುದರಿಂದ ಕ್ರಾಂತಿಗಳನ್ನು ಪುರಸ್ಕರಿಸುವುದಿಲ್ಲ.
9. ಪ್ರಜಾಪ್ರಭುತ್ವವು ರಾಷ್ಟ್ರೀಯತೆ, ದೇಶಭಕ್ತಿ, ಪ್ರಜಾಗೌರವಗಳನ್ನು ಅಭಿವೃದ್ಧಿಗೊಳಿಸಿ ವಿವಿಧತೆಯಲ್ಲಿ ಏಕತೆಯನ್ನು ಹುಟ್ಟು ಹಾಕುತ್ತದೆ.

**ಪ್ರಜಾಪ್ರಭುತ್ವದ ಅನಾನುಕೂಲಗಳು**

ಪ್ರಜಾಪ್ರಭುತ್ವವು ಕೆಲವೊಂದು ಅನಾನುಕೂಲಗಳಿಂದ ಕೂಡಿದ್ದು, ಆ ಅನಾನುಕೂಲಗಳು ಈ ಕೆಳಗಿನಂತಿವೆ :

1. ಗೌರವಯುತ ಶೈಕ್ಷಣಿಕ ಅರ್ಹತೆ, ನಿರ್ವಹಣಾ ಕೌಶಲ, ಉತ್ತಮನಾಯಕತ್ವದ ಲಕ್ಷಣಗಳು, ಸಾಮಾಜಿಕ, ಆರ್ಥಿಕ, ರಾಜಕೀಯ ಜ್ಞಾನದ ಕೊರತೆ ಅಥವಾ ತಿಳಿವಳಿಕೆಯಿಲ್ಲದಿರುವ ಹಾಗೂ ಸ್ವಾರ್ಥ ಸಾಧನೆಯ ಜನಪ್ರತಿನಿಧಿಗಳಿಂದ ಪ್ರಜಾಪ್ರಭುತ್ವ ದುರ್ಬಲವಾಗುತ್ತದೆ.
2. ಅಧಿಕಾರಕ್ಕಾಗಿ ರಾಜಕೀಯ ಪಕ್ಷಗಳ ನಡುವಿನ ಸ್ಪರ್ದೆಯು ಪಕ್ಷಪಾತ ಮತ್ತು ಭ್ರಷ್ಟಾಚಾರಕ್ಕೆ ಎಡೆ ಮಾಡಿಕೊಡುತ್ತದೆ.
3. ರಾಷ್ಟ್ರದ ಹಿತಾಸಕ್ತಿಗಿಂತ ಪಕ್ಷದ ಹಿತಾಸಕ್ತಿಯೇ ಬಹು ಮುಖ್ಯವಾಗುತ್ತದೆ.
4. ಪಕ್ಷದಿಂದ ಪಕ್ಷಕ್ಕೆ ಪಕ್ಷಾಂತರಗೊಳ್ಳುವ ಕ್ರಿಯೆಯು ಸರ್ಕಾರಗಳನ್ನು ಅಸ್ಥಿರಗೊಳಿಸುತ್ತವೆ.
5. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಜಾತಿಯ ಅಂಶಗಳು, ಮತೀಯ ಅಂಶಗಳು, ಹಣ ಮತ್ತು ತೋಳ್ಬಲ ಪ್ರದರ್ಶನಗಳು ಚುನಾವಣೆಗಳಲ್ಲಿ ಮುಕ್ತವಾಗಿ ಬಳಕೆಯಾಗುವುದರಿಂದ ಸರ್ಕಾರಗಳು ದುರ್ಬಲಗೊಳ್ಳುತ್ತವೆ.
6. ಪ್ರಜಾಪ್ರಭುತ್ವದಲ್ಲಿ ಕಾನೂನು ರೂಪಿಸುವುದು ದೀರ್ಘ ಪ್ರಕ್ರಿಯೆಯಿಂದ ಕೂಡಿದೆ.
7. ಚುನಾವಣೆಗಳನ್ನು ನಡೆಸುವುದು ಅಧಿಕ ವೆಚ್ಚದಾಯಕವಾಗಿದ್ದು, ಚುನಾವಣಾ ಪ್ರಕ್ರಿಯೆಯು ಹೆಚ್ಚು ಕಾಲಾವಕಾಶ ತೆಗೆದುಕೊಳ್ಳುತ್ತದೆ.
8. ಬಹುಮತ ಹೊಂದಿರುವ ಆಡಳಿತ ಪಕ್ಷವು ಸರ್ವಾಧಿಕಾರಿ ಧೋರಣೆ ಹೊಂದಿ ವಿರೋಧ ಪಕ್ಷದ ಅಥವಾ ಇತರ ಅಲ್ಪಸಂಖ್ಯಾತ ಪಕ್ಷಗಳ ಅಭಿಪ್ರಾಯಗಳಿಗೆ ಮನ್ನಣೆ ನೀಡುವುದಿಲ್ಲ.
9. ಅವಿದ್ಯಾವಂತ ಅಥವಾ ಅನಕ್ಷರಸ್ಥ ಬಡವರು ಅಧಿಕಾರಿಷಾಹಿ ಸದಸ್ಯರಿಂದ ಶೋಷಣೆಗೆ ಒಳಗಾಗುವ ಸಾಧ್ಯತೆಗಳು ಕಂಡು ಬರುತ್ತವೆ.
10. ಸಮಾಜದ್ರೋಹಿ ಸಂಘಟನೆಗಳು ತಮ್ಮ ಹಣ ಮತ್ತು ತೋಳ್ಬಲಗಳಿಂದ ಸರ್ಕಾರದ ಮೇಲೆ ಪ್ರಭಾವ ಬೀರುತ್ತವೆ.

**ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ:** ಭಾರತ ಪ್ರತಿನಿಧಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿದ್ದು ಚುನಾವಣೆಗಳು ಈ ನಿಟ್ಟಿನಲ್ಲಿ ಮಹತ್ತರ ಪಾತ್ರ ವಹಿಸುತ್ತವೆ. ಜನರು ಚುನಾವಣೆಗಳಲ್ಲಿ ಮತ ಚಲಾಯಿಸುವ ಹಕ್ಕನ್ನು ಹೊಂದಿದ್ದು, ಭಾರತದಲ್ಲಿ ಈ ಹಕ್ಕನ್ನು 18 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಕರುಗಳು ಜಾತಿ, ಮತ, ವಿದ್ಯಾರ್ಹತೆ, ವರ್ಣ, ವರ್ಗ, ಧಾರ್ಮಿಕತೆ, ಭಾಷೆ, ಲಿಂಗ ಭೇದವಿಲ್ಲದೆ ಚಲಾಯಿಸಬಹುದಾಗಿದೆ.

ಭಾರತದಲ್ಲಿ 1989ಕ್ಕಿಂತ ಹಿಂದೆ ಮತದಾನದ ಕನಿಷ್ಠ ವಯಸ್ಸನ್ನು 21 ವರ್ಷಗಳಿಗೆ ನಿಗದಿಗೊಳಿಸಲಾಗಿತ್ತು. 61ನೇ ಸಂವಿಧಾನ ತಿದ್ದುಪಡಿಯ ಪ್ರಕಾರ 1989ರಿಂದ ಈಚೆಗೆ ಮತದಾನದ ಕನಿಷ್ಠ ವಯಸ್ಸನ್ನು 21 ವರ್ಷಗಳಿಂದ 18 ವರ್ಷಗಳಿಗೆ ಇಳಿಸಲಾಗಿದೆ.

ಉತ್ತಮ ಸರ್ಕಾರದ ರಚನೆ ಪ್ರಜ್ಞಾವಂತ ಮತದಾರನ ಮೇಲೆ ಅವಲಂಬಿತವಾಗಿರುತ್ತದೆ. ಆದ್ದರಿಂದ ಪ್ರಜ್ಞಾವಂತನೆನಿಸಿದ ಮತದಾರನು ಮತ ಚಲಾಯಿಸುವಾಗ ಜಾತಿ, ವರ್ಣ, ಹಣ, ಇತ್ಯಾದಿಗಳ ಶಿಫಾರಸ್ಸುಗಳಿಗೆ ಮಣಿಯದೆ ತನ್ನ ಅಭ್ಯರ್ಥಿಯ ಆಯ್ಕೆಯಲ್ಲಿ ಜಾಗರೂಕವಾಗಿರಬೇಕು. ಮತದಾರನು ಉತ್ತಮ ಗುಣ ಮತ್ತು ಸಾಮರ್ಥ್ಯಗಳನ್ನು ಹೊಂದಿರುವ ಅಭ್ಯರ್ಥಿಯನ್ನು ಆಯ್ಕೆಮಾಡಬೇಕು. ಹಾಗೆ ಆಯ್ಕೆ ಮಾಡುವಾಗ ಈ ಕೆಳಗಿನ ಅಂಶಗಳನ್ನು ಪರಿಗಣಿಸತಕ್ಕದ್ದು.

1. ಅಭ್ಯರ್ಥಿಯು ಸಮಾಜಸೇವೆ ಮಾಡುವ ಇಚ್ಛಾಶಕ್ತಿ ಮತ್ತು ಆಸಕ್ತಿಯನ್ನು ಹೊಂದಿದವನಾಗಿರಬೇಕು.
2. ಅಭ್ಯರ್ಥಿಯು ಜನಪರ ಕಾಳಜಿ ಹೊಂದಿದ್ದು ಜನರು ಆತನನ್ನು ಸುಲಭವಾಗಿ ಸಂಧಿಸುವಂತೆ ಇರಬೇಕು.
3. ಅಭ್ಯರ್ಥಿಯು ವಿದ್ಯಾವಂತನಾಗಿದ್ದು, ನಿಷ್ಠೆ, ಪ್ರಾಮಾಣಿಕತೆ, ಸೇವಾಮನೋಭಾವ ಮತ್ತು ಬದ್ಧತೆ ಹೊಂದಿದವನಾಗಿರಬೇಕು.
4. ಅಭ್ಯರ್ಥಿಯು ಸ್ವಾರ್ಥಿಯಾಗಿರದೆ, ಸೇವೆ ಮತ್ತು ಗುಣಗಳಲ್ಲಿ ಇತರರಿಗೆ ಮಾದರಿಯಂತಿದ್ದು ಭ್ರಷ್ಟಾಚಾರದಿಂದ ದೂರವಿರುವನಾಗಿರಬೇಕು.
5. ನ್ಯಾಯಲಯಗಳು ಅಭ್ಯರ್ಥಿಯನ್ನು ಅಪರಾಧಿ ಎಂದು ಘೋಷಿಸಿರಬಾರದು ಮತ್ತು ಅಪರಾಧಿ ಚಟುವಟಿಕೆಗಳಲ್ಲಿ ಅವನು/ಅವಳು ತೊಡಗಿಸಿಕೊಂಡಿರಬಾರದು.
6. ಅಭ್ಯರ್ಥಿಯು ಸಮಾಜ ದ್ರೋಹ ಮತ್ತು ರಾಷ್ಟ್ರ ದ್ರೋಹ ಚಟುವಟಿಕೆಗಳಲ್ಲಿ ಭಾಗಿಯಾಗಿರಬಾರದು.

**ಚುನಾವಣೆಗಳು**

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾವಣೆಗಳು ಬಹು ಪ್ರಮುಖವಾಗಿದ್ದು, ನಿಯತಕಾಲಿಕವಾಗಿ ನಡೆಯುತ್ತಿರುತ್ತವೆ. ಭಾರತದಲ್ಲಿ ಸಾರ್ವತ್ರಿಕ ಚುನಾವಣೆಗಳು ಪ್ರತಿ ಐದು ವರ್ಷಗಳಿಗೊಮ್ಮೆ ನಡೆದರೆ ಇತರೆ ದೇಶಗಳಲ್ಲಿ ಬೇರೆ ಬೇರೆ ಕಾಲಾವಧಿಯಲ್ಲಿ ನಡೆಯುತ್ತಿವೆ. ಐದು ವರ್ಷಗಳಿಗೊಮ್ಮೆ ನಡೆಯುವ ಚುನಾವಣೆಗಳನ್ನು ಸಾರ್ವತ್ರಿಕ ಚುನಾವಣೆಗಳೆಂದು ಖಾಲಿ ಇರುವ ಸ್ಥಾನಗಳಿಗೆ ಅವಧಿಗಿಂತ ಮುಂಚಿತವಾಗಿ ನಡೆಯುವ ಚುನಾವಣೆಗಳನ್ನು ಮಧ್ಯಂತರ ಚುನಾವಣೆಗಳೆಂದು ಕರೆಯುತ್ತಾರೆ. ಭಾರತ ಸರ್ಕಾರವು ಚುನಾವಣಾ ಆಯೋಗವನ್ನು ರಚಿಸಿದ್ದು, ಇದರ ಪ್ರಧಾನ ಕಛೇರಿ ನವದೆಹಲಿಯಲ್ಲಿದೆ. ಈ ಆಯೋಗದಲ್ಲಿ ಪ್ರಸ್ತುತ ಒಬ್ಬ ಪ್ರಧಾನ ಚುನಾವಣಾ ಆಯುಕ್ತ ಮತ್ತು ಇಬ್ಬರು ಚುನಾವಣಾ ಆಯುಕ್ತರು ರಾಷ್ಟ್ರಪತಿಗಳಿಂದ ನೇಮಕಗೊಂಡು ಕಾರ್ಯನಿರ್ವಹಿಸುತ್ತಿದ್ದಾರೆ. ಸಂಸತ್ತುಷ್ಟು ಜನ ಚುನಾವಣೆ ಆಯುಕ್ತರಿರಬೇಕೆಂದು ತೀರ್ಮಾನಿಸುವ ಅಧಿಕಾರವನ್ನು ಹೊಂದಿರುತ್ತದೆ. ರಾಜ್ಯಮಟ್ಟದಲ್ಲಿ ರಾಜ್ಯ ಚುನಾವಣಾ ಆಯೋಗಗಳಿವೆ. ಇವು ಪಂಚಾಯತ್ ರಾಜ್ಯ ಚುನಾವಣೆಗಳನ್ನು ನಡೆಸುತ್ತದೆ.

**ಚುನಾವಣಾ ಕ್ಷೇತ್ರಗಳು (Constituencies)**

ಚುನಾವಣೆಯ ಉದ್ದೇಶಕ್ಕಾಗಿ ದೇಶ ಮತ್ತು ರಾಜ್ಯವನ್ನು ಚಿಕ್ಕಚಿಕ್ಕ ಚುನಾವಣಾ ವಿಭಾಗಗಳಾಗಿ ವಿಭಾಗಿಸಿ ಅವುಗಳನ್ನು ಚುನಾವಣಾ ಕ್ಷೇತ್ರಗಳೆಂದು ಕರೆಯಲಾಗಿದೆ. ಈ ಚುನಾವಣಾ ಕ್ಷೇತ್ರಗಳು ಜನಸಂಖ್ಯೆ ಆಧಾರಿತವಾಗಿ ವಿಂಗಡನೆಗೊಳ್ಳುತ್ತವೆ. ಒಂದು ಲೋಕಾಸಭಾ ಕ್ಷೇತ್ರ, ಎರಡನೆಯದು ವಿಧಾನಸಭಾ ಚುನಾವಣಾ ಕ್ಷೇತ್ರ. ಚುನಾವಣಾ ಕ್ಷೇತ್ರಗಳಲ್ಲಿ ಎರಡು ವಿಧಗಳು. ಮೊದಲನೆಯದು ಲೋಕಸಭಾ ಚುನಾವಣೆ

ಕ್ಷೇತ್ರಗಳಿಂದ ಆಯ್ಕೆಗೊಂಡ ಅಭ್ಯರ್ಥಿಗಳು ಲೋಕಸಭೆಯ ಸದಸ್ಯರು ಅಥವಾ ಎಂ. ಪಿ. ಗಳೆನಿಸಿಕೊಂಡರೆ, ವಿಧಾನಸಭಾ ಕ್ಷೇತ್ರದಿಂದ ಆಯ್ಕೆಗೊಂಡ ಅಭ್ಯರ್ಥಿಗಳು ರಾಜ್ಯವಿಧಾನ ಸಭೆಯ ಸದಸ್ಯರು ಅಥವಾ ಶಾಸಕ ಅಥವಾ ಎಂ. ಎಲ್. ಎ ಎಂದು ಕರೆಸಿಕೊಳ್ಳುತ್ತಾರೆ. ಈ ಎರಡೂ ಚುನಾವಣಾಕ್ಷೇತ್ರಗಳಲ್ಲಿ ನಿಯಮಾನುಸಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಮತ್ತು ಮಹಿಳಾ ಅಭ್ಯರ್ಥಿಗಳಿಗೆ ಮೀಸಲು ಸ್ಥಾನಗಳಿದ್ದು ಅವುಗಳನ್ನು ಮೀಸಲು ಚುನಾವಣಾಕ್ಷೇತ್ರಗಳೆಂದು ಕರೆಯುತ್ತಾರೆ.

**ಮತದಾರರ ಪಟ್ಟಿ (Voters List)**

ಮತದಾನ ಮಾಡುವವರ ಹೆಸರು ಹಾಗೂ ಕೆಲವು ವಿವರಗಳನ್ನು ಒಳಗೊಂಡಿರುವ ಪಟ್ಟಿಯನ್ನು ಮತದಾರರ ಪಟ್ಟಿ ಎಂದು ಕರೆಯುತ್ತಾರೆ. ಮತದಾರರ ಪಟ್ಟಿಯನ್ನು ಚುನಾವಣಾ ಆಯೋಗವು ಚುನಾವಣೆಗಿಂತ ಮುಂಚಿತವಾಗಿಯೇ ಸಿದ್ಧಪಡಿಸಿಕೊಳ್ಳುತ್ತದೆ. ಕರೆಯುತ್ತಾರೆ. ಮತದಾರರ ಪಟ್ಟಿಯು ಪ್ರತಿ ಐದು ವರ್ಷಗಳಿಗೊಮ್ಮೆ ಪರಿಷ್ಕೃತಗೊಳ್ಳುತ್ತದೆ. ಹೀಗೆ ಪರಿಷ್ಕೃತಗೊಳ್ಳುವ ಸಂದರ್ಭದಲ್ಲಿ ಯಾರಿಗೆ ಹದಿನೆಂಟು (18) ವರ್ಷಗಳು ತುಂಬಿರುತ್ತವೋ ಅವರ ಹೆಸರುಗಳನ್ನು ಪಟ್ಟಿಗೆ ಹೊಸದಾಗಿ ಸೇರ್ಪಡೆ ಮಾಡಿಕೊಂಡು, ಯಾರು ಮರಣ ಹೊಂದಿರುತ್ತಾರೋ ಅಂತಹವರ ಹೆಸರುಗಳನ್ನು ಪಟ್ಟಿಯಿಂದ ತೆಗೆದು ಹಾಕಲಾಗುತ್ತದೆ. ಈ ಚುನಾವಣಾ ಪಟ್ಟಿಯು ಚುನಾವಣಾ ಅಧಿಕಾರಿಗಳು ಮತದಾರರನ್ನು ಮತದಾನದ ವೇಳೆ ಗುರುತಿಸಲು ಸಹಾಯಕವಾಗುತ್ತದೆ.

**ಮತದಾರರ ಭಾವಚಿತ್ರ ಸಹಿತ ಗುರುತಿನ ಚೀಟಿ (EPIC)**

ಮತದಾರನ ಛಾಯಪ್ರತಿಯ ಗುರುತಿನ ಚೀಟಿಗಳನ್ನು (EPIC) ಅರ್ಹ ಮತದಾರನಿಗೆ ಚುನಾವಣಾ ಆಯೋಗದಿಂದ ನೀಡಲ್ಪಟ್ಟಿದ್ದು, ಇದು ಅನ್ಯ ವ್ಯಕ್ತಿಯು ಮತದಾನ ತಡೆಯುವ ಕ್ರಮವಾಗಿದೆ. ಈ ಗುರುತಿನ ಚೀಟಿ ಮತದಾರನ ಗುರ್ತಿಸುವಿಕೆಗೆ ಪುರಾವೆಯಾಗಿ ಬಳಸಲ್ಪಡುತ್ತದೆ. ಮತದಾರನು ಮತದಾನದ ವೇಳೆ ಮತದಾರನ ಗುರುತಿನ ಚೀಟಿ ಅಥವಾ ಇತರೆ ಪುರಾವೆಗಳಾದ ವರಮಾನತೆರಿಗೆ ಇಲಾಖೆ ನೀಡಿದ ಶಾಶ್ವತ ಲೆಕ್ಕ ಸಂಖ್ಯೆಯ ಚೀಟಿ (Permanent Account Number- PANCARD) ಅಥವಾ ಚಾಲನಾ ಪರವಾನಗಿ ಅಥವಾ ರಹದಾರಿ ಪತ್ರ ಅಥವಾ ಸರ್ಕಾರ ಸೂಚಿಸಿದ ಯಾವುದೇ ಗುರುತಿನ ಪುರಾವೆಯನ್ನು ಅಧಿಕಾರಿಗಳಿಗೆ ನೀಡಬೇಕಾಗುತ್ತದೆ.

ಭಾರತ ಸರ್ಕಾರವು ದೇಶದ ಎಲ್ಲಾ ಪೌರರಿಗೂ ಜೈವಿಕ–ಮೀಟರ್ (Bio-Metric)ಮಾನದ ವಿಶಿಷ್ಟ ಗುರುತಿನ ಚೀಟಿಗಳನ್ನು (unique ID) ನೀಡುವ ವ್ಯವಸ್ಥೆಯನ್ನು ಜಾರಿಗೊಳಿಸಿದ್ದು, ಇದನ್ನು **'ಆಧಾರ್'** ಸಂಖ್ಯೆ ಎಂದು ಕರೆಯಲಾಗುತ್ತದೆ.

**ಪ್ರಕಟಣೆ (Notification) :** ಚುನಾವಣಾ ಪ್ರಕ್ರಿಯೆಯು ಪ್ರಕಟಣೆಯೊಂದಿಗೆ ಆರಂಭವಾಗುತ್ತದೆ. ಚುನಾವಣಾ ಆಯೋಗವು ಚುನಾವಣೆಗಳು ನಡೆಯುವ ದಿನಾಂಕ, ವೇಳೆ ಮತ್ತಿತರ ಪೂರ್ಣ ಮಾಹಿತಿಗಳನ್ನು ಪತ್ರಿಕೆಗಳಲ್ಲಿ, ರೇಡಿಯೋ, ದೂರದರ್ಶನ ಮಾಧ್ಯಮಗಳಲ್ಲಿ ಮತ್ತು ಸರ್ಕಾರ ಪ್ರಕಟಿಸುವ ಗೆಜೆಟ್‌ನಲ್ಲಿ ಪ್ರಕಟಿಸುತ್ತದೆ.

**ಅಭ್ಯರ್ಥಿಗಳ ಉಮೇದುವಾರಿಕೆ (Nomination of the Candidates) :** ನಮ್ಮ ದೇಶದಲ್ಲಿ ಪ್ರತಿನಿಧಿತ ಪ್ರಜಾಪ್ರಭುತ್ವ ವ್ಯವಸ್ಥೆಯಿರುವುದರಿಂದ ಜನರಿಗೆ ಚುನಾವಣೆಗೆ ಸ್ಪರ್ಧಿಸುವ ಮತ್ತು ಚುನಾಯಿಸುವ ಹಕ್ಕಿರುತ್ತದೆ. ಚುನಾವಣೆಗೆ ಸ್ಪರ್ಧಿಸಲು ಬಯಸುವ ಅಭ್ಯರ್ಥಿಗಳು ಕೆಲವು ಅರ್ಹತೆಗಳನ್ನು ಪೂರೈಸಬೇಕಾಗುತ್ತದೆ. ಅಭ್ಯರ್ಥಿಗಳು ತಮ್ಮ ಉಮೇದುವಾರಿಕೆಯ ಕಾಗದ ಪತ್ರಗಳನ್ನು ಆ ಉದ್ದೇಶಕ್ಕಾಗಿ ನೇಮಕಗೊಂಡ ಅಧಿಕಾರಿಗೆ ನಿಗದಿತ ವೇಳೆಯೊಳಗೆ ಸಲ್ಲಿಸಬೇಕು. ಅರ್ಜಿಯೊಂದಿಗೆ ನಿರ್ಧಿಷ್ಟ ಮೊತ್ತವನ್ನು **'ಭದ್ರತಾ ಠೇವಣಿ'** ಯ ಹಣ ಎಂದು ಪಾವತಿಸಬೇಕಾಗುತ್ತದೆ.

ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಪ್ರತಿನಿಧಿಯಾಗಿ ಚುನಾವಣೆಯಲ್ಲಿ ಸ್ಪರ್ಧಿಸಲು ಅಭ್ಯರ್ಥಿಯೊಬ್ಬನನ್ನು ಆಯ್ಕೆಮಾಡುತ್ತದೆ. ಅವನಿಗೆ ಪಕ್ಷದ ಅಧಿಕೃತ ಪರವಾನಗಿ ನೀಡುತ್ತದೆ. ಅದನ್ನು ಪಕ್ಷದ ಅಧಿಕೃತ ಪತ್ರ (**Party Ticket**) ಎನ್ನುತ್ತಾರೆ. ಪಕ್ಷದ ಅಧಿಕೃತ ಪತ್ರ ಪಡೆದ ಅಭ್ಯರ್ಥಿಯು ಚುನಾವಣಾ ಪ್ರಚಾರಕ್ಕೆ ಆ ಪಕ್ಷದ ಚಿಹ್ನೆ ಮತ್ತು ಬೆಂಬಲದೊಂದಿಗೆ ಪ್ರಚಾರ ಶಿಬಿರಗಳಲ್ಲಿ ಪಾಲ್ಗೊಂಡು ಮತದಾರರಲ್ಲಿ ಮತಯಾಚಿಸುವ ಅನುಕೂಲವಿದೆ. ಕೆಲವೊಮ್ಮೆ ಅಭ್ಯರ್ಥಿಗೆ ಹೆಚ್ಚು ಮತ ಪಡೆಯುವಂತೆ ಮಾಡುವಲ್ಲಿ, ಅಭ್ಯರ್ಥಿಗಳ ಪಕ್ಷವೆ ಹಾಗೂ ಪಕ್ಷದ ಅಧಿಕೃತ ಪತ್ರ ಪ್ರಧಾನ ಪಾತ್ರ ವಹಿಸುತ್ತದೆ. ಯಾವುದೇ ಪಕ್ಷದಿಂದ ಗುರುತಿಸಲ್ಪಡದಂತಹ ಅಭ್ಯರ್ಥಿಗಳನ್ನು **'ಸ್ವತಂತ್ರ ಅಭ್ಯರ್ಥಿಗಳು'** ಎಂದು ಪರಿಗಣಿಸಿ ಅವರುಗಳಿಗೆ ಚುನಾವಣಾ ಆಯೋಗವು **ವಿವಿಧ ಚಿಹ್ನೆಗಳನ್ನು** ನೀಡುತ್ತದೆ.

**ನಾಮಪತ್ರಗಳ ಪರಿಶೀಲನೆ (Scrutiny of Nomination) :** ಅರ್ಜಿಸಲ್ಲಿಸಲು ಕೊನೆಯ ದಿನಾಂಕ ಮುಗಿದ ನಂತರ ನೇಮಕಗೊಂಡ ಅಧಿಕಾರಿಗಳು ಪ್ರತಿಯೊಬ್ಬ ಅಭ್ಯರ್ಥಿಯ ಉಮೇದುವಾರಿಕೆ ಅರ್ಜಿ ಮತ್ತು ಅದರೊಂದಿಗೆ ಸಲ್ಲಿಸಿರುವ ಅಗತ್ಯ ದಾಖಲೆಗಳನ್ನು ಕಟ್ಟುನಿಟ್ಟಾಗಿ ಪರಿಶೀಲಿಸಿ ಅರ್ಹಗೊಂಡ ಮತ್ತು ಅನರ್ಹಗೊಂಡ ಅಭ್ಯರ್ಥಿಗಳ ಹೆಸರುಗಳನ್ನು ಪ್ರಕಟಣೆ ಮಾಡುತ್ತಾರೆ.

**ಉಮೇದುವಾರಿಕೆ ಹಿಂಪಡೆಯುವಿಕೆ (Withdrawal of Nomination) :** ಅರ್ಹ ಅಭ್ಯರ್ಥಿಗಳ ಪಟ್ಟಿ ಪ್ರಕಟಗೊಂಡ ನಂತರ ಅಭ್ಯರ್ಥಿಗಳು ಬಯಸಿದಲ್ಲಿ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಒಂದು ದಿನಾಂಕವನ್ನು ನಿಗದಿಗೊಳಿಸಿ ಪ್ರಕಟಣೆ ನೀಡಲಾಗುತ್ತದೆ.

**ಚುನಾವಣಾ ಪ್ರಚಾರ :** ಚುನಾವಣಾ ಕಣದಲ್ಲಿರುವ ಅಭ್ಯರ್ಥಿಗಳ ಅಂತಿಮ ಪಟ್ಟಿ ಪ್ರಕಟಗೊಂಡ ನಂತರ ಚುನಾವಣಾ ಪ್ರಚಾರ ಕಾರ್ಯ ಆರಂಭವಾಗುತ್ತದೆ. ಈ ಪ್ರಚಾರ ಕಾರ್ಯವು ಮತದಾನ ದಿನಕ್ಕಿಂತ 48 ಘಂಟೆಗಳ ಮುಂಚಿತವಾಗಿ ಮುಕ್ತಾಯವಾಗುತ್ತದೆ. ಪ್ರಚಾರ ವೇಳೆಯಲ್ಲಿ ರಾಜಕೀಯ ಪಕ್ಷಗಳು ಮತ್ತು ಅಭ್ಯರ್ಥಿಗಳು ತಮ್ಮ ಪಕ್ಷಕ್ಕೆ ಅಥವಾ ತಮಗೆ ಜಯ ತಂದುಕೊಟ್ಟರೆ ಜನರಿಗೆ ಯಾವ ಯಾವ ಸೌಕರ್ಯ ಸವಲತ್ತುಗಳನ್ನು ಪೂರೈಕೆ ಮಾಡುವೆವು ಎಂಬ ಭರವಸೆಗಳನ್ನು ನೀಡುತ್ತಾ ಮತದಾರನನ್ನು ತನ್ನತ್ತ ಸೆಳೆಯುವ ಪ್ರಯತ್ನಮಾಡುತ್ತಾರೆ. ಈ ಭರವಸೆಗಳನ್ನು **'ಚುನಾವಣಾ ಪ್ರಣಾಳಿಕೆ'** (Election Manifesto) ಎಂದು ಕರೆಯುತ್ತಾರೆ. ಈ ಅವಧಿಯಲ್ಲಿ ಸಾರ್ವಜನಿಕ ಸಭೆಗಳು, ಮನೆಮನೆಗೆ ತೆರಳಿ ಮತಯಾಚಿಸುವುದು,

ಧ್ವಜಗಳು, ನಿಶಾನೆಗಳು, ಬಟ್ಟೆಯಿಂದ ತಯಾರಾದ ತೋರಣಗಳು, ಗೋಡೆ ಪತ್ರಿಕೆಗಳು, ಭಿತ್ತಿಪತ್ರಗಳು, ಕರಪತ್ರಗಳು, ಘೋಷಣೆಗಳು ಇತ್ಯಾದಿಗಳು ಸರ್ವೇ ಸಾಮನ್ಯವಾದವುಗಳು. ಪ್ರತಿಯೊಬ್ಬ ಅಭ್ಯರ್ಥಿಯು ಚುನಾವಣಾ ಆಯೋಗ ನಿಗದಿಪಡಿಸಿದ **'ನೀತಿ ಸಂಹಿತೆ'**ಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

**ಮತದಾನದ ದಿನ :** ಮತದಾನದ ದಿನವೆಂದರೆ ಮತದಾರರು ಮತ ಚಲಾಯಿಸಲು ನಿಗದಿಪಡಿಸಿದ ದಿನವೆಂದರ್ಥ. ಆ ದಿವಸದಂದು ಮತದಾರನು ಮತದಾನಕ್ಕೆ ನಿಗದಿಪಡಿಸಿದ ಮತಗಟ್ಟೆ ಕೇಂದ್ರಕ್ಕೆ ಹೋಗಬೇಕಾಗುತ್ತದೆ. ಮತಗಟ್ಟೆ ಎಂದರೆ ಮತದಾನ ಮಾಡುವ ಸ್ಥಳವೆಂದರ್ಥ. ಅಲ್ಲಿ ತರಬೇತಿ ಪಡೆದ ಚುನಾವಣಾ ಅಧಿಕಾರಿಗಳು ನಿಂಯೋಜನೆ ಗೊಂಡಿರುತ್ತಾರೆ. ಮತಗಟ್ಟೆಗಳಲ್ಲಿ ಮತದಾರನ ಗುರುತು ಖಾತ್ರಿಯಾದ ಮೇಲೆ ಅವನಿಗೆ ಮತದಾನಕ್ಕಾಗಿ **'**ಮತ ಪತ್ರ**'** (Ballot Paper) ವನ್ನು ನೀಡುತ್ತಾರೆ. ಈ ಮತಪತ್ರದಲ್ಲಿ ಎಲ್ಲಾ ಅಭ್ಯರ್ಥಿಗಳ ಹೆಸರುಗಳು ಮತ್ತು ಅವರವರ ಹೆಸರುಗಳ ಮುಂದೆ ಅವರವರಿಗೆ ಚುನಾವಣಾ ಅಯೋಗ ನೀಡಿರುವ ಚಿಹ್ನೆಗಳು ಮುದ್ರಿತಗೊಂಡಿರುತ್ತದೆ. ಅನಕ್ಷರಸ್ಥರೂ ಕೂಡ ತಮ್ಮ ಅಭ್ಯರ್ಥಿಯನ್ನು ಆಯ್ಕೆಮಾಡಿಕೊಳ್ಳಲು ಈ ಚಿಹ್ನೆಗಳು ಅನುವುಮಾಡಿಕೊಡುತ್ತವೆ.


**ವಿದ್ಯುನ್ಮಾನ ಮತಯಂತ್ರ**

ಈಗ ವಿದ್ಯುನ್ಮಾನ ಮತಯಂತ್ರಗಳನ್ನು ಹಳೆಯ ಮತ ಪತ್ರಗಳ ಬದಲಿಗೆ ಅಳವಡಿಸಿಕೊಳ್ಳಲಾಗಿದೆ. ಮತದಾರರು ಈ ಯಂತ್ರದಲ್ಲಿ ತಮ್ಮ ಅಭ್ಯರ್ಥಿಯ ಆಯ್ಕೆಯನ್ನು ಅಭ್ಯರ್ಥಿಯ ಹೆಸರಿನ ಮುಂದೆ ಇರುವ ವಿದ್ಯುತ್ ಗುಂಡಿಯನ್ನು ಒತ್ತುವುದರ ಮೂಲಕ ತನ್ನ ಮತವನ್ನು ದಾಖಲಿಸುತ್ತಾನೆ. ಮತದಾನದ ಸಮಯ ಮುಗಿದ ಮೇಲೆ ಈ ಮತ ಪೆಟ್ಟಿಗೆ ಅಥವಾ ಮತಯಂತ್ರವನ್ನು ಸಂಬಂಧಿತ ಕೇಂದ್ರಗಳಿಗೆ ತಲುಪಿಸಲಾಗುತ್ತದೆ.

ಪ್ರತಿ ಒಂದು ಚುನಾವಣಾ ಕ್ಷೇತ್ರದಲ್ಲಿ ಚುನಾವಣಾ ಪ್ರಕ್ರಿಯೆಯನ್ನು ನಿರ್ವಹಿಸುವ ಸಲುವಾಗಿ ಒಬ್ಬ ಅಧಿಕಾರಿಯನ್ನು ಚುನಾವಣಾ ಆಯೋಗವು ನೇಮಿಸುತ್ತದೆ. ಅವನನ್ನು **'**ಚುನಾವಣಾಧಿಕಾರಿ**'** (Returning Officer) ಎಂದು ಕರೆಯಲಾಗುತ್ತದೆ. ಈ ಅಧಿಕಾರಿಯ ಅಧೀನದಲ್ಲಿ ಮತಗಟ್ಟೆಗಳಲ್ಲಿ ಕಾರ್ಯನಿರ್ವಸಲು ಬೇಕಾಗುವ ಚುನಾವಣಾ ಸಿಬ್ಬಂದಿ ನೇಮಕಗೊಳ್ಳುತ್ತದೆ.

**ಮತ ಎಣಿಕೆ :** ಚುನಾವಣೆ ಮುಗಿದ ಮೇಲೆ ನಿಗದಿತ ದಿನದಂದು ಅಭ್ಯರ್ಥಿಗಳು ಮತ್ತು ಅವರ ಮಧ್ಯವರ್ತಿಗಳ ಸಮ್ಮುಖದಲ್ಲಿ ಎಣಿಕೆಗೆ ನೇಮಕಗೊಂಡ ಅಧಿಕಾರಿಗಳಿಂದ ಮತಗಳ ಎಣಿಕೆಯು ನಿರ್ದಿಷ್ಟ ಕೇಂದ್ರದಲ್ಲಿ ನಡೆಯುತ್ತದೆ. ವಿದ್ಯುನ್ಮಾನ ಮತಯಂತ್ರಗಳು ಬಂದ ಮೇಲೆ ಮತ ಎಣಿಕೆಯು ಅತ್ಯಂತ ಸುಲಭವೆನಿಸಿದೆ. ವಿಶೇಷ ಸಂದರ್ಭದಲ್ಲಿ ಮರು ಎಣಿಕೆಗೆ ಅವಕಾಶವಿರುತ್ತದೆ ಹಾಗೂ ಏನಾದರು ಅವ್ಯವಹಾರಗಳು ಕಂಡು ಬಂದಲ್ಲಿ ಅಭ್ಯರ್ಥಿಗಳು ನ್ಯಾಯಾಲಯದ ಮೊರೆ ಹೋಗಬಹುದಾಗಿದೆ. ರಿಟರ್ನಿಂಗ್ ಅಧಿಕಾರಿಯು ಮತ ಎಣಿಕೆಯ ಫಲಿತಾಂಶ ಘೋಷಿಸುತ್ತಾನೆ.

**ರಾಜಕೀಯ ಪಕ್ಷಗಳು :** ಪ್ರಜಾಪ್ರಭುತ್ವ ಮಾದರಿ ಸರ್ಕಾರಗಳಲ್ಲಿ ರಾಜಕೀಯ ಪಕ್ಷಗಳು ಅವಶ್ಯಕ ಮತ್ತು ಅನಿವಾರ್ಯ. ಈ ರಾಜಕೀಯ ಪಕ್ಷಗಳು ಪ್ರತಿನಿಧಿಗಳು, ಸರ್ಕಾರ ಮತ್ತು ಜನ ಸಮುದಾಯದ ನಡುವಿನ ಕೊಂಡಿಯಿದ್ದಂತೆ. ರಾಜಕೀಯ ಪಕ್ಷಗಳು ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗಾಗಿ ನಿಯಮಗಳನ್ನು ಹಾಗೂ ಕಾನೂನುಗಳನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ರಾಜಕೀಯ ಪಕ್ಷಗಳು ಕೆಲವೊಮ್ಮೆ ರಾಜಕೀಯ ಪ್ರವೇಶ ಬಯಸುವವರಿಗೆ ತರಬೇತಿ ಕೇಂದ್ರಗಳಾಗುತ್ತವೆ. ರಾಷ್ಟ್ರಮಟ್ಟದಲ್ಲಿ ಕೇಂದ್ರ ಸಂಸತ್ತಿನ ಕೆಳಮನೆ ಅಥವಾ ಲೋಕಸಭೆ, ರಾಜ್ಯಮಟ್ಟದಲ್ಲಿ ಕೆಳಮನೆ ಅಥವಾ ವಿಧಾನಸಭೆಯಲ್ಲಿ ಬಹುಮತ ಹೊಂದಿರುವ ರಾಜಕೀಯ ಪಕ್ಷವು ಸರ್ಕಾರ ರಚಿಸುತ್ತವೆ. ಯಾವ ಪಕ್ಷ ಸರ್ಕಾರ ರಚಿಸಿಕೊಳ್ಳುತ್ತದೆಯೋ ಆ ಪಕ್ಷವನ್ನು 'ಆಡಳಿತ ಪಕ್ಷ' ಎನ್ನುತ್ತಾರೆ. ಎರಡನೇ ಸ್ಥಾನದಲ್ಲಿ ಬಹುಮತ ಪಡೆದ ಪಕ್ಷವು 'ವಿರೋಧ ಪಕ್ಷ' ಎಂದು ಕರೆಸಿಕೊಂಡು ಆಡಳಿತ ಪಕ್ಷದ ಚಟುವಟಿಕೆಗಳ ವಿಮರ್ಶೆಮಾಡುವ ಅಧಿಕಾರ ಹೊಂದಿರುತ್ತದೆ. ಉಳಿದ ಸಣ್ಣ ಸಣ್ಣ ಪಕ್ಷಗಳು ಹಾಗೂ ಸ್ವತಂತ್ರ ಅಭ್ಯರ್ಥಿಗಳು ಸಮಯ ಬಂದಾಗ ತಮ್ಮ ಸ್ವ ಇಚ್ಛೆಯಿಂದ ಆಡಳಿತ ಅಥವಾ ವಿರೋಧ ಪಕ್ಷವನ್ನು ಬೆಂಬಲಿಸುವ ಅಧಿಕಾರ ಹೊಂದಿವೆ.

**ರಾಷ್ಟ್ರೀಯ ಪಕ್ಷಗಳು :** ಭಾರತದಲ್ಲಿ ಹಲವು ರಾಜಕೀಯ ಪಕ್ಷಗಳಿದ್ದು ಅವುಗಳನ್ನು ರಾಷ್ಟ್ರೀಯ ರಾಜಕೀಯ ಪಕ್ಷಗಳು ಮತ್ತು ಪ್ರಾಂತೀಯ ರಾಜಕೀಯ ಪಕ್ಷಗಳು ಎಂದು ವರ್ಗೀಕರಿಸಬಹುದಾಗಿದೆ. ರಾಷ್ಟ್ರೀಯ ರಾಜಕೀಯ ಪಕ್ಷಗಳು ನಮ್ಮ ದೇಶದ ಹಲವಾರು ರಾಜ್ಯಗಳಲ್ಲಿ ತಮ್ಮ ಶಾಖೆಗಳನ್ನು ಹೊಂದಿರುವುದು ಕಂಡು ಬರುತ್ತದೆ. ಈ ರಾಷ್ಟ್ರೀಯ ಪಕ್ಷಗಳು ಕೇಂದ್ರದ ಲೋಕಸಭೆ ಮತ್ತು ರಾಜ್ಯದ ವಿಧಾನಸಭೆಗಳಲ್ಲಿ ಗೌರವಯುತವಾದ ಸಂಖ್ಯೆಯ ಪ್ರತಿನಿಧಿಗಳನ್ನು ಹೊಂದಿರುತ್ತವೆ. ರಾಷ್ಟ್ರಮಟ್ಟದ ರಾಜಕೀಯ ಪಕ್ಷಗಳಿಗೆ ಚುನಾವಣಾ ಆಯೋಗವು ಮಾನ್ಯತೆ ನೀಡುತ್ತದೆ. ರಾಷ್ಟ್ರೀಯ ಕಾಂಗ್ರೆಸ್ ಪಕ್ಷ, ಭಾರತೀಯ ಜನತಾ ಪಕ್ಷ, ಸಮತಾವಾದಿ ಪಕ್ಷ, ಇತ್ಯಾದಿಗಳು ರಾಷ್ಟ್ರೀಯ ಪಕ್ಷಗಳಾಗಿದ್ದು ತಮ್ಮದೇ ಆದ ಪಕ್ಷದ ಚಿಹ್ನೆಗಳನ್ನು ಹೊಂದಿ ಗುರುತಿಸಿಕೊಂಡಿವೆ.

**ಪ್ರಾದೇಶಿಕ ರಾಜಕೀಯ ಪಕ್ಷಗಳು :** ಪ್ರಾದೇಶಿಕ ರಾಜಕೀಯ ಪಕ್ಷಗಳನ್ನು ರಾಜ್ಯಗಳ ರಾಜಕೀಯ ಪಕ್ಷಗಳೆಂತಲೂ ಕರೆಯುತ್ತಾರೆ. ವಿಧಾನ ಸಭೆಯಲ್ಲಿ ಗಣನೀಯ ಸಂಖ್ಯೆಯ ಅಭ್ಯರ್ಥಿಗಳನ್ನು ಅಥವಾ ಸದಸ್ಯರನ್ನು ಹೊಂದಿರುವ ರಾಜ್ಯ ಪಕ್ಷಗಳನ್ನು ಪ್ರಾದೇಶಿಕ ಪಕ್ಷಗಳೆಂದು ಮಾನ್ಯ ಮಾಡುತ್ತಾರೆ. ಹಲವಾರು ರಾಜ್ಯಗಳಲ್ಲಿ ಪ್ರಾದೇಶಿಕ ಪಕ್ಷಗಳು ತಮ್ಮ ವರ್ಚಸ್ಸಿನಿಂದಾಗಿ ಬಹುಮತ ಪಡೆದು ಸರ್ಕಾರ ರಚಿಸಿಕೊಂಡಿರುತ್ತವೆ. ಪ್ರಾದೇಶಿಕ ರಾಜಕೀಯ ಪಕ್ಷಗಳು ಸರ್ಕಾರ ರಚಿಸಿಕೊಂಡು ಆಡಳಿತ ನಡೆಸಿದ್ದಕ್ಕೆ ಉದಾಹರಣೆಯಾಗಿ ತಮಿಳುನಾಡಿನ ಡಿ.ಎಂ.ಕೆ ಮತ್ತು ಎ.ಐ.ಎ.ಡಿ.ಎಂ.ಕೆ ಪಕ್ಷ, ಅಸ್ಸಾಂನ ಅಸ್ಸಾಂಗಣ ಪರಿಷತ್, ಆಂದ್ರಪ್ರದೇಶದ ತೆಲುಗು ದೇಶಂ ಪಕ್ಷ, ಮಹಾರಾಷ್ಟ್ರದ ಶಿವಸೇನಾ ಪಕ್ಷ, ಕರ್ನಾಟಕದ ಜನತಾದಳ (ಜಾತ್ಯತೀತ) ಪಕ್ಷ ಮತ್ತು ಸಮಾಜವಾದಿ ಪಕ್ಷಗಳು ಪ್ರಮುಖವಾಗಿವೆ. ಈ ಎಲ್ಲಾ ಪ್ರಾದೇಶಿಕ ಪಕ್ಷಗಳು ತಮ್ಮವೇ ಆದ ಪಕ್ಷದ ಚಿಹ್ನೆಯನ್ನು ಹೊಂದಿರುತ್ತವೆ.

ಪ್ರಾದೇಶಿಕ ಪಕ್ಷಗಳು ಲೋಕಸಭೆಯಲ್ಲೂ ತನ್ನ ಪ್ರತಿನಿಧಿಗಳನ್ನು ಹೊಂದಿರಬಹುದು. ಯಾವುದೇ ಪಕ್ಷಕ್ಕೆ ಸ್ಪಷ್ಟ ಬಹುಮತ ದೊರಕದಿದ್ದ ಪಕ್ಷದಲ್ಲಿ ಸರ್ಕಾರದ ರಚನೆಯಲ್ಲಿ ಪ್ರಾದೇಶಿಕ ಪಕ್ಷಗಳು ಅತ್ಯಂತ ಪ್ರಮುಖ ಪಾತ್ರವಹಿಸುತ್ತಿರುವುದನ್ನು ನಾವೆಲ್ಲರೂ ಕೇಂದ್ರ ಮತ್ತು ರಾಜ್ಯಸರ್ಕಾರಗಳಲ್ಲಿ ಕಾಣುತ್ತಿದ್ದೇವೆ.

**ಸಮ್ಮಿಶ್ರ ಸರ್ಕಾರಗಳು :** ಇತ್ತೀಚಿನ ದಿನಗಳಲ್ಲಿ ಹಲವಾರು ಪಕ್ಷಗಳು ಅಧಿಕಾರಕ್ಕಾಗಿ ಚುನಾವಣೆಗಳಲ್ಲಿ ಭಾಗವಹಿಸುತ್ತಿವೆ. ಯಾವುದಾದರೊಂದು ಪಕ್ಷ ಸ್ಪಷ್ಟ ಬಹುಮತ ಪಡೆದರೆ ಅಂತಹ ಪಕ್ಷ ಸರ್ಕಾರ ರಚಿಸಿ ಆಡಳಿತ ನಡೆಸಿಕೊಂಡು ಹೋಗುತ್ತದೆ. ಎಷ್ಟೋ ಸಂದರ್ಭದಲ್ಲಿ ಯಾವ ಪಕ್ಷಕ್ಕೂ ಸರ್ಕಾರ ರಚನೆಗೆ ಬೇಕಿರುವ ಸ್ಪಷ್ಟ ಬಹುಮತ ಬರುವುದಿಲ್ಲ. ಅಂತಹ ಸಂದರ್ಭವನ್ನು "ಅತಂತ್ರ ಲೋಕಸಭೆ ಅಥವಾ

ಅತಂತ್ರ ವಿಧಾನಸಭೆ" (Hung Parliament or Assembly) ಎನ್ನಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಕೆಲವು ಪಕ್ಷಗಳು ಸಂಯೋಜನೆಗೊಂಡು ಅವಶ್ಯವಿರುವ ಸದಸ್ಯ ಬಲವನ್ನು ಸಾಬೀತುಪಡಿಸಿ ಸರ್ಕಾರ ರಚಿಸಿಕೊಳ್ಳುತ್ತವೆ. ಈ ಪ್ರಕಾರದ ಮೈತ್ರಿಗೆ 'ಮತದಾನೋತ್ತರ ಮೈತ್ರಿ' (Post-Poll alliance) ಎನ್ನುತ್ತಾರೆ. ಕೆಲವೊಮ್ಮೆ ಚುನಾವಣೆಗೆ ಮುಂಚಿತವಾಗಿಯೆ ಎರಡು ಅಥವಾ ಎರಡಕ್ಕಿಂತ ಹೆಚ್ಚು ಪಕ್ಷಗಳು ಕೂಡಿಕೊಂಡು ಸ್ಥಾನ ಹಂಚಿಕೆಯನ್ನು ಮಾಡಿಕೊಂಡು ಚುನಾವಣೆಗೆ ಜಂಟಿಯಾಗಿ ಸ್ಪರ್ಧಿಸುತ್ತವೆ. ಈ ಪ್ರಕಾರದ ಮೈತ್ರಿಯನ್ನು 'ಮತದಾನ ಪೂರ್ವ ಮೈತ್ರಿ' (Pre-Poll alliance) ಎಂದು ಕರೆಯುತ್ತಾರೆ. ಈ ಎರಡೂ ಪ್ರಕಾರದ ಮೈತ್ರಿಗಳು ಯಾವಾಗ ಅತಂತ್ರ ಸ್ಥಿತಿ ಉಂಟಾಗುತ್ತದೆಯೋ ಆ ಸಂದರ್ಭದಲ್ಲಿ ಸರ್ಕಾರ ರಚಿಸಿಕೊಳ್ಳಲು ಸಹಕಾರಿಯಾಗುತ್ತವೆ. ಈ ಪ್ರಕಾರವಾಗಿ ಎರಡಕ್ಕಿಂತ ಹೆಚ್ಚು ಪಕ್ಷಗಳ ಸಹಕಾರದಿಂದ ರಚಿತಗೊಂಡ ಸರ್ಕಾರವನ್ನು 'ಸಮ್ಮಿಶ್ರ ಸರ್ಕಾರ' ಎಂದು ಕರೆಯುತ್ತಾರೆ. ಸಮ್ಮಿಶ್ರ ಸರ್ಕಾರದಲ್ಲಿ ಮೈತ್ರಿ ಹೊಂದಿದ ಪಕ್ಷಗಳು ಮಂತ್ರಿಮಂಡಲದಲ್ಲಿ ತಮ್ಮ ತಮ್ಮ ಪಾಲುಗಳನ್ನು ಹಂಚಿಕೊಳ್ಳುತ್ತಾರೆ. ಕೆಲವೊಮ್ಮೆ ಮೈತ್ರಿಕೂಟದ ಪಕ್ಷವು ಅಧಿಕಾರದಲ್ಲಿ ಪಾಲು ಪಡೆಯದೆ ಪ್ರಮುಖ ಪಕ್ಷವೊಂದನ್ನು ಬೆಂಬಲಿಸಿದಾಗ ಅಂತಹ ಸಂದರ್ಭವನ್ನು 'ಬಾಹ್ಯ ಬೆಂಬಲ' ಎಂದು ಕರೆಯುತ್ತಾರೆ. ಸುಮಾರು 1989 ನೇ ಇಸವಿಯಿಂದ ಲೋಕಸಭೆ ಮತ್ತು ಕೆಲವು ವಿಧಾನಸಭೆಗಳಲ್ಲಿ ಅತಂತ್ರ ಸರ್ಕಾರಗಳು ಉಂಟಾಗಿರುವುದು ಸಾಮಾನ್ಯವಾಗಿದೆ.

**ಸಾರ್ವಜನಿಕ ಅಭಿಪ್ರಾಯ :** ಸಾಮಾನ್ಯ ಪ್ರಜೆಯೊಬ್ಬ ತನಗೆ ಸಂಬಂಧಿಸಿದ ನಿರ್ದಿಷ್ಟ ವಿಷಯವೊಂದಕ್ಕೆ ತನ್ನ ಅಭಿಪ್ರಾಯವನ್ನು ಅಭಿವ್ಯಕ್ತಿಗೊಳಿಸುವುದೇ ಸಾರ್ವಜನಿಕ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವು ಬಹುಜನರ ಅಥವಾ ರಾಜಕೀಯ ವ್ಯಕ್ತಿಗಳ ಅಭಿಪ್ರಾಯವೇನಲ್ಲ. ಸರ್ಕಾರವು ಸಾರ್ವಜನಿಕರ ಅಭಿಪ್ರಾಯಗಳ ಆಧಾರದ ಮೇಲೆ ನಿಯಮಗಳನ್ನು ರೂಪಿಸುತ್ತದೆ. ಇಂತಹ ಸಾರ್ವಜನಿಕ ಅಭಿಪ್ರಾಯಗಳು ವಿಷಯಾಧಾರಿತವಾಗಿ ಕಾಲಕಾಲಕ್ಕೆ ಬದಲಾಗುವ ಸಾಧ್ಯತೆಗಳಿವೆ. ಸಾರ್ವಜನಿಕರು ಘಟನೆಯೊಂದರ ಬಗ್ಗೆ ಜಾಗೃತಿ ಹೊಂದಿದ್ದು ಅದರ ಬಗ್ಗೆ ತಮ್ಮ ಅಭಿಪ್ರಾಯವನ್ನು ಸ್ವತಂತ್ರವಾಗಿ ಯಾವುದೇ ಹೆದರಿಕೆ ಅಥವಾ ಪೂರ್ವಾಗ್ರಹವಿಲ್ಲದೆ ವ್ಯಕ್ತಪಡಿಸಬಹುದಾಗಿದೆ. ಸರ್ಕಾರ ಮತ್ತು ರಾಜಕೀಯ ಪಕ್ಷಗಳು ಸಾರ್ವಜನಿಕ ಅಭಿಪ್ರಾಯಗಳನ್ನು ಪ್ರೋತ್ಸಾಹಿಸುತ್ತವೆ. ರೇಡಿಯೊ, ದೂರದರ್ಶನ, ವೃತ್ತಪತ್ರಿಕೆಗಳು, ನಿಯತಕಾಲಿಕಗಳು ಅಂತರ್ಜಾಲ ಮುಂತಾದ ಮಾಧ್ಯಮಗಳು ಸಾರ್ವಜನಿಕ ಅಭಿಪ್ರಾಯವನ್ನು ಹಂಚಿಕೊಳ್ಳಲು ನೆರವಾಗಿವೆ.

**ಮಾಧ್ಯಮ ಮತ್ತು ಪ್ರಜಾಪ್ರಭುತ್ವ :** ಪ್ರಸ್ತುತ ದಿನಂಪ್ರತಿ ಘಟಿಸುತ್ತಿರುವ ಘಟನೆಗಳ ಮಾಹಿತಿಗಳನ್ನು ಮಾಧ್ಯಮವು ಒದಗಿಸುತ್ತಿದೆ. ಮಾಧ್ಯಮಗಳು ಸರ್ಕಾರದ ಯೋಜನೆಗಳು ಮತ್ತು ನಿಯಮಗಳನ್ನು ಜನರು ತಿಳಿಯುವಂತೆ ಮಾಡುತ್ತವೆ. ಮಾಧ್ಯಮಗಳು ಸರ್ಕಾರದ ಕಾರ್ಯವೈಖರಿಯ ಬಗ್ಗೆ ಜನರಿಗೆ ಮಾಹಿತಿ ನೀಡುವುದರ ಜೊತೆ ಪ್ರಮುಖ ಸಂಗತಿಗಳ ಬಗೆಗಿನ ಜನಸಾಮಾನ್ಯರ ಅಭಿಪ್ರಾಯವನ್ನು ಸರ್ಕಾರ ಗಮನಿಸುವಂತೆ ಮಾಡುತ್ತದೆ. ಜನಸಾಮನ್ಯರಿಂದ ಎತ್ತಲ್ಪಟ್ಟ ವಿಷಯಗಳಿಗೆ ಜನಪ್ರತಿನಿಧಿಗಳು ಉತ್ತರಿಸುವಂತೆ ಮತ್ತು ಜವಾಬ್ದಾರರಾಗುವಂತೆ ಮಾಧ್ಯಮಗಳು ನೋಡಿಕೊಳ್ಳುತ್ತವೆ. ಆದಕಾರಣ ಮಾಧ್ಯಮವು ಯಾವತ್ತೂ ಸತ್ಯವಾದ, ಭೀತಿಯಿಲ್ಲದ, ಪಕ್ಷಪಾತವಿಲ್ಲದ ಅಭಿಪ್ರಾಯಗಳನ್ನು ದೊರಕಿಸಿಕೊಡಬೇಕೆ ಹೊರತು ಸೂಕ್ಷ್ಮ ವಿಚಾರಗಳನ್ನು ವೈಭವೀಕರಿಸಿ ಭಯದ ವಾತಾವರಣ ಸೃಷ್ಟಿಸಬಾರದು. ಮಾಧ್ಯಮವು ಸಂಗತಿಗಳನ್ನು ಬಿತ್ತರಿಸುವಾಗ ಐಕ್ಯತೆ, ಜಾತ್ಯತೀತತೆ, ಪ್ರಜಾಪ್ರಭುತ್ವದ ತತ್ವಗಳಿಗೆ ಹಾನಿಯುಂಟಾಗದಂತೆ ಎಚ್ಚರವಹಿಸಬೇಕು.

ಪತ್ರಿಕಾ ಮಾಧ್ಯಮವು ದಿನಪತ್ರಿಕೆಗಳು ಮತ್ತು ನಿಯತಕಾಲಿಕೆಗಳನ್ನು ಒಳಗೊಂಡಿದ್ದು, ಭಾರತದಲ್ಲಿ ಈ ದಿನಪತ್ರಿಕೆಗಳು ಮತ್ತು ನಿಯತಕಾಲಿಕೆಗಳು ಕಡ್ಡಾಯವಾಗಿ ದಿನ ಪತ್ರಿಕಾ ನೋಂದಣಿ (Registrar of News Papers ) ಕಛೇರಿಯಲ್ಲಿ ನೋಂದಾಯಿಸಿಕೊಂಡಿರತಕ್ಕದ್ದು. ದಿನಪತ್ರಿಕೆಗಳ ಗುಣಮಟ್ಟ ಹೆಚ್ಚಿಸಲು ಮತ್ತು ಪತ್ರಿಕಾ ಸ್ವಾತಂತ್ರ್ಯ ರಕ್ಷಣೆಗಾಗಿ 'ಭಾರತೀಯ ಪತ್ರಿಕಾ ಪರಿಷತ್ತು' (Press Council of India) ಎಂಬ ಸಂಸ್ಥೆಯನ್ನು ಭಾರತದಲ್ಲಿ ಸ್ಥಾಪಿಸಲಾಗಿದೆ.

ಮಾಧ್ಯಮಕ್ಷೇತ್ರದಲ್ಲಿ ದೂರದರ್ಶನ, ರೇಡಿಯೋ, ಅಂತರ್ಜಾಲ ಇತ್ಯಾದಿ ವಿದ್ಯುನ್ಮಾನ ಮಾಧ್ಯಮಗಳೂ ಸೇರ್ಪಡೆಗೊಂಡಿವೆ. ಈ ವಿದ್ಯುನ್ಮಾನ ಮಧ್ಯವರ್ತಿಗಳು 1962 ರ ಬಾನುಲಿ ಪ್ರಸರಣ ಸಂಹಿತೆಯಡಿ ಕಾರ್ಯನಿರ್ವಹಿಸುತ್ತಿದ್ದು ಜನಸಾಮಾನ್ಯರು, ಅಧಿಕಾರಿಗಳು ಮತ್ತು ಇತರೆ ನಾಯಕರುಗಳು ಅನೇಕ ಪ್ರಸಂಗಗಳಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟಿವೆ.

**ಮಾಹಿತಿ ಹಕ್ಕು :** ಭಾರತ ದೇಶದಲ್ಲಿ ಮಾಹಿತಿ ಹಕ್ಕು ಕಾಯಿದೆಯನ್ನು 2005 ರಲ್ಲಿ ಜಾರಿಗೊಳಿಸಲಾಗಿದೆ. ಈ ಕಾಯ್ದೆಯ ಮುಖ್ಯ ಉದ್ದೇಶವೇನೆಂದರೆ ಸಾರ್ವಜನಿಕ ಜೀವನದಲ್ಲಿ ಭ್ರಷ್ಟಾಚಾರ ನಿರ್ಮೂಲನೆ, ಆಡಳಿತದಲ್ಲಿ ಪಾರದರ್ಶಕತೆ ತರುವುದು ಹಾಗೂ ಸರ್ಕಾರವನ್ನು ಪ್ರಜೆಗಳಿಗೆ ಜವಾಬ್ದಾರಯುತವಾಗಿರುವಂತೆ ಮಾಡುವುದು. ಜನಸಾಮಾನ್ಯರು ಒಂದು ಅರ್ಜಿಯ ಮೂಲಕ ಸರ್ಕಾರದಿಂದ ತಮಗೆ ಬೇಕಾದ ಮಾಹಿತಿಯನ್ನು ಪಡೆದುಕೊಳ್ಳುವ ಅವಕಾಶವನ್ನು ಈ ಕಾಯಿದೆ ಒದಗಿಸಿಕೊಟ್ಟಿದೆ. ಸಂಬಂಧಪಟ್ಟ ಅಧಿಕಾರಿಯು ಮಾಹಿತಿ ಬಯಸಿದವರಿಗೆ ಮಾಹಿತಿಯನ್ನು ಅರ್ಜಿಸಲ್ಲಿಸಿದ ಮೂವತ್ತು ದಿವಸಗಳೊಳಗೆ ರವಾನಿಸಬೇಕಾಗುತ್ತದೆ. ಜೀವನ ಮತ್ತು ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ನಲವತ್ತೆಂಟು ಘಂಟೆಗಳೊಳಗೆ ನೀಡಬೇಕಾಗುತ್ತದೆ. ಆದಾಗ್ಯೂ ವ್ಯಕ್ತಿ ಬಯಸಿದ ಮಾಹಿತಿಯು ರಾಷ್ಟ್ರದ ರಕ್ಷಣೆ, ಭದ್ರತೆ, ಐಕ್ಯತೆಗಳಿಗೆ ಸಂಬಂಧಪಟ್ಟಿದ್ದರೆ ಸರ್ಕಾರ ಮಾಹಿತಿ ನೀಡುವಿಕೆಯನ್ನು ತಿರಸ್ಕರಿಸಬಹುದಾಗಿದೆ.

## ಅಭ್ಯಾಸಗಳು

**I ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ಡೆಮಾಕ್ರಸಿ ಎಂಬ ಪದವು ____________ ಪದದ ಉತ್ಪತ್ತಿಯಾಗಿದೆ.

2 ವಿಧಾನಸಭೆಯಲ್ಲಿ ಪಕ್ಷವೊಂದು ಬಹುಮತವನ್ನು ಸಾಬೀತುಪಡಿಸಿ ಆಡಳಿತದ ಕಡೆ ಗಮನಹರಿಸಿದರೆ ಆ ಪಕ್ಷವನ್ನು ____________ ಪಕ್ಷವೆಂದು ಕರೆಯುತ್ತಾರೆ.

3 ಭಾರತದಲ್ಲಿ ಮತಚಲಾಯಿಸುವ ಕನಿಷ್ಠ ವಯಸ್ಸು ____________ ವರ್ಷಗಳು.

4 ಪ್ರತಿ ಐದು ವರ್ಷಗಳಿಗೊಮ್ಮೆ ಚುನಾವಣೆಗಳನ್ನು ನಿರ್ವಹಿಸಿದರೆ ಅಂತಹ ಚುನಾವಣೆಗಳನ್ನು ____________ ಎಂದು ಕರೆಯುವರು.

5 ಮತಗಟ್ಟೆಗಳಲ್ಲಿ ಮತದಾಖಲೆಗೆ ಬಳಸುವ ಯಂತ್ರಗಳನ್ನು ____________ ಎಂದು ಕರೆಯುತ್ತಾರೆ.

**II ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.**

1 ಪ್ರಜಾಪ್ರಭುತ್ವದ ಅನುಕೂಲಗಳಾವುವು ?

2 ವಿವಿಧ ಪ್ರಕಾರದ ಸರ್ಕಾರಗಳನ್ನು ತಿಳಿಸಿ ?

3 ಪ್ರತ್ಯಕ್ಷ ಪ್ರಜಾಪ್ರಭುತ್ವವು ಪರೋಕ್ಷ ಪ್ರಜಾಪ್ರಭುತ್ವದಿಂದ ಹೇಗೆ ಭಿನ್ನವಾಗಿದೆ ?

4 ಸಾರ್ವತ್ರಿಕ ವಯಸ್ಕ ಮತದಾನದ ಹಕ್ಕು ಎಂದರೇನು ?

5 ಪ್ರಜಾಪ್ರಭುತ್ವದ ಯಶಸ್ಸಿಗೆ ಕಾರಣವಾಗುವ ಅವಶ್ಯ ಅಂಶಗಳನ್ನು ಪಟ್ಟಿಮಾಡಿ ?

6 ಪ್ರಜಾಪ್ರಭುತ್ವದಲ್ಲಿ ಸಮರ್ಥ ವಿರೋಧಪಕ್ಷದ ಅವಶ್ಯಕತೆ ಏಕೆ ಬೇಕಾಗಿದೆ ?

7 ಪ್ರಜಾಪ್ರಭುತ್ವದ ಐದು ಗುಣಗಳನ್ನು ತಿಳಿಸಿ.

8 ಪ್ರಜಾಪ್ರಭುತ್ವದಲ್ಲಿ ನಿಯತಕಾಲಿಕಾ ಚುನಾವಣೆಗಳು ಏಕೆ ಅವಶ್ಯಕ ?

9 ಪ್ರಜಾಪ್ರಭುತ್ವದ ಯಶಸ್ಸು ಮತದಾರನನ್ನು ಅವಲಂಬಿಸಿದೆ. ಚರ್ಚಿಸಿ.

10 ರಾಷ್ಟ್ರೀಯ ಮತ್ತು ಪ್ರಾದೇಶಿಕ ಪಕ್ಷಗಳಿಗೆ ಇರುವ ವ್ಯತ್ಯಾಸಗಳನ್ನು ತಿಳಿಸಿ.

11 ಸರ್ಕಾರದ ಪರಿಣಾಮಕಾರಿ ಆಡಳಿತಕ್ಕೆ ಮಾಧ್ಯಮಗಳು ಹೇಗೆ ಸಹಾಯಕವಾಗುತ್ತವೆ ? ವಿವರಿಸಿ.

12 ಮಾಹಿತಿ ಹಕ್ಕು ಕಾಯಿದೆಯ ಉದ್ದೇಶಗಳಾವುವು ?

## III ಚಟುವಟಿಕೆಗಳು.

1 ಸರ್ವಾಧಿಕಾರ ಮತ್ತು ಸಮತಾವಾದ ಮತ್ತು ಪ್ರಜಾಪ್ರಭುತ್ವಗಳಲ್ಲಿ ಯಾವುದು ಉತ್ತಮ ಎಂಬ ಬಗ್ಗೆ ಚರ್ಚಿಸಿ.

2 ಉತ್ತಮ ನಾಯಕತ್ವವು ಪ್ರಜಾಪ್ರಭುತ್ವದ ಯಶಸ್ಸಿಗೆ ಕೊಡುಗೆಯಾಗಬಲ್ಲದು ಈ ವಿಚಾರವಾಗಿ ಬಂದು ಉಪನ್ಯಾಸ ಏರ್ಪಡಿಸಿ ಚರ್ಚಿಸಿ.

3 ಭಾರತದಲ್ಲಿ ಚುನಾವಣಾ ಪ್ರಕ್ರಿಯೆಯ ಚಿತ್ರಪಟವೊಂದನ್ನು ವಿವರಣೆ ಸಹಿತ ತಯಾರಿಸಿ.

4 ನಿಮ್ಮ ಶಿಕ್ಷಕರ ಸಹಾಯದಿಂದ ತರಗತಿಯಲ್ಲಿ ಅಣಕು ಚುನಾವಣಾ ಪ್ರಕ್ರಿಯೆಯನ್ನು ನಿರ್ವಹಿಸಿ.

## IV ಯೋಜನಾ ಕಾರ್ಯಗಳು.

1 ನಿಮ್ಮ ಶಿಕ್ಷಕರ ಮಾರ್ಗದರ್ಶನದಲ್ಲಿ ಅಮೆರಿಕಾದಲ್ಲಿ ಜಾರಿಯಲ್ಲಿರುವ ಪ್ರತ್ಯಕ್ಷ ಪ್ರಜಾಪ್ರಭುತ್ವದ ಬಗ್ಗೆ ಯೋಜನಾ ವರದಿಯನ್ನು ತಯಾರಿಸಿ.

2 ಲೋಕಸಭೆ ಮತ್ತು ಪಂಚಾಯತ್ ಚುನಾವಣೆಗಳಲ್ಲಿ ಅನುಸರಿಸುವ ಚುನಾವಣೆ ಪ್ರಕ್ರಿಯೆಯನ್ನು ಅಭ್ಯಸಿಸಿ ಒಂದು ಯೋಜನಾ ವರದಿಯನ್ನು ತಯಾರಿಸಿ.

3 ಸರ್ಕಾರದ ಆಡಳಿತದಲ್ಲಿ ಮತ್ತು ನಿಯಮ ರೂಪಿಸುವಲ್ಲಿ ಮಾಧ್ಯಮಗಳ ಮಹತ್ತರ ಬದಲಾವಣೆ ತಂದಿರುವುದನ್ನು ಕುರಿತು ಮಾಹಿತಿ ಸಂಗ್ರಹಿಸಿ ವರದಿ ನೀಡಿ.

4 ಅಧಿಕಾರಕ್ಕಾಗಿ ಭ್ರಷ್ಟಾಚಾರ, ಪಕ್ಷಪಾತ, ಮತ್ತು ಅತಿಯಾಸೆಗಳು, ಸರ್ಕಾರಗಳನ್ನು ದುರ್ಬಲಗೊಳಿಸುವಲ್ಲಿ ಹೇಗೆ ಕಾರಣಗಳಾಗುತ್ತವೆ ಎಂಬುದರ ಬಗ್ಗೆ ಅಭ್ಯಸಿಸಿ ಮಾಹಿತಿ ಸಂಗ್ರಹಿಸಿ.

5 ಭಾರತದಲ್ಲಿ ಸಮ್ಮಿಶ್ರ ಸರ್ಕಾರ ರಚನೆಯಾದ ಬಗ್ಗೆ ಮತ್ತು ಅವುಗಳ ರಚನೆಯ ಸಂದರ್ಭಗಳು ಮತ್ತು ಅಂತಹ ಸರ್ಕಾರಗಳ ವೈಫಲ್ಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿ.

6 ನಿಮ್ಮ ಸ್ಥಳೀಯ ಶಾಸಕರನ್ನು ಆಹ್ವಾನಿಸಿ ಅವರೊಂದಿಗೆ ಪಕ್ಷ ವ್ಯವಸ್ಥೆಯ ಅನುಕೂಲಗಳನ್ನು ಚರ್ಚಿಸಿ.

7 ಭ್ರಷ್ಟಚಾರದ ವಿರುದ್ಧ ಭಾರತದಲ್ಲಿ 2011ರಲ್ಲಿ ಆದ ಚಳುವಳಿಯಲ್ಲಿ ಸಾರ್ವಜನಿಕ ಅಭಿಪ್ರಾಯದ ಮಹತ್ತರ ಪಾತ್ರದ ಬಗ್ಗೆ ವರದಿ ತಯಾರಿಸಿ.

# ಅಧ್ಯಾಯ–4

# ಸ್ಥಳೀಯ ಸ್ವಯಂ ಸರ್ಕಾರಗಳು

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಸ್ಥಳೀಯ ಸ್ವಯಂ ಸರಕಾರಗಳ ರಚನೆಯ ಹಿನ್ನಲೆ ತಿಳಿಯುವುದು.
- ಸ್ಥಳೀಯ ಸ್ವಯಂ ಸರಕಾರಗಳ ಉದ್ದೇಶ ಮತ್ತು ಕಾರ್ಯಗಳ ಬಗ್ಗೆ ಅಭ್ಯಸಿಸುವುದು.
- ವಿವಿಧ ಸ್ಥಳೀಯ ಸಂಸ್ಥೆಗಳ ರಚನೆ, ಆಡಳಿತ, ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ತಿಳಿಯುವುದು.

ಭಾರತದಲ್ಲಿ ಸ್ಥಳೀಯ ಸರ್ಕಾರಗಳ ಪರಿಕಲ್ಪನೆ ಬಹಳ ಹಳೆಯದಾಗಿದ್ದು ಅನೇಕ ಮಹಾರಾಜರುಗಳು ಸ್ಥಳೀಯ ಸ್ವಯಂ ಸರ್ಕಾರಗಳ ರಚನೆಗೆ ಮತ್ತು ಬೆಳವಣಿಗೆಗಳಿಗೆ ಪ್ರಾಮುಖ್ಯತೆ ನೀಡಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ಸ್ಥಳೀಯ ಸ್ವಯಂ ಸರ್ಕಾರಗಳು ಸಮುದಾಯ ಮತ್ತು ಸರ್ಕಾರಗಳ ನಡುವೆ ಸಂಬಂಧ ಕಲ್ಪಿಸುವುದರ ಜೊತೆಗೆ ಸ್ಥಳೀಯರು ತಮ್ಮ ಸಮಸ್ಯೆಗಳನ್ನು ಮುಕ್ತವಾಗಿ ವ್ಯಕ್ತಪಡಿಸಲು ಅವಕಾಶ ನೀಡುತ್ತವೆ. ಸ್ಥಳೀಯ ಸರ್ಕಾರಗಳು ಸ್ಥಳೀಯ ಸಮಸ್ಯೆಗಳನ್ನು ಅಲ್ಲಿನ ಜನರ ಸಹಕಾರದಿಂದ ಬಗೆಹರಿಸಿಕೊಳ್ಳುವಲ್ಲಿ ಸಹಕಾರಿಯಾಗುತ್ತದೆ. ಆಡಳಿತದಲ್ಲಿ ಸ್ಥಳೀಯ ಜನರ ಭಾಗವಹಿಸುವಿಕೆಯು ಪ್ರಜಾಪ್ರಭುತ್ವದಂತಹ ಸಂಸ್ಥೆಗಳನ್ನು ತಳಮಟ್ಟದಿಂದ ಸುಭದ್ರಗೊಳ್ಳಿಸುತ್ತದೆ. ಪ್ರಜೆಗಳು ಸ್ಥಳೀಯ ಆಡಳಿತ ಮಂಡಳಿಗಳಿಗೆ ತಮ್ಮ ಪ್ರತಿನಿಧಿಗಳನ್ನು ಚುನಾಯಿಸಿ ಅಧಿಕಾರ ಕೊಡಿಸುವ ಹಕ್ಕನ್ನು ಹೊಂದಿರುತ್ತಾರೆ. ಹೀಗೆ ಸ್ವಯಂ ಆಡಳಿತ ನೀಡುವ ಮಂಡಳಿಗಳನ್ನು ಸ್ಥಳೀಯ ಸ್ವಯಂ ಸರ್ಕಾರಗಳೆಂದು ಕರೆಯಲಾಗಿ ಅವುಗಳು ಅಧಿಕಾರ ವಿಕೇಂದ್ರೀಕರಣದ ಮೂಲಗಳಾದವು. ಭಾರತದಲ್ಲಿ 1919 ಮತ್ತು 1935 ರಲ್ಲಿ ಬ್ರಿಟೀಷ್ ಸರ್ಕಾರ ಜಾರಿಮಾಡಿದ ಕಾಯಿದೆಗಳು ಸ್ಥಳೀಯ ಸ್ವಯಂ ಸರ್ಕಾರಗಳಿಗೆ ಹೆಚ್ಚು ಅಧಿಕಾರವನ್ನು ಒದಗಿಸಿಕೊಟ್ಟಿವೆ. ರಾಷ್ಟ್ರಪಿತ ಗಾಂಧೀಜಿಯವರ ಕನಸಾದ ಗ್ರಾಮರಾಜ್ಯ ಅಥವಾ ಗ್ರಾಮಸ್ವರಾಜ್ಯವನ್ನು ನನಸಾಗಿಸಲು ಭಾರತವು ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ಅನೇಕ ಸಮಿತಿ ಮತ್ತು ಆಯೋಗಗಳನ್ನು ರಚಿಸಿ ಹಲವು ಕಾಯಿದೆಗಳನ್ನು ಜಾರಿಗೊಳಿಸಿದೆ.

ಗ್ರಾಮ ಪಂಚಾಯಿತಿಗಳನ್ನು ಸಂಘಟಿಸುವಂತೆ ಹಾಗೂ ಅವುಗಳ ಪರಿಣಾಮಕಾರಿ ಕಾರ್ಯನಿರ್ವಹಣೆಗೆ ಸೂಕ್ತ ಅಧಿಕಾರ ಒದಗಿಸುವಂತೆ ಸಂವಿಧಾನ ರಾಜ್ಯಗಳಿಗೆ ಸ್ಪಷ್ಟ ನಿರ್ದೇಶನ ನೀಡಿರುತ್ತದೆ. ಸಂವಿಧಾನದ 73ನೇ ಮತ್ತು 74ನೇ ತಿದ್ದುಪಡಿಗಳು 1993 ರಲ್ಲಿ ಜಾರಿಗೆ ಬಂದು ಪಂಚಾಯತ್ ರಾಜ್ ವ್ಯವಸ್ಥೆಯ ಇತಿಹಾಸದಲ್ಲಿಯೇ ಒಂದು ಮೈಲಿಗಲ್ಲು ಎನಿಸಿಕೊಂಡಿದೆ.

ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಅನೇಕ ಸ್ಥಳೀಯ ಸ್ವಯಂ ಸರ್ಕಾರಗಳು ಕಾರ್ಯನಿರ್ವಹಿಸಿದ್ದವು ಎಂದು ತಿಳಿದು ಬಂದಿದೆ. ಸ್ವಾತಂತ್ರ್ಯ ನಂತರ ಸ್ಥಳೀಯ ಸ್ವಯಂ ಸರ್ಕಾರಗಳ ಸ್ಥಾಪನೆ ಹಾಗೂ ಬಲವರ್ಧನೆಗಾಗಿ ನಮ್ಮ ರಾಜ್ಯವು ಹಲವು ಸಮಿತಿಗಳನ್ನು ರಚಿಸಿ ಸಲಹೆ ಪಡೆದು ಅವುಗಳನ್ನು ಅನುಸರಿಸಿದೆ. ನಮ್ಮ ರಾಜ್ಯ ಸರ್ಕಾರವು 1983ರಲ್ಲಿ ಪಂಚಾಯತ್ ರಾಜ್ ಕಾಯಿದೆಯನ್ನು

ಪರಿಚಯಿಸಿ 1985ರಿಂದ ಆ ಕಾಯಿದೆಯನ್ನು ಜಾರಿಗೆ ತಂದಿದೆ. ಈ ಕಾಯಿದೆಯ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿಗಳು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿಗಳು ಮತ್ತು ಗ್ರಾಮ ಮಟ್ಟದಲ್ಲಿ ಗ್ರಾಮಪಂಚಾಯಿತಿಗಳು ಪ್ರತ್ಯಕ್ಷ ಚುನಾವಣೆಗಳ ಮೂಲಕ ರಚಿತವಾಗಬೇಕೆಂದು ಸೂಚಿಸಲಾಗಿದೆ. 1983 ರ ಕಾಯಿದೆಯನ್ನು ಇನ್ನಷ್ಟು ಬಲಪಡಿಸಲು 1993ರಲ್ಲಿ ಪಂಚಾಯತ್ ಕಾಯಿದೆಗೆ ತಿದ್ದುಪಡಿ ತರಲಾಯಿತು. ಈ ತಿದ್ದುಪಡಿಯಲ್ಲಿ ಗ್ರಾಮ ಸಭೆಗಳ ರಚನೆಗಳಿಗೆ ಅವಕಾಶ ಕಲ್ಪಿಸಲಾಯಿತು ಕರ್ನಾಟಕ ಪಂಚಾಯತ್ ರಾಜ್ ಕಾಯಿದೆಯಲ್ಲಿ ಗ್ರಾಮಾಭಿವೃದ್ಧಿಗೆ ಅನುಕೂಲವಾಗುವಂತಹ ತಿದ್ದುಪಡಿಗಳನ್ನು ಮಾಡಲಾಗಿದೆ.

**ಸ್ಥಳೀಯ ಸ್ವಯಂಸರ್ಕಾರಗಳ ಉದ್ದೇಶಗಳು :**

- ಸ್ಥಳೀಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸ್ಥಳೀಯರನ್ನೇ ಬಳಸಿಕೊಳ್ಳುವುದು.
- ಜನ ಸಾಮಾನ್ಯರಿಗೆ ಆಡಳಿತಜ್ಞಾನ ಒದಗಿಸುವುದು.
- ಅಧಿಕಾರವನ್ನು ವಿಕೇಂದ್ರೀಕರಿಸಿ ಆಡಳಿತವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡುವುದು.
- ತಳಮಟ್ಟದ ಹಂತದಲ್ಲಿ ಜನರಿಗೆ ನಾಯಕತ್ವದ ಗುಣಲಕ್ಷಣಗಳನ್ನು ಅಭಿವೃದ್ದಿಗೊಳಿಸುವುದು ಅಥವಾ ತರಬೇತಿ ನೀಡುವುದು.

**ಸ್ಥಳೀಯ ಸ್ವಯಂ ಸರ್ಕಾರಗಳ ಕಾರ್ಯಗಳು :** ಸ್ಥಳೀಯ ಸ್ವಯಂ ಸರ್ಕಾರಗಳಾದಂತಹ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳ ಕಾರ್ಯಗಳು ಬೇರೆ ಬೇರೆಯಾಗಿದ್ದು ಅವುಗಳು ಅನೇಕ ಕಾರ್ಯಗಳನ್ನು ಒಳಗೊಂಡಿವೆ. ಅವುಗಳಲ್ಲಿ ಪ್ರಮುಖ ಮತ್ತು ಸಾಮಾನ್ಯ ಕಾರ್ಯಗಳೆಂದರೆ :

- ಪಂಚಾಯಿತಿಯ ಆಸ್ತಿಯನ್ನು ರಕ್ಷಿಸಿ ಕಾಪಾಡಿಕೊಳ್ಳುವುದು.
- ಸ್ಥಳೀಯ ಮಂಡಳಿಯ ವಾರ್ಷಿಕ ಆಯವ್ಯಯದ ಮುಂಗಡ ಪತ್ರ ತಯಾರಿಸುವುದು.
- ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಯೋಜನೆಗಳನ್ನು ಕೈಗೊಳ್ಳುವುದು.
- ರಸ್ತೆ ನಿರ್ಮಾಣ, ವಿದ್ಯುತ್ತೀಕರಣ, ಗೃಹನಿರ್ಮಾಣ ಮತ್ತು ಕುಡಿಯುವ ನೀರಿನ ಸರಬರಾಜು ಮುಂತಾದ ಅಭಿವೃದ್ದಿ ಕೆಲಸಗಳಿಗೆ ಕಾರ್ಯಯೋಜನೆ ರೂಪಿಸಿ ಅನುಷ್ಠಾನಗೊಳಿಸುವುದು.
- ಪ್ರಾಥಮಿಕ, ಪ್ರೌಢ, ವಯಸ್ಕರ ಮತ್ತು ಅನೌಪಚಾರಿಕ ಶೈಕ್ಷಣಿಕ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುವುದು.
- ತಮ್ಮ ಪ್ರದೇಶಗಳಲ್ಲಿ ಸ್ವಚ್ಚತೆ ಮತ್ತು ನಿರ್ಮಲೀಕರಣವನ್ನು ಕಾಪಾಡುವುದು.
- ಎಲ್ಲಾ ಪ್ರಕಾರದ ಮಾಲಿನ್ಯಗಳನ್ನು ತಡೆಗಟ್ಟಿ ಉತ್ತಮ ಆರೋಗ್ಯಕರ ಸವಲತ್ತುಗಳನ್ನು ಒದಗಿಸುವುದು.
- ಅವಶ್ಯಕ ಪಡಿತರಗಳಾದ ಆಹಾರಧಾನ್ಯ, ಸೀಮೆಎಣ್ಣೆ ಇತ್ಯಾದಿಗಳ ವಿತರಣೆಗೆ ಸೂಕ್ತ ವ್ಯವಸ್ಥೆಯನ್ನು ನಿರ್ಮಿಸಿ ಸವಲತ್ತುಗಳನ್ನು ಒದಗಿಸುವುದು.
- ಜನನ ಮತ್ತು ಮರಣಗಳ ನೊಂದಣಿ ಪ್ರಾಮಾಣಿಕವಾಗಿ ಆಗುತ್ತಿರುವುದನ್ನು ಖಾತ್ರಿ ಪಡಿಸಿಕೊಳ್ಳುವುದು.

- ಕೃಷಿ, ಪಶುಸಂಗೋಪನೆ, ಖಾದಿ ಮತ್ತು ಕರಕುಶಲ ಉದ್ಯೋಗಗಳನ್ನು ಪ್ರೋತ್ಸಾಹಿಸುವುದು.
- ಮಣ್ಣು, ನೀರು ಮತ್ತು ಅರಣ್ಯ ರಕ್ಷಣೆಗೆ ಕಾರ್ಯಕ್ರಮಗಳನ್ನು ಕೈಗೊಳ್ಳುವುದು.
- ರೈತರಿಗೆ ಸಹಾಯ ಮಾಡುವ ಸಲುವಾಗಿ ಕೃಷಿ ವಿಸ್ತರಣಾ ಕಾರ್ಯಕ್ರಮಗಳನ್ನು ನಡೆಸುವುದು.
- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ದುರ್ಬಲವರ್ಗ, ಮಹಿಳೆ ಮತ್ತು ಮಕ್ಕಳಿಗಾಗಿ ಕಲ್ಯಾಣಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರುವುದು.
- ವಾಚನಾಲಯ, ಬೀದಿ ದೀಪಗಳು ಮತ್ತು ಮಾರುಕಟ್ಟೆ ಸವಲತ್ತುಗಳನ್ನು ಒದಗಿಸಿ ಕೊಡುವುದು.
- ಶುಲ್ಕ, ದಂಡ ಮತ್ತು ತೆರಿಗೆಗಳನ್ನು ಸಂಗ್ರಹಿಸುವುದು.
- ಸರ್ಕಾರದ ಕಲ್ಯಾಣ ಯೋಜನೆಗಳಿಗೆ ಫಲಾನುಭವಿಗಳನ್ನು ಮುಕ್ತವಾಗಿ ಗುರುತಿಸುವುದು.

**ಆದಾಯದ ಮೂಲಗಳು :** ಸ್ಥಳೀಯ ಸ್ವಯಂ ಸರ್ಕಾರಗಳು ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆರ್ಥಿಕ ನಿಧಿ ಅಥವಾ ಬಂಡವಾಳದ ಅವಶ್ಯಕತೆಯಿರುತ್ತದೆ. ಈ ಸಂಸ್ಥೆಗಳ ಪ್ರಮುಖ ಆದಾಯದ ಮೂಲಗಳೆಂದರೆ:

- ನೀರು, ಆರೋಗ್ಯ, ಶಿಕ್ಷಣ, ಗ್ರಂಥಾಲಯ ಮತ್ತು ವಾಚನಾಲಯಗಳ ಮೇಲಿನ ಉಪಕರದಿಂದ ಸಂಗ್ರಹವಾಗುವ ಮೊತ್ತ.
- ಕಟ್ಟಡ ತೆರಿಗೆ, ಖಾಲಿ ಜಾಗದ ತೆರಿಗೆ, ವ್ಯಾವಹಾರಿಕ ಸಂಸ್ಥೆಗಳ ಮೇಲಿನ ತೆರಿಗೆ, ಮಾರುಕಟ್ಟೆ, ಮನರಂಜನಾಮಂದಿರ ಮತ್ತು ಜಾಹಿರಾತುಗಾರರಿಂದ ವಸೂಲಾಗುವ ಒಟ್ಟು ತೆರಿಗೆ ಮೊತ್ತ.
- ಪ್ರವಾಸಿ ತಾಣಗಳಿಂದ ಸಂಗ್ರಹಿಸಿದ ತೆರಿಗೆ.
- ಪಂಚಾಯತ್ ಆಸ್ತಿಗಳಿಂದ ಬರುವ ಬಾಡಿಗೆ ಹಾಗೂ ಗುತ್ತಿಗೆ ಹಣ.
- ರಾಜ್ಯ ಸರ್ಕಾರದಿಂದ ದೊರೆಯುವ ಧನ ಸಹಾಯ ಅಥವಾ ಅನುದಾನ ಮೊತ್ತ.

**ಸ್ಥಳೀಯ ಸ್ವಯಂ ಆಡಳಿತ ಮಂಡಳಿಗಳ ರಚನೆ :** (Composition of Local Self Governing Bodies)

**ಗ್ರಾಮ ಸಭೆಗಳು :** ಗ್ರಾಮ ಸಭೆಯು ಒಂದು ಹಳ್ಳಿಯ ಅಥವಾ ಗ್ರಾಮದ ಮಂಡಳಿ ಎಂದು ಪರಿಭಾವಿಸಲಾಗಿದ್ದು ಇದರ ರಚನೆಗೆ ಚುನಾವಣೆ ಬೇಕಿರುವುದಿಲ್ಲ. ಗ್ರಾಮದಲ್ಲಿನ ಹದಿನೆಂಟು ವರ್ಷಗಳಿಗಿಂತ ಮೇಲ್ಪಟ್ಟ ವಯಸ್ಸಿನ ಎಲ್ಲಾ ಪುರುಷ ಮತ್ತು ಸ್ತ್ರೀ ಸದಸ್ಯರು ಗ್ರಾಮ ಸಭೆಯಲ್ಲಿ ಪಾಲ್ಗೊಳ್ಳಬಹುದು. ಗ್ರಾಮ ಪಂಚಾಯಿತಿಯ ಸದಸ್ಯರುಗಳು ಈ ಸಭೆಯಲ್ಲಿ ಭಾಗವಹಿಸಬಹುದು. ಗ್ರಾಮ



**ಗ್ರಾಮ ಸಭೆ**

ಪಂಚಾಯಿತಿ ಅಧ್ಯಕ್ಷ, ಗ್ರಾಮ ಸಭೆಯ ಅಧ್ಯಕ್ಷತೆ ವಹಿಸಿ ಸಭಾಕಲಾಪ ನಡೆಸಿಕೊಡಬೇಕು. ಗ್ರಾಮಸಭೆಯು ಪ್ರತಿ ಆರು ತಿಂಗಳಿಗೊಮ್ಮೆಯಂತೆ ನಡೆಯಬೇಕು. ಸಭೆಯಲ್ಲಿ ಗ್ರಾಮಸ್ಥರು ತಮ್ಮ ಗ್ರಾಮದ ಸಮಸ್ಯೆಗಳನ್ನು, ಅವುಗಳನ್ನು ಪರಿಹರಿಸಲು ಕೈಗೊಂಡ ಕ್ರಮಗಳನ್ನು ಹಾಗೂ ಮುಂದೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸುತ್ತಾರೆ. ಗ್ರಾಮಸ್ಥರಿಗೆ ಸಲಹೆ ನೀಡಲು ಅವಕಾಶವಿರುತ್ತದೆ. ಸರಕಾರದ ವಿವಿಧ ಯೋಜನೆಗಳಿಗೆ ಫಲಾನುಭವಿಗಳನ್ನು ಗುರುತಿಸುವ ಜವಾಬ್ದಾರಿಯು ಈ ಸಭೆಗೆ ಇರುತ್ತದೆ.

**ಗ್ರಾಮ ಪಂಚಾಯಿತಿ :**ಗ್ರಾಮ ಪಂಚಾಯಿತಿಗಳು ಜನಸಂಖ್ಯೆಯ ಆಧಾರಿತವಾಗಿ ರಚಿತಗೊಳ್ಳುತ್ತವೆ. ಒಟ್ಟು 5000 ದಿಂದ 7000 ಜನಸಂಖ್ಯೆಗಳಿರುವ ಒಂದು ಗ್ರಾಮ ಅಥವಾ ಎರಡು ಮೂರು ಗ್ರಾಮಗಳು ಸೇರಿ ಗ್ರಾಮದ ಪಂಚಾಯಿತಿ ರಚನೆಯಾಗುತ್ತದೆ. ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಮಲೆನಾಡಿನ ಪ್ರದೇಶಗಳಲ್ಲಿ ಕೇವಲ 2000 ಜನಸಂಖ್ಯೆಗಳಿರುವ ಗ್ರಾಮಗಳು ಗ್ರಾಮ ಪಂಚಾಯಿತಿಗಳನ್ನು ರಚಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಗ್ರಾಮ ಪಂಚಾಯಿತಿಯ ಸದಸ್ಯರುಗಳು ತಮ್ಮ ಪಂಚಾಯಿತಿಯ ಮಿತಿಗೊಳಪಟ್ಟ ಪ್ರದೇಶದಲ್ಲಿನ ವಯಸ್ಕಮತದಾರರಿಂದ ಚುನಾವಣೆಯಲ್ಲಿ ಆಯ್ಕೆಗೊಳ್ಳುತ್ತಾರೆ. ಪ್ರತಿ 400 ಮತದಾರನಿಗೆ ಒಬ್ಬ ಪ್ರತಿನಿಧಿ ಆಯ್ಕೆಗೊಳ್ಳುತ್ತಾನೆ. ಈ ಗ್ರಾಮ ಪಂಚಾಯಿತಿಗಳಲ್ಲೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳೆಯರಿಗೆ ಮೀಸಲು ಸ್ಥಾನಗಳಿವೆ. ಗ್ರಾಮ ಪಂಚಾಯಿತಿಯ ಆಡಳಿತಾವಧಿ ಮೊದಲ ಸಭೆಯ ದಿನದಿಂದ ಆರಂಭಗೊಂಡು ಪೂರ್ಣ ಐದು ವರ್ಷಗಳವರೆಗೆ ಇರುತ್ತದೆ.

> ೨೦೦೦ರದ ಪಂಚಾಯತ್ ರಾಜ್ ಕಾಯ್ದೆಯ ಎರಡನೇ ತಿದ್ದುಪಡಿಯ ಪ್ರಕಾರ ಪ್ರತಿ ಪಂಚಾಯಿತಿ ಸದಸ್ಯರು ಕಡ್ಡಾಯವಾಗಿ ತಮ್ಮ ಮನೆಗಳಲ್ಲಿ ಶೌಚಾಲಯವನ್ನು ಹೊಂದಿರಬೇಕು. ಒಂದು ವೇಳೆ ಇಲ್ಲದಿದ್ದಲ್ಲಿ ಚುನಾಯಿತರಾದ ಒಂದು ವರ್ಷದೊಳಗೆ ಶೌಚಾಲಯವನ್ನು ನಿರ್ಮಿಸಿಕೊಳ್ಳಲೇಬೇಕು.

ಪಂಚಾಯಿತಿ ಸಭೆಗಳು ಕಡೆ ಪಕ್ಷ ಎರಡು ತಿಂಗಳಿಗೊಮ್ಮೆ ನಡೆಯಬೇಕು ಹಾಗೂ ಸಭೆಯಲ್ಲಿ ಮೂರನೇ ಒಂದು ಮೂರು ಭಾಗದಷ್ಟು ಪಂಚಾಯಿತಿ ಸದಸ್ಯರುಗಳು ಹಾಜರಿದ್ದಲ್ಲಿ ಮಾತ್ರ ನಿರ್ಧಾರಗಳಿಗೆ ಸಮ್ಮತಿ ದೊರೆಯಬೇಕು. ಗ್ರಾಮ ಪಂಚಾಯಿತಿಯ ಎಲ್ಲಾ ಸದಸ್ಯರುಗಳು ಒಟ್ಟಾಗಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ಮೂವತ್ತು ತಿಂಗಳ ಅವಧಿಗೆ ಆಯ್ಕೆಮಾಡುತ್ತಾರೆ. ಚುನಾಯಿತ ಅಧ್ಯಕ್ಷ ಗ್ರಾಮ ಪಂಚಾಯಿತಿ ಸಭೆಗಳ ಅಧ್ಯಕ್ಷತೆ ವಹಿಸುತ್ತಾರೆ. ಅವನ/ಅವಳ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ಸಭೆಯ ಅಧ್ಯಕ್ಷ ಸ್ಥಾನವಹಿಸಿ ಸಭೆಯ ಕಲಾಪಗಳನ್ನು ನಡೆಸಬೇಕು. ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲಾತಿ ನಿಯಮ ಅನ್ವಯವಾಗುತ್ತದೆ. ಗ್ರಾಮ ಪಂಚಾಯಿತಿಗಳು ಪರಿಣಾಮಕಾರಿ ಆಡಳಿತಕ್ಕಾಗಿ ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳಬಹುದು.

ಗ್ರಾಮ ಪಂಚಾಯಿತಿಯ ಕಾರ್ಯಪಾಲನೆಗಾಗಿ ಪೂರ್ಣಾವಧಿಯ ಕಾರ್ಯದರ್ಶಿ ಎಂಬ ಅಧಿಕಾರಿಯು ನೇಮಕಗೊಂಡಿರುತ್ತಾನೆ. ಇತ್ತೀಚಿಗೆ ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಪ್ರತಿ ಒಂದು ಪಂಚಾಯಿತಿಗೆ ಒಬ್ಬ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ(PDO) ಎಂಬ ಅಧಿಕಾರಿಯನ್ನು ರಾಜ್ಯ ಸರ್ಕಾರ ನೇಮಕ ಮಾಡಿದೆ.


ಕರ್ನಾಟಕದ ಪಂಚಾಯತ್ ರಾಜ್‌ನ ನಕ್ಷೆ
ಜಿಲ್ಲಾ ಪಂಚಾಯಿತಿ
(ಜಿಲ್ಲಾಡಳಿತ)
(30)
ತಾಲ್ಲೂಕು ಪಂಚಾಯಿತಿ
(176)
ಗ್ರಾಮ ಪಂಚಾಯಿತಿ
(5659)
ಗ್ರಾಮ ಪಂಚಾಯಿತಿಯ ರಚನೆ (ಕರ್ನಾಟಕ)
ಅಧ್ಯಕ್ಷ
ಉಪಾಧ್ಯಕ್ಷ
ಗ್ರಾಮ ಪಂಚಾಯಿತಿಯ ಸದಸ್ಯರಿಂದ ಆಯ್ಕೆಯಾಗುತ್ತಾರೆ.
ಕಾರ್ಯದರ್ಶಿ
ಸರ್ಕಾರದಿಂದ ನೇಮಕವಾಗುತ್ತದೆ.
ಗ್ರಾಮ 1 ಪ್ರತಿನಿಧಿ/ಕ್ಷೇತ್ರ,
ಗ್ರಾಮ 2 ಸದಸ್ಯ
ಗ್ರಾಮ 3 ಸದಸ್ಯ
ಗ್ರಾಮ 4 ಸದಸ್ಯ
ಗ್ರಾಮ 5 ಸದಸ್ಯ
ಗ್ರಾಮ 6 ಸದಸ್ಯ
ಗ್ರಾಮ 7 ಸದಸ್ಯ
ಗ್ರಾಮ 8 ಸದಸ್ಯ
ಗ್ರಾಮ ಸಭೆಗಳಿಂದ ಸದಸ್ಯನಾದವರು
(ಕರ್ನಾಟಕದಲ್ಲಿ 5659 ಗ್ರಾಮ ಪಂಚಾಯಿತಿಗಳಿವೆ)
5000 ದಿಂದ 7000 ಜನ ಸಂಖ್ಯೆಯಿರುವ ಗ್ರಾಮಗಳು.
ಅಕ್ಕಪಕ್ಕದ ಗ್ರಾಮಗಳು ಗ್ರಾಮ ಪಂಚಾಯಿತಿ ರಚನೆಗೆ ಸೇರಿಕೊಳ್ಳುತ್ತದೆ.
ಪ್ರತಿ 400 ಮತದಾರರ ವಾರ್ಡಿಗೆ ಒಬ್ಬ ಸದಸ್ಯನ ಆಯ್ಕೆಯಾಗುತ್ತದೆ.

**ತಾಲ್ಲೂಕು ಪಂಚಾಯಿತಿಗಳು :** 1993 ರ ಪಂಚಾಯಿತಿ ರಾಜ್ ಕಾಯಿದೆಯು ತಾಲ್ಲೂಕುಗಳಲ್ಲಿ ತಾಲ್ಲೂಕು ಪಂಚಾಯಿತಿಗಳನ್ನು ರಚಿಸಲು ಅವಕಾಶ ಕಲ್ಪಿಸಿದೆ. ತಾಲ್ಲೂಕು ಪಂಚಾಯಿತಿಯು ಚುನಾಯಿತರಾದ ಸದಸ್ಯರುಗಳನ್ನು ಹೊಂದಿರುತ್ತದೆ. ಚುನಾಯಿತ ಸದಸ್ಯರು ಪ್ರತ್ಯಕ್ಷ ಚುನಾವಣೆಗಳ ಮೂಲಕ ಅರ್ಹ ಮತದಾರರಿಂದ ಆಯ್ಕೆಗೊಳ್ಳುತ್ತಾರೆ. ತಾಲ್ಲೂಕು ಪಂಚಾಯಿತಿಯ ಸದಸ್ಯರುಗಳ ಸಂಖ್ಯೆಯು ಆಯಾ ತಾಲ್ಲೂಕಿನ ಒಟ್ಟು ಜನ ಸಂಖ್ಯೆಯನ್ನು ಅವಲಂಬಿಸಿದ್ದು, ಪ್ರತಿ 10,000 ಮತದಾರರಿಗೊಬ್ಬರಂತೆ ತಾಲ್ಲೂಕು ಪಂಚಾಯಿತಿಯ ಸದಸ್ಯನನ್ನು ಹೊಂದಿರುತ್ತದೆ, ಸದಸ್ಯ ಸ್ಥಾನ ಹಂಚಿಕೆಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗಗಳು ಮತ್ತು ಮಹಿಳಾ ಮೀಸಲಾತಿಯನ್ನು ಕೂಡ ಅನುಪಾಲನೆ ಮಾಡಬೇಕಾಗುತ್ತದೆ. ಇದರ ಜೊತೆಗೆ ಆಯಾ ತಾಲ್ಲೂಕಿನ ವ್ಯಾಪ್ತಿಗೊಳಪಡುವ ಗ್ರಾಮ ಪಂಚಾಯಿತಿಗಳ ಐದನೆ ಒಂದರಷ್ಟು ಅಧ್ಯಕ್ಷರುಗಳು ತಾಲೂಕು ಪಂಚಾಯಿತಿಯ ಸದಸ್ಯರಾಗಿ ಸೇವೆ ಸಲ್ಲಿಸುವ ಅವಕಾಶವೂ ಇದ್ದು, ಇವರುಗಳನ್ನು ಲಾಟರಿ ಮೂಲಕ ಆಯ್ಕೆ ಮಾಡಲಾಗುತ್ತದೆ. ಹಾಗೂ ಇವರ ಅವಧಿಯು ಒಂದು ವರ್ಷಕ್ಕೆ ಸೀಮಿತವಾಗಿರುತ್ತದೆ. ಇವರ ಆಯ್ಕೆಯು ಪರ್ಯಾನುಕ್ರಮದ (Rotation Basis) ಅನುಸಾರ ನಡೆಯುತ್ತದೆ. ತಾಲ್ಲೂಕು ಪಂಚಾಯಿತಿಯ ಸದಸ್ಯರುಗಳ ಅಧಿಕಾರವಧಿಯು ಐದು ವರ್ಷಗಳಾಗಿದ್ದು, ಸಂಧರ್ಭ ಬಂದಾಗ ರಾಜೀನಾಮೆ ನೀಡುವ ಅಥವಾ ಸರ್ಕಾರ ಅವರನ್ನು ವಜಾಗೊಳಿಸುವ ಅವಕಾಶವಿದೆ. ವಿಧಾನಸಭೆ, ವಿಧಾನ ಪರಿಷತ್ತು ಮತ್ತು ಲೋಕಸಭೆ ಸದಸ್ಯರುಗಳು ತಮ್ಮತಮ್ಮ ಕ್ಷೇತ್ರಗಳ ತಾಲ್ಲೂಕು ಪಂಚಾಯಿತಿಗಳ ಸಭೆಯಲ್ಲಿ ಭಾಗವಹಿಸಲು ಅವಕಾಶವಿದೆ.

ತಾಲ್ಲೂಕು ಪಂಚಾಯಿತಿ ಸಭೆಗಳು ಕೊನೆ ಪಕ್ಷ ಎರಡು ತಿಂಗಳಿಗೊಂದರಂತೆ ನಡೆಯಬೇಕಿದ್ದು, ವಿಶೇಷ ಸಂದರ್ಭಗಳಲ್ಲಿ ತುರ್ತು ಅಥವಾ ಪ್ರಮುಖ ಸಭೆಗಳನ್ನು ನಡೆಸಬಹುದಾಗಿದೆ. ತಾಲೂಕು ಪಂಚಾಯಿತಿಯ ಅಧ್ಯಕ್ಷರು ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಹಾಗೂ ಅವರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಆ ಕಾರ್ಯವನ್ನು ನಿರ್ವಹಿಸತಕ್ಕದ್ದು. ತಾಲ್ಲೂಕು ಪಂಚಾಯಿತಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳನ್ನು ತಾಲ್ಲೂಕು ಪಂಚಾಯಿತಿಯ ಸದಸ್ಯರುಗಳು ಇಪ್ಪತ್ತು ತಿಂಗಳುಗಳ ಅವಧಿಗೆ ಆಯ್ಕೆ ಮಾಡಿಕೊಳ್ಳುತ್ತಾರೆ. ತಾಲ್ಲೂಕು ಪಂಚಾಯಿತಿಗಳ ಆಡಳಿತದ ಪರಿಣಾಮಕಾರಿ ನಿರ್ವಹಣೆಗಾಗಿ ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳುವ ಅವಕಾಶವಿದ್ದು, ಸರ್ಕಾರವು ಆಡಳಿತ ಕ್ರಮಗಳನ್ನು ಸುಗಮಗೊಳಿಸಲು ಕಾರ್ಯನಿರ್ವಾಹಕ ಅಧಿಕಾರಿಗಳನ್ನು ನೇಮಿಸುತ್ತದೆ. ತಾಲ್ಲೂಕು ಪಂಚಾಯಿತಿಗಳು ಸ್ಥಳೀಯ ಸಂಸ್ಥೆಗಳ ಕಾರ್ಯಗಳೊಂದಿಗೆ ಇನ್ನೂ ಕೆಲವು ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ, ಅವುಗಳೆಂದರೆ;

- ಗ್ರಾಮ ಪಂಚಾಯಿತಿಗಳ ವಾರ್ಷಿಕ ಯೋಜನಾ ಪ್ರಸ್ತಾವನೆಗಳನ್ನು ಕ್ರೋಢಿಕರಿಸಿ ಜಿಲ್ಲಾ ಪಂಚಾತಿಗಳಿಗೆ ಸಲ್ಲಿಸುವುದು.
- ರಾಜ್ಯ ಸರ್ಕಾರ ಅಥವಾ ಜಿಲ್ಲಾ ಪಂಚಾಯಿತಿಗಳು ಸೂಚಿಸುವ ಎಲ್ಲಾ ಕಲ್ಯಾಣದಾಯಕ ಕಾರ್ಯಕ್ರಮ ಅಥವಾ ಯೋಜನೆಗಳನ್ನು ಕಾರ್ಯಗತಗೊಳಿಸುವುದು.

**ಜಿಲ್ಲಾ ಪಂಚಾಯಿತಿಗಳು :** ಜಿಲ್ಲಾಡಳಿತವನ್ನು ನೋಡಿಕೊಳ್ಳಲು ಪ್ರತಿ ಜಿಲ್ಲೆಯಲ್ಲೂ ಜಿಲ್ಲಾ ಪಂಚಾಯಿತಿಗಳನ್ನು ಸ್ಥಾಪಿಸಲಾಗುತ್ತಿದೆ ಹಾಗೂ ಜಿಲ್ಲಾಡಳಿತವನ್ನು ಈ ಹಿಂದೆ ಜಿಲ್ಲಾ ಮಂಡಳಿಗಳು ಅಥವಾ ಸಮಿತಿಗಳೆಂದು ಕರೆಯಲಾಗುತ್ತಿತ್ತು. ಜಿಲ್ಲಾ ಪಂಚಾಯಿತಿ ಸದಸ್ಯರು ನೇರವಾಗಿ ಅಥವಾ ಪ್ರತ್ಯಕ್ಷವಾಗಿ ಆ ಜಿಲ್ಲೆಯ ಜನರಿಂದ ಚುನಾಯಿತರಾಗುತ್ತಾರೆ. ಜನಸಂಖ್ಯಾ ಆಧಾರದ ಮೇಲೆ ಜಿಲ್ಲೆಗಳ ಪ್ರತಿನಿಧಿಗಳ ಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 30,000 ಜನಸಂಖ್ಯೆಗೆ ಒಬ್ಬ ಪ್ರತಿನಿಧಿಯಿದ್ದರೆ, ಕೊಡಗಿನಲ್ಲಿ ಪ್ರತಿ 18,000 ಜನಸಂಖ್ಯೆಗೊಬ್ಬ ಪ್ರತಿನಿಧಿಯಿದ್ದು ಹಾಗೂ ಇತರೆ

ಜಿಲ್ಲೆಗಳಲ್ಲಿ ಪ್ರತಿ 40,000 ಜನಸಂಖ್ಯೆಗೊಬ್ಬ ಪ್ರತಿನಿಧಿ ಆಯ್ಕೆಗೊಳ್ಳುತ್ತಾನೆ. ಆಯ್ಕೆಗೊಂಡ ಜಿಲ್ಲಾ ಪಂಚಾಯಿತಿ ಸದಸ್ಯರುಗಳ ಜೊತೆಗೆ ಆ ಜಿಲ್ಲೆಯ ಎಲ್ಲಾ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರುಗಳು, ವಿಧಾನ ಸಭೆಯ ಹಾಗೂ ವಿಧಾನ ಪರಿಷತ್ತಿನ ಶಾಸಕರು ಮತ್ತು ಆ ಜಿಲ್ಲೆಯ ಲೋಕಸಭಾ ಸದಸ್ಯರು, ಜಿಲ್ಲಾ ಪಂಚಾಯಿತಿಯ. ಸಭೆಗಳಲ್ಲಿ ಭಾಗವಹಿಸುವ ಮತ್ತು ಮತ ಚಲಾಯಿಸುವ ಅವಕಾಶ ಹೊಂದಿರುತ್ತಾರೆ. ಜಿಲ್ಲಾ ಪಂಚಾಯಿತಿಯಲ್ಲಿ ನಿಯಮದಂತೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮೀಸಲಾತಿ ಅನ್ವಯವಾಗುತ್ತದೆ. ಜಿಲ್ಲಾ ಪಂಚಾಯಿತಿ ಸದಸ್ಯರ ಅವಧಿ ಐದು ವರ್ಷಗಳಾಗಿರುತ್ತದೆ.

ಜಿಲ್ಲಾ ಪಂಚಾಯಿತಿಗೆ ಮೂವತ್ತು ತಿಂಗಳುಗಳ ಅವಧಿಗೆ ಒಬ್ಬ ಅಧ್ಯಕ್ಷ ಮತ್ತು ಒಬ್ಬ ಉಪಾಧ್ಯಕ್ಷ ಆಯ್ಕೆಗೊಳ್ಳುತ್ತಾರೆ. ಆಯ್ಕೆಗೊಂಡ ಅಧ್ಯಕ್ಷನನ್ನು ಜಿಲ್ಲಾಧ್ಯಕ್ಷ ಎಂದು ಕರೆಯಲಾಗುತ್ತದೆ. ಜಿಲ್ಲಾ ಪಂಚಾಯಿತಿಗಳು ಕನಿಷ್ಟ ಎರಡು ತಿಂಗಳಿಗೊಂದು ಸಭೆ ನಡೆಸಬೇಕು ಮತ್ತು ಈ ಸಭೆಗಳ ಅಧ್ಯಕ್ಷತೆಯನ್ನು ಜಿಲ್ಲಾಧ್ಯಕ್ಷರು ವಹಿಸುತ್ತಾರೆ. ಅವರ ಗೈರುಹಾಜರಿಯಲ್ಲಿ ಉಪಾಧ್ಯಕ್ಷರು ಆ ಜವಾಬ್ದಾರಿಯನ್ನು ನಿಭಾಯಿಸುತ್ತಾರೆ. ಪ್ರಕೃತಿ ವಿಕೋಪಗಳು ಸಂಭವಿಸಿದಾಗ ಪರಿಹಾರವಾಗಿ ಒಂದು ಲಕ್ಷರೂಗಳನ್ನು ಅನುದಾನವೆಂದು ಬಿಡುಗಡೆ ಮಾಡುವ ಅಧಿಕಾರ ಜಿಲ್ಲಾಧ್ಯಕ್ಷನಿಗಿರುತ್ತದೆ. ಜಿಲ್ಲಾ ಪಂಚಾಯಿತಿಯ ಸಮರ್ಥ ಆಡಳಿತ ದೃಷ್ಟಿಯಿಂದ ಐದು ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲಾಗುತ್ತದೆ. ಜಿಲ್ಲಾಧಿಕಾರಿಗಳಿಗೆ ಸಮಾನವಾದ ಅಧಿಕಾರಿಯನ್ನು ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ (CEO)ಯನ್ನಾಗಿ ರಾಜ್ಯ ಸರ್ಕಾರ ನೇಮಿಸುತ್ತದೆ. ಈ ಅಧಿಕಾರಿಯು ಜಿಲ್ಲಾ ಪಂಚಾಯಿತಿಯ ಸಭೆಯಲ್ಲಿ, ಚರ್ಚೆಗಳಲ್ಲಿ ಭಾಗವಹಿಸುವ ಅಧಿಕಾರ ಹೊಂದಿದ್ದರೂ. ಮತಚಲಾಯಿಸುವ ಹಕ್ಕು ಇರುವುದಿಲ್ಲ. ಜಿಲ್ಲಾ ಪಂಚಾಯಿತಿ ಕಾರ್ಯ ನಿರ್ವಹಣಾ ಅಧಿಕಾರವನ್ನೂ ಇವರು ಹೊಂದಿರುತ್ತಾರೆ.

ಜಿಲ್ಲಾ ಪಂಚಾಯಿತಿಯೆಂದರೆ ಜಿಲ್ಲಾ ಸರ್ಕಾರವೆಂದರ್ಥ. ಅಭಿವೃದ್ಧಿ ಕಾರ್ಯಗಳನ್ನು ಮತ್ತು ಜನಪ್ರಿಯ ಕಲ್ಯಾಣಯೋಜನೆಗಳನ್ನು ಕಾರ್ಯಗತಗೊಳಿಸುವ ಎಲ್ಲಾ ಅಧಿಕಾರವು ಜಿಲ್ಲಾ ಪಂಚಾಯಿತಿಗಿದೆ. ರಾಜ್ಯ ಸರ್ಕಾರದ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಕಲ್ಯಾಣಯೋಜನೆಗಳು ಜಿಲ್ಲಾ ಪಂಚಾಯಿತಿಯ ಮೂಲಕವೇ ಅನುಷ್ಠಾನಗೊಳ್ಳುತ್ತವೆ. ಇವುಗಳ ಜೊತೆಗೆ ಜಿಲ್ಲಾ ಪಂಚಾಯಿತಿಯು ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ.

- ಸರ್ಕಾರದ ಯೋಜನೆಗಳು ಹಾಗೂ ಕಾರ್ಯಕ್ರಮಗಳ ಯಶಸ್ವಿ ಅನುಷ್ಠಾನಕ್ಕಾಗಿ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳ ನಡುವೆ ಪರಸ್ಪರ ನಂಬಿಕೆ, ವಿಶ್ವಾಸ, ಮತ್ತು ಸಹಕಾರ ಭಾವನೆಯ ವಾತಾವರಣವನ್ನು ಸೃಷ್ಟಿಸುವುದಾಗಿದೆ.
- ಯೋಜನೆಗಳು ಮತ್ತು ಅಭಿವೃದ್ಧಿ ಕಾರ್ಯಗಳನ್ನು ಯಶಸ್ವಿಗೊಳಿಸಲು ಜಿಲ್ಲೆಯ ಎಲ್ಲಾ ಇಲಾಖೆಗಳ ಜೊತೆಗೆ ಸಹಕರಿಸಿ ಸಮನ್ವಯತೆ ಹೊಂದುವುದು.
- ಜಿಲ್ಲೆಯಲ್ಲಿ ಸಹಕಾರಿ ಸಂಘಗಳು, ಸಹಕಾರಿ ಬ್ಯಾಂಕ್‌ಗಳು ಹಾಗೂ ಇನ್ನಿತರೆ ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳು ಕಾರ್ಯನಿರ್ವಹಿಸಿಕೊಂಡು ಹೋಗಲು ಪ್ರೋತ್ಸಾಹ ಮತ್ತು ಬೆಂಬಲ ಒದಗಿಸುವುದು.
- ರಾಜ್ಯ-ಸರ್ಕಾರದ ನಿರ್ದೇಶನದಂತೆ ಕೆಲಸಗಳನ್ನು ಕಾರ್ಯರೂಪಕ್ಕೆ ತರುವುದು.

1993ರ ಪಂಚಾಯತ್ ರಾಜ್ ಕಾಯಿದೆಯ ಪ್ರಕಾರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲು ರಾಜ್ಯಮಟ್ಟದಲ್ಲಿ ಪ್ರತ್ಯೇಕ ಚುನಾವಣಾ ಆಯೋಗವನ್ನು ಸ್ಥಾಪಿಸಲಾಗಿದೆ. ಹೀಗೆ ಸ್ಥಾಪಿತಗೊಂಡ ಚುನಾವಣಾ ಆಯೋಗವು ಕರ್ನಾಟಕದಲ್ಲಿ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳನ್ನು ನಡೆಸಿದೆ.

**ನಗರ ಸ್ಥಳೀಯ ಸಂಸ್ಥೆಗಳು :** ರಾಜ್ಯದಲ್ಲಿ ಹಲವಾರು ನಗರ ಮತ್ತು ಪಟ್ಟಣಗಳಿದ್ದು ಇವುಗಳನ್ನು ನಗರ ಪ್ರದೇಶಗಳೆಂದು ಗುರುತಿಸಲಾಗಿದೆ. ಈ ನಗರ ಪ್ರದೇಶಗಳ ಜನರು ಶಿಕ್ಷಣ, ಆರೋಗ್ಯ, ಸಾರಿಗೆ, ಕುಡಿಯುವ ನೀರು, ನೈರ್ಮಲೀಕರಣ, ಮನರಂಜನೆ, ಇತ್ಯಾದಿಯಾದ ಉತ್ತಮ ಸವಲತ್ತುಗಳನ್ನು ಹೊಂದಿರುವುದರ ಜೊತೆಗೆ ಅನೇಕ ಸಮಸ್ಯೆಗಳನ್ನು ಹೊಂದಿರುತ್ತಾರೆ. ಈ ನಗರವಾಸಿಗಳ ಸಮಸ್ಯೆಗಳಿಗೆ ಪರಿಹಾರ ಒದಗಿಸುವ ಸಲುವಾಗಿ ನಗರಸ್ಥಳೀಯ ಸಂಸ್ಥೆಗಳು ಅಥವಾ ನಗರ ಸ್ಥಳೀಯ ಸ್ವಯಂ ಸರ್ಕಾರಗಳನ್ನು ರಚಿಸಿಕೊಳ್ಳಲಾಗಿದೆ.

**ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮೂರು ಬಗೆ ಅವುಗಳೆಂದರೆ:**

1. ನಗರ ಪಾಲಿಕೆ (ಮಹಾನಗರ ಪಾಲಿಕೆ) – ಪ್ರಮುಖನಗರಗಳು.
2. ನಗರ ಸಭೆಗಳು ಅಥವಾ ಪುರಸಭೆಗಳು – ನಗರ ಪಟ್ಟಣಗಳು.
3. ದಂಡು ಪ್ರದೇಶದ ಭಾಗ – ರಕ್ಷಣಾ ಪಡೆಯ ಹಿಡಿತದಲ್ಲಿರುವ ಪ್ರದೇಶ

ಜನಸಂಖ್ಯೆ, ವರಮಾನ, ಸಾಮಾಜಿಕ ಸ್ಥಿತಿಗತಿಗಳ ಆಧಾರದ ಮೇಲೆ ರಾಜ್ಯ ಸರ್ಕಾರವು ಪ್ರದೇಶವೊಂದನ್ನು ನಗರ ಅಥವಾ ಪಟ್ಟಣವೆಂದು ಘೋಷಿಸುವ ಅಧಿಕಾರ ಹೊಂದಿದೆ. ನಗರದ ಸ್ಥಳೀಯ ಸಂಸ್ಥೆಗಳ ಕಾರ್ಯಗಳು ಹಲವಾರಿದ್ದು ಅವುಗಳಲ್ಲಿ ಪ್ರಮುಖವಾದವುಗಳೆಂದರೆ.

- ಆಯ–ವ್ಯಯ ಪಟ್ಟಿ ತಯಾರಿಸಿ ಮಂಡಳಿಯಿಂದ ಅನುಮೋದನೆ ಪಡೆಯುವುದು.
- ನಗರ ಅಥವಾ ಪಟ್ಟಣದ ಸಂಪೂರ್ಣ ಆಡಳಿತ ನೋಡಿಕೊಳ್ಳುವುದು.
- ಉತ್ತಮ ನಗರ ಯೋಜನೆಯನ್ನು ತಯಾರಿಸಿ ಕಾರ್ಯರೂಪಕ್ಕೆ ತರುವುದು.
- ಉತ್ತಮವಾದ ರಸ್ತೆ, ಸಾರಿಗೆ ವ್ಯವಸ್ಥೆ, ನೀರು ಸರಬರಾಜು, ಶಿಕ್ಷಣ, ವಿದ್ಯುಚ್ಛಕ್ತಿ, ಮಾರುಕಟ್ಟೆ, ಆರೋಗ್ಯ ಹಾಗೂ ಇನ್ನಿತರೆ ಸವಲತ್ತುಗಳನ್ನು ಉತ್ತಮ ರೀತಿಯಲ್ಲಿ ಒದಗಿಸುವುದು.
- ನಗರಗಳಲ್ಲಿ ಒಳಚರಂಡಿ ವ್ಯವಸ್ಥೆ ಮತ್ತು ಘನತ್ಯಾಜ್ಯ ವಸ್ತುಗಳ ವಿಲೇವಾರಿಗೆ ಸೌಕರ್ಯ ಕಲ್ಪಿಸಿ ಸ್ವಚ್ಛತೆ ಕಾಪಾಡುವುದು.
- ಕಟ್ಟಡ ನಿರ್ಮಾಣಕ್ಕೆ ಪರವಾನಗಿ ನೀಡುವುದು, ನಗರ ಸಭೆಯ ಕಟ್ಟಡಗಳು ಹಾಗೂ ಆಸ್ತಿಯನ್ನು ರಕ್ಷಿಸುವುದು.
- ಜನನ ಮರಣಗಳ ನೋಂದಣಿ ಮಾಡಿಕೊಳ್ಳುವುದು.
- ಕ್ರೀಡಾಂಗಣ, ಮನರಂಜನಾ ಮಂದಿರ, ಉದ್ಯಾನವನಗಳನ್ನು ನಿರ್ಮಿಸಿ ಅವುಗಳನ್ನು ನಿರ್ವಹಿಸುವುದು.
- ನಗರದ ಕೊಳೆಗೇರಿವಾಸಿಗಳಿಗೆ ಸೌಕರ್ಯ ಒದಗಿಸುವುದರ ಮೂಲಕ ಅಲ್ಲಿನ ನಿವಾಸಿಗಳ ಜೀವನ ಮಟ್ಟ ಸುಧಾರಿಸುವಂತೆ ನೋಡಿಕೊಳ್ಳುವುದು.
- ಮಕ್ಕಳ ಕಲ್ಯಾಣ ಕೇಂದ್ರಗಳು, ಬಾಲಾಪರಾಧಿ ಗೃಹಗಳು, ಭಿಕ್ಷುಕರ ಕಾಲೋನಿಗಳು, ಅನಾಥಾಶ್ರಮಗಳು, ಹೀಗೆ ಇತ್ಯಾದಿ ಸಹಾಯಕ ಕೇಂದ್ರಗಳನ್ನು ಸ್ಥಾಪಿಸಿ ನಿರ್ವಹಿಸಿಕೊಂಡು ಹೋಗುವುದು.

- ಈಜುಕೊಳ, ಕ್ರೀಡಾಂಗಣ, ಸಂಗ್ರಹಾಲಯ, ವಾಹನ ನಿಲ್ದಾಣ, ವಾಚನಾಲಯ, ಸಾರ್ವಜನಿಕ ಗ್ರಂಥಾಲಯ, ಪಶುವೈದ್ಯಾಲಯ, ಸಿನಿಮಾ ಮಂದಿರ, ಮಾರುಕಟ್ಟೆ ಪ್ರಾಂಗಣ, ಶವಾಗಾರ, ಮುಂತಾದ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣಾ ಕಾರ್ಯಗಳನ್ನು ಮಾಡುವುದು.
- ಮಳೆನೀರು ಕೊಯ್ಲುವಿಕೆಗೆ ಯೋಜನೆ ನಿರ್ಮಿಸಿ ಕಾರ್ಯಗತಗೊಳಿಸುವುದು.
- ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುವುದು.
- ನಗರದ ಹಿಂದುಳಿದ ವರ್ಗದವರ ಮತ್ತು ದುರ್ಬಲ ವರ್ಗದವರ ಸುಧಾರಣೆ ಮತ್ತು ಪ್ರಗತಿಗಾಗಿ ಕ್ರಮ ಕೈಗೊಳ್ಳುವುದು.
- ನಗರ ಅಥವಾ ಪಟ್ಟಣವು ಸ್ವಚ್ಛ, ಸುಂದರ ಮತ್ತು ಹಸಿರಿನಿಂದ ಕಂಗೊಳಿಸಲು ಸೂಕ್ತ ಯೋಜನೆಗಳನ್ನು ಕೈಗೊಳ್ಳುವುದು.

**ವರಮಾನದ ಮೂಲಗಳು :** ನಗರ ಪ್ರದೇಶಗಳ ಅಭಿವೃದ್ಧಿ ಮತ್ತು ಪ್ರಗತಿಗಾಗಿ ಮತ್ತು ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸಿಕೊಳ್ಳಲು ವರಮಾನದ ಅವಶ್ಯಕತೆಯಿದೆ. ನಗರ ಸಭೆಗಳ ಆಧಾಯದ ಪ್ರಮುಖ ಮೂಲಗಳೆಂದರೆ ಕಟ್ಟಡ ತೆರಿಗೆಗಳು, ಖಾಲಿಸ್ಥಳದ ಮೇಲಿನ ತೆರಿಗೆ, ಅಂಗಡಿ ಮತ್ತು ಮಾರಾಟಮಾಡುವ ತಳ್ಳು ಗಾಡಿಗಳ ಮೇಲೆ ವಿಧಿಸುವ ತೆರಿಗೆ, ನೀರಿನ ತೆರಿಗೆ, ಜೊತೆಗೆ ನಗರ ಸಭೆಗಳ ಅಧೀನದ ಕಟ್ಟಡಗಳು, ಮಾರುಕಟ್ಟೆಗಳಲ್ಲಿನ ಮಳಿಗೆಗಳಿಂದ ಬರುವ ಬಾಡಿಗೆ ಹಾಗೂ ಮಾರಾಟ ಮತ್ತು ಮನರಂಜನಾ ಉಪಕರ ಇತ್ಯಾದಿಗಳಾಗಿವೆ. ರಾಜ್ಯ ಸರ್ಕಾರ ನೀಡುವ ಅನುದಾನದಿಂದ ನಗರ ಸಂಸ್ಥೆಗಳು ಕಲ್ಯಾಣ ಕಾರ್ಯಗಳನ್ನು ಕೈಗೊಳ್ಳುತ್ತವೆ.

**ನಗರ ಸ್ಥಳೀಯ ಸಂಸ್ಥೆಗಳ ಸಂರಚನೆ.**

**ನಗರ ಪಾಲಿಕೆಗಳು :** ನಗರ ಪ್ರದೇಶಗಳು ಜನಸಂಖ್ಯೆಯ ಆಧಾರವಾಗಿ ಪಟ್ಟಣ ಮತ್ತು ನಗರ ಪ್ರದೇಶಗಳೆಂದು ವರ್ಗೀಕರಿಸಲ್ಪಟ್ಟಿದ್ದು, 20ರಿಂದ 50 ಸಾವಿರದೊಳಗಿನ ಜನಸಂಖ್ಯೆಯನ್ನು ಹೊಂದಿದ್ದರೆ, ಅದನ್ನು ಪಟ್ಟಣವೆಂದು ಪರಿಗಣಿಸಲಾಗುತ್ತದೆ. 50 ಸಾವಿರದಿಂದ 3 ಲಕ್ಷದೊಳಗಿನ ಜನಸಂಖ್ಯೆಯನ್ನು ಹೊಂದಿರುವ ಪ್ರದೇಶವನ್ನು ನಗರವೆಂತಲೂ ವರ್ಗೀಕರಿಸಲಾಗಿದೆ. ಪಟ್ಟಣದಲ್ಲಿ ಆಡಳಿತ ನಡೆಸುವ ಸಭೆಗೆ ಪುರಸಭೆ ಅಥವಾ ಪಟ್ಟಣ ಸಭೆ ಎಂದು ಕರೆದರೆ ನಗರದ ಆಡಳಿತದ ಮಂಡಳಿಗೆ ನಗರ ಸಭೆ ಎಂದು ಕರೆಯುತ್ತಾರೆ. ಪಟ್ಟಣ ಮತ್ತು ನಗರ ಸಭೆಗಳ ಸದಸ್ಯರುಗಳು ಪ್ರತ್ಯಕ್ಷ ಮತದಾನದ ಮೂಲಕ ಚುನಾಯಿತರಾಗಿ ಆಡಳಿತ ಮಂಡಲಿ ಸಭೆಯ ಸದಸ್ಯ ಅಥವಾ ಕೌನ್ಸಿಲರ್ (Councillor) ಎಂದು ಕರೆಸಿಕೊಳ್ಳುತ್ತಾರೆ. ಈ ಸದಸ್ಯರುಗಳ ಸಂಖ್ಯೆಯು ನಗರ ಅಥವಾ ಪಟ್ಟಣದ ಜನಸಂಖ್ಯೆಯನ್ನು ಆಧರಿಸುತ್ತದೆ. ಪುರಸಭೆಗಳಲ್ಲಿ ಸಾಧಾರಣವಾಗಿ 23 ರಿಂದ 27 ಸದಸ್ಯರಿದ್ದರೆ, ನಗರ ಸಭೆಗಳಲ್ಲಿ 31 ರಿಂದ 37 ಸದಸ್ಯರು ಇರುತ್ತಾರೆ. ಇದರ ಜೊತೆಗೆ ರಾಜ್ಯ ಸರ್ಕಾರವು ಐದು ಜನ ಸದಸ್ಯರುಗಳನ್ನು ಪುರಸಭೆ ಮತ್ತು ನಗರ ಸಭೆಗಳಿಗೆ ನಾಮ ನಿರ್ದೇಶನ ಮಾಡುತ್ತದೆ. ಈ ನಾಮ ನಿರ್ದೇಶಿತ ಸದಸ್ಯರುಗಳಿಗೆ ಸಭೆಯ ಚರ್ಚೆಯಲ್ಲಿ ಭಾಗವಹಿಸುವ ಹಕ್ಕಿದ್ದು ಮತ ಹಾಕುವ ಹಕ್ಕಿಲ್ಲ. ಸ್ಥಳೀಯ ವಿಧಾನಸಭಾ ಶಾಸಕರು, ವಿಧಾನಪರಿಷತ್ತು ಶಾಸಕರು ಮತ್ತು ಲೋಕಸಭಾ ಸದಸ್ಯರುಗಳು ಸಭೆಗಳಲ್ಲಿ ಭಾಗವಹಿಸುವ ಮತ್ತು ಮತ ಹಾಕುವ ಹಕ್ಕನ್ನು ಹೊಂದಿರುತ್ತಾರೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿಯೂ ಸಹ ನಿಯಮಾನುಸಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮೀಸಲಾತಿಯಿದೆ. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರು ಆ ಸಂಸ್ಥೆಗಳ ಮುಖ್ಯಸ್ಥರಾಗಿರುತ್ತಾರೆ. ಇವರುಗಳನ್ನು ಆಯ್ಕೆಗೊಂಡ ಸದಸ್ಯರು ಚುನಾಯಿಸುತ್ತಾರೆ. ಅಧ್ಯಕ್ಷರು

ಸಭೆಯ ಅಧ್ಯಕ್ಷತೆವಹಿಸಿ ಕಲಾಪಗಳು ಸುಗಮವಾಗಿ ನಡೆಯುವಂತೆ ನೋಡಿಕೊಳ್ಳುತ್ತಾರೆ. ಅಧ್ಯಕ್ಷರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಈ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಾವಧಿಯು ಐದು ವರ್ಷಗಳಾಗಿದ್ದು ಕೆಲವು ವಿಶೇಷ ಸಂದರ್ಭಗಳಲ್ಲಿ ಅಧಿಕಾರಾವಧಿಯನ್ನು ಮುಂದುವರಿಸುವ ಹಕ್ಕನ್ನು ರಾಜ್ಯ ಸರ್ಕಾರ ಹೊಂದಿದೆ. ಸ್ಥಳೀಯ ಸಂಸ್ಥೆಗಳ ಸಮರ್ಥ ಆಡಳಿತದ ನಿರ್ವಹಣೆಗಾಗಿ ನಾಲ್ಕು ಸ್ಥಾಯಿಸಮಿತಿಗಳನ್ನು ರಚಿಸಿಕೊಳ್ಳಲಾಗುತ್ತದೆ. ರಾಜ್ಯ ಸರ್ಕಾರದಿಂದ ನೇಮಕಗೊಂಡ ಅಥವಾ ಮುಖ್ಯಾಧಿಕಾರಿ ಅಥವಾ ಚೀಫ್ ಆಫೀಸರ್ ಮುಖ್ಯ ಆಡಳಿತಾಧಿಕಾರಿಯಾಗಿ ಸ್ಥಳೀಯ ಸಂಸ್ಥೆಯ ಎಲ್ಲಾ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಾನೆ.

**ಮಹಾನಗರ ಪಾಲಿಕೆಗಳು**

1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಕಾಯಿದೆ ಅನ್ವಯ ಮಹಾನಗರ ಪಾಲಿಕೆಗಳನ್ನು ರಚಿಸಲಾಗಿದೆ. ಎರಡು ಲಕ್ಷಕ್ಕಿಂತ ಹೆಚ್ಚು ಜನ ಸಂಖ್ಯೆ ಮತ್ತು ಕೋಟಿಗಿಂತಲೂ ಹೆಚ್ಚು ಆಧಾಯವಿರುವ ನಗರಪ್ರದೇಶಗಳಲ್ಲಿ ಮಹಾನಗರ ಪಾಲಿಕೆಗಳನ್ನು ರಚಿಸಲಾಗಿದೆ. ನಗರ ಪಾಲಿಕೆಯ ಸದಸ್ಯರುಗಳು ಚುನಾವಣೆಗಳ ಮೂಲಕ ಚುನಾಯಿತರಾಗಿ ಪಾಲಿಕೆ ಸದಸ್ಯ (Corporator) ಎನಿಸಿಕೊಳ್ಳುತ್ತಾರೆ. ಈ ಸದಸ್ಯರುಗಳ ಸಂಖ್ಯೆ ಜನಸಂಖ್ಯೆ ಆಧಾರಿತವಾಗಿದ್ದು ಸಾಧಾರಣವಾಗಿ 30ರಿಂದ 100ರವರೆಗೆ ಇರುತ್ತದೆ. ಪಾಲಿಕೆ ಗಾತ್ರವನ್ನು ಸರ್ಕಾರ ನಿರ್ಧರಿಸುತ್ತದೆ.

**ಕರ್ನಾಟಕದಲ್ಲಿ ಏಳು ನಗರ ಪಾಲಿಕೆಗಳು ಹಾಗೂ ಒಂದು ಬೃಹತ್ ಮಹಾನಗರಪಾಲಿಕೆ ಇವೆ. ಅವುಗಳೆಂದರೆ**

1. ಮೈಸೂರು 2. ಹುಬ್ಬಳ್ಳಿ–ಧಾರವಾಡ 3. ಬಳ್ಳಾರಿ 4. ಬೆಳಗಾವಿ 6. ಗುಲ್ಬರ್ಗ 7. ದಾವಣಗೆರೆ ಬೆಂಗಳೂರು ನಗರ ಪಾಲಿಕೆಯನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (BBMP) ಎಂದು ಕರೆಯಲಾಗಿದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (BBMP) ಯಲ್ಲಿ ಒಟ್ಟು 198 ಜನ ಪಾಲಿಕೆ ಸದಸ್ಯರಿದ್ದಾರೆ.

ನಗರವು ಚಿಕ್ಕಚಿಕ್ಕ ಚುನಾವಣಾ ವಿಭಾಗಗಳಾಗಿ ವಿಂಗಡಣೆಗೊಂಡು ಬಡಾವಣೆ ಅಥವಾ ವಾರ್ಡ್ ಎಂದು ಕರೆಯಲ್ಪಟ್ಟಿವೆ. ಪ್ರತಿ ವಾರ್ಡಿನಿಂದ ಒಬ್ಬ ಪಾಲಿಕೆ ಸದಸ್ಯ ಚುನಾಯಿತನಾಗುತ್ತಾನೆ. ಈ ಸದಸ್ಯರುಗಳು ಪ್ರತ್ಯಕ್ಷವಾದ ಮತದಾನದ ಮೂಲಕ ಚುನಾಯಿತರಾಗುತ್ತಾರೆ. ಪಾಲಿಕೆಗಳಲ್ಲೂ ಸಹ ನಿಯಮಾನುಸಾರ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮೀಸಲಾತಿ ಅನುಪಾಲನೆಯಾಗುತ್ತಿದೆ. ಚುನಾಯಿತ ಸದಸ್ಯರ ಜೊತೆಗೆ ರಾಜ್ಯ ಸರ್ಕಾರವು ನಗರ ಯೋಜನೆ, ಶಿಕ್ಷಣ, ಆರೋಗ್ಯ, ಸ್ಥಳೀಯ ಆಡಳಿತದಲ್ಲಿ ಪರಿಣತೆಯುಳ್ಳ ಐದು ಜನರನ್ನು ಸದಸ್ಯರನ್ನಾಗಿ ನೇಮಕ ಮಾಡುತ್ತದೆ. ಸರ್ಕಾರದಿಂದ ನೇಮಕಗೊಂಡ ಸದಸ್ಯರಿಗೆ ಮತ ಚಲಾಯಿಸುವ ಹಕ್ಕಿರುವುದಿಲ್ಲ. ಆದರೆ ಸಭೆಗೆ ಹಾಜರಾಗಿ ಅಲ್ಲಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಬಹುದು. ಪಾಲಿಕೆ ವ್ಯಾಪ್ತಿಯ ಶಾಸಕರುಗಳು ಮತ್ತು ಲೋಕಸಭಾ ಸದಸ್ಯರುಗಳಿಗೆ ಸಭೆಯಲ್ಲಿ ಭಾಗವಹಿಸುವ ಮತ್ತು ಮತ ಚಲಾಯಿಸುವ ಹಕ್ಕುಗಳಿವೆ. ಪಾಲಿಕೆಯ ಅಧಿಕಾರವಧಿಯು ಐದು ವರ್ಷಗಳಾಗಿದ್ದು ವಿಶೇಷ ಸಂದರ್ಭದಲ್ಲಿ ರಾಜ್ಯ ಸರ್ಕಾರ ಗರಿಷ್ಟ ಒಂದು ವರ್ಷಗಳ ಅವಧಿಗೆ ವಿಸ್ತರಿಸಬಹುದು.

ಮಹಾಪೌರ ಮತ್ತು ಉಪ–ಮಹಾಪೌರರು ಪಾಲಿಕೆಯ ನಾಯಕರುಗಳು ಎನಿಸಿಕೊಳ್ಳುತ್ತಾರೆ. ಇವರುಗಳು ಪಾಲಿಕೆಯ ಸದಸ್ಯರುಗಳಿಂದ ಚುನಾಯಿಸಲ್ಪಡುತ್ತಾರೆ. ಇವರುಗಳ ಅಧಿಕಾರವಧಿಯು

ಒಂದು ವರ್ಷವಾಗಿರುತ್ತದೆ. ಮಹಾಪೌರರು ಪಾಲಿಕೆಯ ಸಭೆಗಳ ಅಧ್ಯಕ್ಷತೆ ವಹಿಸಿ, ಸಭೆಯು ಕೈಗೊಂಡ ತೀರ್ಮಾನಗಳನ್ನು ಕಾರ್ಯಗತಗೊಳಿಸುವ ಕ್ರಮ ತೆಗೆದುಕೊಳ್ಳುತ್ತಾರೆ. ಮಹಾಪೌರರು ಪಾಲಿಕೆಯ ಕಾರ್ಯನಿರ್ವಹಣೆಯನ್ನು ನಿಯಂತ್ರಿಸುತ್ತಾರೆ. ಸಮರ್ಥ ಆಡಳಿತ ನೀಡಲು ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಲಾಗುತ್ತದೆ.

2011ರಲ್ಲಿ ಕರ್ನಾಟಕ ನಗರ ಪಾಲಿಕೆಯ ಕಾಯ್ದೆಗೆ ತಿದ್ದುಪಡಿ ತಂದಿದೆ. ಈ ತಿದ್ದುಪಡಿ ಕಾಯ್ದೆಯು ಬೆಂಗಳೂರನ್ನೂ ಒಳಗೊಂಡಂತೆ ಕರ್ನಾಟಕದ ಏಳು ಪಾಲಿಕೆಗಳಿಗೆ ಅನ್ವಯವಾಗುತ್ತದೆ. ಕಾಯ್ದೆಯು ಪಾಲಿಕೆಯ ಕಾರ್ಯಚಟುವಟಿಕೆಗಳಲ್ಲಿ ಸಮುದಾಯವು ಭಾಗವಹಿಸುವ ಅವಕಾಶವನ್ನು ಒದಗಿಸಿದೆ. ಈ ಕಾಯ್ದೆಯ ಪ್ರಕಾರ ಪ್ರತಿ ಪಾಲಿಕೆಯು ಕ್ಷೇತ್ರ ಅಥವಾ ಪ್ರದೇಶ ಸಭೆ ಮತ್ತು ವಲಯ ಸಮಿತಿ (Ward Committe)ಗಳೆಂಬ ಎರಡು ಹೆಚ್ಚುವರಿ ಮಂಡಳಿಗಳನ್ನು ಹೊಂದಿರುತ್ತದೆ. ಈ ಮಂಡಳಿಗಳು ಪಾಲಿಕೆಯ ಅಭಿವೃದ್ಧಿಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತವೆ.

ಪಾಲಿಕೆಯ ಕಾರ್ಯನಿರ್ವಹಣೆಯನ್ನು ಪಾಲಿಕೆಯ ಆಯುಕ್ತರು ನೋಡಿಕೊಳ್ಳುತ್ತಾರೆ. ಸಾಮಾನ್ಯವಾಗಿ ಭಾರತೀಯ ಆಡಳಿತ ಸೇವೆಯ (IAS) ಅಧಿಕಾರಿಯು ಈ ಹುದ್ದೆಯನ್ನು ಅಲಂಕರಿಸುತ್ತಾರೆ. ಈತನ ಅಧಿಕಾರವಧಿ ಮೂರು ವರ್ಷಗಳಾಗಿದ್ದು ಇವರನ್ನು ರಾಜ್ಯ ಸರ್ಕಾರ ನೇಮಿಸುತ್ತದೆ. ಪಾಲಿಕೆಯ ಆಯುಕ್ತನು ಎಲ್ಲಾ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ಬೇಕಾದ ಮಾಹಿತಿ ಒದಗಿಸುತ್ತಾನೆ. ಆಯುಕ್ತನು ಮಹಾಪೌರನಿಗೆ ಸಹಕರಿಸಿ ಪಾಲಿಕೆಯ ನಿರ್ಧಾರಗಳನ್ನು ಕಾರ್ಯಗತಗೊಳಿಸಲು ಸಂಪೂರ್ಣ ತೊಡಗಿಸಿಕೊಳ್ಳುತ್ತಾನೆ.



## ಅಭ್ಯಾಸಗಳು

**I ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ಪ್ರಸ್ತುತ ಚಾಲಿಯಲ್ಲಿರುವ ಕರ್ನಾಟಕ ಪಂಚಾಯಿತ್ ರಾಜ್ ಕಾಯ್ದೆಯು ಜಾರಿಯಾದ ವರ್ಷ ______________ .

2 ಗ್ರಾಮದ ಎಲ್ಲಾ ಮತದಾರರು ಪಾಲ್ಗೊಳ್ಳಬಹುದಾದ ಗ್ರಾಮದ ಮಂಡಳಿಯನ್ನು ________________ .ಎಂದು ಕರೆಯಲಾಗುತ್ತದೆ.

3 ತಾಲೂಕು ಪಂಚಾಯಿತಿಗಳಿಗೆ ಗ್ರಾಮ ಪಂಚಾಯಿತಿಯ ಅಧ್ಯಕ್ಷರನ್ನು ಆಯ್ಕೆಮಾಡುವಾಗ ___________ ಕ್ರಮವನ್ನು ಅನುಸರಿಸಲಾಗುತ್ತದೆ.

4 ಜಿಲ್ಲಾ ಪಂಚಾಯಿತಿಯ ದಿನಂಪ್ರತಿಯ ಕೆಲಸ ನೋಡಿಕೊಳ್ಳಲು ನೇಮಕಗೊಳ್ಳುವ ಅಧಿಕಾರಿಯನ್ನು _______________ ಎಂದು ಕರೆಯುತ್ತಾರೆ.

5 ಬೆಂಗಳೂರು ಸೇರಿದಂತೆ ಕರ್ನಾಟಕದಲ್ಲಿರುವ ಒಟ್ಟು ನಗರ ಪಾಲಿಕೆಗಳ ಸಂಖ್ಯೆ ___________________ ಆಗಿದೆ.

**II ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.**

1 ಸ್ಥಳೀಯ ಸ್ವಯಂ ಸರ್ಕಾರಗಳ ಉದ್ದೇಶಗಳಾವುವು?

2 ನಿಮ್ಮ ಕ್ಷೇತ್ರದ ಸ್ಥಳೀಯ ಮಂಡಳಿ ಹೇಗೆ ರಚಿತವಾಗಿದೆ?

3 ನಿಮ್ಮ ಸ್ಥಳೀಯ ಮಂಡಳಿಯ ಕಾರ್ಯಗಳನ್ನು ತಿಳಿಸಿ?

4 ನಿಮ್ಮ ಸ್ಥಳೀಯ ಮಂಡಳಿಯ ಆದಾಯದ ಮೂಲಗಳಾವುವು?

5 ಸ್ಥಳೀಯ ಸಂಸ್ಥೆಗಳಲ್ಲಿ ಮತ ಚಲಾಯಿಸಲು ಹಕ್ಕಿರುವ ಮತ್ತು ಹಕ್ಕಿಲ್ಲದ ಸದಸ್ಯರುಗಳನ್ನು ಪಟ್ಟಿಮಾಡಿ.

6 ಸ್ಥಳೀಯ ಸಂಸ್ಥೆಗಳಲ್ಲಿ ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳುವ ಅವಶ್ಯಕತೆಯನ್ನು ತಿಳಿಸಿ.

7 ಸ್ಥಳೀಯ ಸಂಸ್ಥೆಗಳಲ್ಲಿ ಮಿಸಲಾತಿಯನ್ನು ಕಲ್ಪಿಸಲಾಗಿರುವ ಸದಸ್ಯ ವರ್ಗದ ಪಟ್ಟಿ ನೀಡಿ.

8 ಒಂದು ಪ್ರದೇಶವನ್ನು ಪಟ್ಟಣ ಮತ್ತು ನಗರವೆಂದು ವರ್ಗೀಕರಿಸಲು ಇರಬೇಕಾದ ಜನಸಂಖ್ಯಾ ಪ್ರಮಾಣವೆಷ್ಟು?

9 ಕರ್ನಾಟಕದಲ್ಲಿ ಪಂಚಾಯತಿ ರಾಜ್ಯದ ಮೂರು ಹಂತಗಳಾವುವು?

## III ಚಟುವಟಿಕೆಗಳು.

1 ನಿಮ್ಮ ಸ್ಥಳೀಯ ಸಂಸ್ಥೆಯ ಅಧ್ಯಕ್ಷರನ್ನು ಶಾಲೆಗೆ ಆಹ್ವಾನಿಸಿ ನಿಮ್ಮ ಪ್ರದೇಶದ ಸಮಸ್ಯೆಗಳನ್ನು ಹಾಗೂ ಅವುಗಳ ನಿವಾರಣೆಗೆ ಕೈಗೊಂಡಿರುವ ಯೋಜನೆಗಳ ಬಗ್ಗೆಯೂ(ಅವರೊಂದಿಗೆ) ಚರ್ಚಿಸಿ.

2 ನೀವು ನಿಮ್ಮ ಸ್ಥಳೀಯ ಸಂಸ್ಥೆಯ ಸದಸ್ಯರಾದರೆ ಅಲ್ಲಿನ ಸಮಸ್ಯೆಗಳ ಪರಿಹಾರಕ್ಕಾಗಿ ನೀವು ಕೈಗೊಳ್ಳುವ ಕ್ರಮಗಳಾವುವು?

3 ಶಿಕ್ಷಕರ ಸಹಾಯದಿಂದ ಅಣಕು ಸ್ಥಳೀಯ ಸಂಸ್ಥೆಯ ಸಭೆಯನ್ನು ನಿಮ್ಮ ಶಾಲೆಯಲ್ಲಿ ನಡೆಸಿ.

4 ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಒದಗಿಸುವುದರ ಬಗ್ಗೆ ಚರ್ಚಿಸಿ.

## IV ಯೋಜನಾ ಕಾರ್ಯಗಳು.

1 ಪ್ರಾಚೀನ ಭಾರತದಲ್ಲಿ ಕಾರ್ಯನಿರ್ವಹಿಸಿದ್ದ ಸ್ಥಳೀಯ ಸಂಸ್ಥೆಗಳ ಬಗ್ಗೆ ಅಧ್ಯಯನ ಮಾಡಿ ಮಾಹಿತಿ ಸಂಗ್ರಹಿಸಿ.

2 ನೀವು ವಾಸಿಸುವ ಪ್ರದೇಶದಲ್ಲಿ ಸಮೀಕ್ಷೆ ಕೈಗೊಂಡು ಅಲ್ಲಿನ ಯಾವ ಸಮಸ್ಯೆಗಳಿಗೆ ಅವಶ್ಯಗಮನ ಕೊಡಬೇಕಾಗಿದೆ ಎಂಬುದರ ಬಗ್ಗೆ ಮಾಹಿತಿ ಸಂಗ್ರಹಿಸಿ.

3 ನೀವು ವಾಸಿಸುವ ಪ್ರದೇಶದಲ್ಲಿ ಸಮೀಕ್ಷೆ ಕೈಗೊಂಡು ಸರ್ಕಾರ ಕಲ್ಪಿಸಿರುವ ಸವಲತ್ತುಗಳ ಪಟ್ಟಿ ತಯಾರಿಸಿ ಅಲ್ಲಿನ ಜನರಿಗೆ ಈ ಸವಲತ್ತುಗಳು ಹೇಗೆ ಲಾಭದಾಯಕವಾಗಿವೆ ಎಂಬುವ ವರದಿ ತಯಾರಿಸಿ.

4 ಸ್ಥಳೀಯ ಸಂಸ್ಥೆಯ ಐದು ಅಥವಾ ಆರು ಜನ ಸದಸ್ಯರನ್ನು ಸಂಪರ್ಕಿಸಿ ಅವರುಗಳು ಪ್ರತಿನಿಧಿಸಿದ ಪ್ರದೇಶಗಳನ್ನು ಅಭಿವೃದ್ಧಿಗೊಳಿಸಲು ಕೈಗೊಂಡಿರುವ ಕ್ರಮಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ವರದಿ ತಯಾರಿಸಿ.

# ಸಮಾಜಶಾಸ್ತ್ರ

## ಅಧ್ಯಾಯ-1

## ಮಾನವ ಮತ್ತು ಸಮಾಜ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಮಾನವನು ಸಮಾಜಜೀವಿ ಹೇಗೆಂಬುದನ್ನು ಅರ್ಥೈಸಿಕೊಳ್ಳುವುದು.
- ಮಾನವನ ಸಾಮಾಜೀಕರಣ ಭಾವನೆಗಳ ವ್ಯಕ್ತತೆ, ಬಗ್ಗೆ ತಿಳಿಯುವುದು.
- ಆರಂಭಿಕ ಸಮಾಜಶಾಸ್ತ್ರಜ್ಞರ ಬಗ್ಗೆ ಪರಿಚಯಿಸಿಕೊಳ್ಳುವುದು.

ಜಗತ್ತಿನ ಜೀವಜಂತುಗಳಲ್ಲಿ ಮಾನವರು ಮಾತ್ರ ತಮ್ಮ ಇರುವಿಕೆಯ ಬಗ್ಗೆ ಅರಿವನ್ನು ಹೊಂದಿದ್ದಾರೆ. ತಮ್ಮ ಜೀವನದ ಉದ್ದೇಶದ ಬಗ್ಗೆ ಚಿಂತನೆ ಮಾಡುತ್ತಾರೆ. ಇದರಿಂದ ಮಾನವರ ಮನಸ್ಸಿನಲ್ಲಿ ಹಲವಾರು ಪ್ರಶ್ನೆಗಳು ಹುಟ್ಟಿಕೊಂಡವು. ಮಾನವನು ಏಕೆ ಸಮಾಜ ಜೀವಿಯಾಗಿದ್ದಾನೆ? ಮಾನವ ದೈವಸೃಷ್ಟಿಯೋ ಅಥವಾ ದೇವರೇ ಮಾನವ ಸೃಷ್ಟಿಯೋ? ಸಮೂಹ ಸಮೂಹಗಳ ನಡುವೆ ವ್ಯತ್ಯಾಸವೇಕೆ? ಜನರನ್ನು ಮತ್ತು ಸಮೂಹಗಳನ್ನು ಒಂದುಗೂಡಿಸುವ ಶಕ್ತಿ ಯಾವುದು? ಸಮಾಜ ನಿರಂತರವಾಗಿ ಬದಲಾವಣೆಗೊ ಳಪಡುತ್ತಿರುವುದೇಕೆ? ಈ ಬದಲಾವಣೆ ಪ್ರಗತಿಸೂಚಕವೇ? ಇಂತಹ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿಯಲು ಮತ್ತು ಮಾನವ ಸಮಾಜವನ್ನು ಕ್ರಮಬದ್ಧವಾಗಿ ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಪ್ರಯತ್ನ ನೂರೈವತ್ತು ವರ್ಷಗಳ ಹಿಂದೆ ಆರಂಭವಾಯಿತು.

ಇಂತಹ ಪ್ರಯತ್ನದ ಫಲವಾಗಿ ಹೊಸದೊಂದು ಅಧ್ಯಯನ ಶಾಸ್ತ್ರವು ಹುಟ್ಟಿಕೊಂಡಿತು. ಈ ಅಧ್ಯಯನ ಶಾಸ್ತ್ರವೇ ಸಮಾಜಶಾಸ್ತ್ರ. ಮಾನವ ಸಮಾಜದ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡಲು ನಾವು ಪ್ರಾಣಿಸಮಾಜ ಮತ್ತು ಮಾನವ ಸಮಾಜದ ನಡುವೆ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕಾಗುತ್ತದೆ.

ಮಾನವ ಇತರ ಪ್ರಾಣಿಗಳಿಗಿಂತ ಭಿನ್ನ. ಅವನು ನಾಗರಿಕತೆ ಮತ್ತು ವಿಕಾಸದಲ್ಲಿ ಮುಂದುವರೆದಿದ್ದಾನೆ. ಮಾನವನು ಸೃಜನಶೀಲ. ಇದಕ್ಕೆ ಅನೇಕ ಕಾರಣಗಳಿವೆ. ಅದರಲ್ಲಿ ಒಂದು, ಈತನ ಕೈಬೆರಳುಗಳು. ಅದರಲ್ಲಿಯೂ ಹೆಬ್ಬೆರಳು. ಪ್ರಾಣಿಗಳಿಗೆ ಮಾನವನಂತೆ ಬೆರಳುಗಳಿದ್ದರೂ ಸಹ ಅವು ಅಷ್ಟೊಂದು ಸಹಾಯಕವಾಗಿಲ್ಲ. ನಾವು ಬರೆಯುವಾಗ ಗಮನಿಸಿದರೆ ನಮ್ಮ ಹೆಬ್ಬೆರಳಿನ ಪ್ರಾಮುಖ್ಯತೆ ಗೊತ್ತಾಗುತ್ತದೆ. ಎರಡನೆಯದಾಗಿ, ಆತನ ನೇರ ನಿಲುವು. ತನಗೆ ಒದಗಬಹುದಾದ ಅಪಾಯವನ್ನು ಎದುರಿಸಲು ಇದು ಅತ್ಯಂತ ಸಹಕಾರಿ. ಮೂರನೆಯದಾಗಿ, ಮಾನವನ ಹಲ್ಲುಗಳು. ಇವು ಆಹಾರ ಸೇವನೆಗೆ ಪೂರಕವಾಗಿದ್ದು ಪರೋಕ್ಷವಾಗಿ ಅವನ ದೈಹಿಕ, ಮಾನಸಿಕ ಆರೋಗ್ಯದ ಬೆಳವಣಿಗೆಗೆ ಕಾರಣವಾಗಿವೆ. ನಾಲ್ಕನೆಯ ಮತ್ತು ಅತೀ ಮುಖ್ಯವಾದ ಕಾರಣವೆಂದರೆ, ಮಾನವನ ಮೆದುಳು. ಈ ಮೆದುಳು ವಿಕಾಸಹೊಂದಿದ್ದು, ಇದರ ಗ್ರಹಿಕೆ ಮತ್ತು ಕ್ರಿಯಾಶೀಲತೆಯಿಂದಲೇ ಇಂದು ನಾವು ಕಾಣುತ್ತಿರುವ ನಾಗರಿಕ ಸಮಾಜ ಸೃಷ್ಟಿಯಾಗಿರುವುದು.

### ಮಾನವನು ಸಮಾಜ ಜೀವಿ

ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧ ಅನನ್ಯವಾದುದು. ವ್ಯಕ್ತಿಯಿಲ್ಲದೆ ಸಮಾಜವಿಲ್ಲ. ಸಮಾಜವಿಲ್ಲದೆ ವ್ಯಕ್ತಿಯಿಲ್ಲ. ಆದುದರಿಂದಲೇ ಮಾನವ ಸಮಾಜದ ಸೃಷ್ಟಿ, ಸಮಾಜವು ಮಾನವನ ಸೃಷ್ಟಿ

ಎಂದು ಕೆಲವು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ನಾವು ಒಂದುಕ್ಷಣ ಕಣ್ಣುಮುಚ್ಚಿ ನಾನೊಬ್ಬನೇ ನನ್ನ ಊರಿನಲ್ಲಿ ಇರಲು ಸಾಧ್ಯವೇ? ಎಂದು ಯೋಚಿಸೋಣ. ಆಗ ಎಲ್ಲರಿಗೂ ಸಿಗುವ ಉತ್ತರ ಒಂದೇ. ಅದು 'ಅಸಾಧ್ಯ' ಎಂಬುದಲ್ಲವೇ? ಮಾನವ ಸಂಘಜೀವಿ. ಎಲ್ಲರೊಟ್ಟಿಗೂ ಬದುಕಲು ಪ್ರಯತ್ನಿಸುತ್ತಾನೆ. ನಮ್ಮೆಲ್ಲರ ಬೆಳವಣಿಗೆಗೆ ಸಮಾಜ ಅಗತ್ಯ. ಏಕೆಂದರೆ, ಮಾನವನ ಅಸ್ತಿತ್ವಕ್ಕೆ ಸಾಮಾಜಿಕ ಸಂಬಂಧಗಳು ಅಗತ್ಯವಾಗಿವೆ. ಆದುದರಿಂದಲೇ ಮಾನವ ಸಮಾಜವನ್ನು ಸಾಮಾಜಿಕ ಸಂಬಂಧಗಳ ಬಲೆ ಎಂದು ಕರೆಯಲಾಗುತ್ತದೆ. ಮಾನವನನ್ನು ಸಮಾಜ ಜೀವಿ ಎಂದು ಕರೆಯಲಾಗುತ್ತದೆ.

**ಸಾಮಾಜೀಕರಣ**

ನಾವು ಸಮಾಜದ ಸದಸ್ಯರಾಗಬೇಕಾದರೆ ಸಮಾಜದಲ್ಲಿಯೇ ಬಾಳಬೇಕು. ಸಮಾಜದಲ್ಲಿ ಇಲ್ಲದೆ ಹೋದರೆ, ಈಗ ನಾವು ಕಲಿತಿರುವ ಭಾಷೆ, ಓದು, ಆಟ, ಯೋಚನಾ ವಿಧಾನ ಮತ್ತು ನಮ್ಮ ದೈಹಿಕ ಭಾಷೆ ಮೊದಲಾದವುಗಳನ್ನು ಕಲಿತುಕೊಳ್ಳಲು ಸಾಧ್ಯವಿಲ್ಲ. ಹೀಗೆ ಕಲಿತುಕೊಳ್ಳುವ ಕ್ರಿಯೆಯನ್ನು ಸಾಮಾಜೀಕರಣ ಎನ್ನುತ್ತಾರೆ. ಕುಟುಂಬ, ಶಾಲೆ, ಸ್ನೇಹಿತರ ಗುಂಪು, ಸಮೂಹ ಮಾಧ್ಯಮಗಳು ಮೊದಲಾದವು ನಮ್ಮ ಸಾಮಾಜೀಕರಣಕ್ಕೆ ನೆರವಾಗುತ್ತವೆ. ಕುಟುಂಬವು ನಮಗೆ ಆಹಾರ, ಪಾಲನೆ ಪೋಷಣೆ, ಶಿಕ್ಷಣ, ರಕ್ಷಣೆ ಮೊದಲಾದುವನ್ನು ನೀಡುತ್ತದೆ. ಪೋಷಕರು ನಮ್ಮನ್ನು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯಕರವಾಗಿ ಬೆಳೆಯುವಂತೆ ನೋಡಿಕೊಳ್ಳುತ್ತಾರೆ.

ಶಾಲೆಯಲ್ಲಿ ಔಪಚಾರಿಕ ಶಿಕ್ಷಣ ದೊರೆಯುತ್ತದೆ. ಸ್ನೇಹಿತರ ಗುಂಪಿನಲ್ಲಿ ನಾವು ಇತರರೊಡನೆ ಸಹಕರಿಸಿ ಒಟ್ಟಾಗಿ ಬಾಳುವುದನ್ನು ಕಲಿಯುತ್ತೇವೆ. ಸಮೂಹ ಮಾಧ್ಯಮಗಳು ನಮಗೆ ಹೊರಜಗತ್ತಿನ ತಿಳಿವಳಿಕೆಯನ್ನು ನೀಡುತ್ತವೆ. ಅದಕ್ಕೆ ಹೊಂದಿಕೊಂಡು ಹೋಗಲು ನೆರವಾಗುತ್ತವೆ. ಇದರಿಂದ ಸಮಾಜದಲ್ಲಿ ಮಾನವನು ಯಶಸ್ವಿಯಾಗಿ ಬಾಳಲು ಸಾಧ್ಯವಾಗುತ್ತದೆ.

**ಮಾನವ ಮಾನವನಂತಾಗಲು ಸಾಮಾಜಿಕ ಪರಿಸರ ಅಗತ್ಯ**

ಮಾನವನು ಸಾಮಾಜಿಕ ಪರಿಸರದಲ್ಲಿ ಬೆಳೆಯದೆ ಹೋದರೆ ತನ್ನಲ್ಲಿ ಮಾನವನ ಗುಣಗಳನ್ನು ಮೈಗೂಡಿಸಿಕೊಳ್ಳಲಾರ. ಸಮಾಜ ಮತ್ತು ಸಮೂಹದ ಹೊರತಾಗಿ ವಾಸಿಸುವವನು ಸಾಮಾಜೀಕರಣಕ್ಕೆ ಒಳಗಾಗುವುದಿಲ್ಲ. ಈ ಹೇಳಿಕೆಯನ್ನು ಸಮರ್ಥಿಸಲು ಕೆಳಕಂಡ ಉದಾಹರಣೆಯನ್ನು ನೋಡಬಹುದು.

1920ರಲ್ಲಿ ಮಿಡ್ನಾಪುರದಲ್ಲಿ ಸಿಕ್ಕ ಕಮಲ ಎಂಬ ಹುಡುಗಿಯು 9 ವರ್ಷಗಳನ್ನು ಕಾಡಿನಲ್ಲಿ ಪ್ರಾಣಿಗಳೊಂದಿಗೆ ಕಳೆದಿದ್ದಳು. ಅಲ್ಲಿ ಹಸಿ ಮಾಂಸ ತಿನ್ನುತ್ತಾ ಪಶುಗಳಂತೆ ನಾಲ್ಕು ಕಾಲುಗಳಲ್ಲಿ ನಡೆಯುತ್ತಿದ್ದಳು. ಆ ನಂತರ ಮನುಷ್ಯ ಸಹವಾಸದಿಂದ ಬೇಯಿಸಿದ ಪದಾರ್ಥಗಳನ್ನು ತಿನ್ನುವುದು, ಮಾತನಾಡುವುದು, ಇತರೆ ಮಕ್ಕಳಂತೆ ವರ್ತಿಸುವುದನ್ನು ಕಲಿತಳು. ಅವಳಿಗೆ ಸ್ವಂತ ಪ್ರಜ್ಞೆ ಇರಲಿಲ್ಲ. ಈ ಉದಾಹರಣೆಯಿಂದ ಕಂಡುಬರುವುದೇನೆಂದರೆ ಮಾನವ ಮಾನವ ಸಮಾಜದಲ್ಲಿ ಇಲ್ಲದೆ ಹೋದರೆ ಅವನು ಪ್ರಾಣಿಯಂತೆ ಆಗುತ್ತಾನೆ. ಇದನ್ನು ಅನೇಕ ಪ್ರಯೋಗಗಳ ಮೂಲಕ ಸಮಾಜ ವಿಜ್ಞಾನಿಗಳು ಸಮರ್ಥಿಸಿದ್ದಾರೆ.

**ಮಾನವರು ಮತ್ತು ಭಾಷೆ**

ನಾವು ನಮ್ಮ ಭಾವನೆಗಳನ್ನು ಹೇಗೆ ವ್ಯಕ್ತಪಡಿಸುತ್ತೇವೆ? ದೈಹಿಕ ಸಂಜ್ಞೆ, ಸೂಚನೆಗಳ ಮೂಲಕ ನಮ್ಮ ಭಾವನೆಗಳಾದ ಹಸಿವು, ನಿದ್ರೆ, ಬಾಯಾರಿಕೆ, ನೋವು ಸಂತೋಷ ಮೊದಲಾದುವುಗಳನ್ನು ತಿಳಿಸಬಹುದು. ಆದರೆ ಮಾನವರು ತಮ್ಮ ಈ ಎಲ್ಲಾ ಭಾವನೆಗಳನ್ನು ಆಂಗಿಕ ಭಾಷೆಯ ಮೂಲಕ ತಿಳಿಸಲು ಸಾಧ್ಯವಿಲ್ಲ. ಅಂತಹ ಸಂದರ್ಭದಲ್ಲಿ ಭಾಷೆಯು ಅನಿವಾರ್ಯವಾಗುತ್ತದೆ.

ನಾವು ಮಾತನಾಡುವಾಗ ಅಪ್ಪ, ಅಮ್ಮ, ಅಣ್ಣ, ಅಕ್ಕ, ಚಿಕ್ಕಪ್ಪ, ದೊಡ್ಡಪ್ಪ ಮೊದಲಾದ ಪದಗಳನ್ನು ಬಳಸುತ್ತೇವೆ. ನೀವು ಅಣ್ಣ, ಅಕ್ಕ ಎನ್ನುವ ಪದಗಳು ನಮ್ಮ ಹಿರಿಯ ಸಹೋದರ ಮತ್ತು ಸಹೋದರಿಯನ್ನು ಉದ್ದೇಶಿಸಿ ಬಳಸುವ ಪದಗಳಾಗಿವೆ. ನಿರ್ದಿಷ್ಟವಾಗಿ ಸಂಬಂಧಗಳನ್ನು ಮತ್ತು ಭಾವನೆಗಳನ್ನು ಅರ್ಥಮಾಡಿಕೊಳ್ಳಲು ಭಾಷೆಯು ಬಹಳ ಮುಖ್ಯ.

ಮನುಷ್ಯನಿಗೆ ಭಾಷೆಯಿದೆ. ಪ್ರಾಣಿಗಳಿಗೆ ಭಾಷೆಯಿಲ್ಲ. ಅದೇ ಮನುಷ್ಯನಿಗೂ ಮತ್ತು ಪ್ರಾಣಿಗೂ ಇರುವ ವ್ಯತ್ಯಾಸ. ಭಾಷೆ ಇಲ್ಲದೆ ಹೋದರೆ ಏನಾಗುತ್ತಿತ್ತೆಂದು ಒಮ್ಮೆ ಕಲ್ಪಿಸಿಕೊಳ್ಳಿ. ಪಠ್ಯಪುಸ್ತಕಗಳಾಗಲಿ, ಶಾಲೆಗಳಾಗಲಿ, ಸಮೂಹ ಮಾಧ್ಯಮಗಳಾಗಲಿ ನಾಗರಿಕತೆಯಾಗಲಿ ಅಸ್ತಿತ್ವದಲ್ಲಿರುತ್ತಿರಲಿಲ್ಲ. ಮಾನವ ಸಮಾಜವು ಪ್ರಾಣಿ ಸಮಾಜದಂತೆಯೇ ಇರುವ ಸಾಧ್ಯತೆ ಇತ್ತು. ಆದುದರಿಂದ ಸಮಾಜಶಾಸ್ತ್ರದಲ್ಲಿ ಸಮಾಜವನ್ನು ಅಧ್ಯಯನ ಮಾಡುವಾಗ ಭಾಷೆಯನ್ನು ಬಹಳ ಪ್ರಮುಖ ಅಂಶವೆಂದು ಪರಿಗಣಿಸಲಾಗುತ್ತದೆ.



**ಆರಂಭಿಕ ಸಮಾಜಶಾಸ್ತ್ರಜ್ಞರು**

ಸಮಾಜ, ಸಂಸ್ಕೃತಿ, ವರ್ತನೆ, ಸಾಮಾಜಿಕ ಸಂಬಂಧಗಳು ಮೊದಲಾದವುಗಳನ್ನು ಕುರಿತು ಅಧ್ಯಯನ ಮಾಡುವವರೇ ಸಮಾಜಶಾಸ್ತ್ರಜ್ಞರು. ಅಂತಹ ಕೆಲವು ಆರಂಭಿಕ ಸಮಾಜಶಾಸ್ತ್ರಜ್ಞರನ್ನು ಕುರಿತು ಪರಿಚಯ ಮಾಡಿಕೊಳ್ಳಬಹುದು.

ಆಗಸ್ಟ್ ಕಾಮ್ಟೆ ಅವರು ಸಮಾಜವನ್ನು ಅಧ್ಯಯನ ಮಾಡುವ ವಿಜ್ಞಾನಕ್ಕೆ 'ಸಮಾಜ ಶಾಸ್ತ್ರ' ಎಂದು ಕರೆದರು. ಆದುದರಿಂದ ಅವರನ್ನು ಸಮಾಜಶಾಸ್ತ್ರದ ಪಿತಾಮಹ ಎಂದು ಕರೆಯಲಾಗುತ್ತದೆ. ಹರ್ಬರ್ಟ್ ಸ್ಪೆನ್ಸರ್ ಅವರು ಹತ್ತೊಂಭತ್ತನೇ ಶತಮಾನದ ಬ್ರಿಟಿಷ್ ಸಮಾಜಶಾಸ್ತ್ರಜ್ಞರು. ಅವರು ಸಮಾಜದ ವಿಕಾಸವನ್ನು ಅಧ್ಯಯನ ಮಾಡಿದರು.


**ಆಗಸ್ಟ್ ಕಾಮ್ಟೆ**

ಫ್ರಾನ್ಸ್‌ನ ಎಮಿಲಿ ಡರ್ಕಿಮ್ ಎಂಬ ಸಮಾಜಶಾಸ್ತ್ರಜ್ಞರು 19ನೇ ಶತಮಾನದ ಕಡೆಯ ಭಾಗ ಹಾಗೂ 20ನೇ ಶತಮಾನದ ಆದಿಭಾಗದಲ್ಲಿದ್ದರು. ಇವರು ಸಮಾಜಶಾಸ್ತ್ರವನ್ನು ವಿಜ್ಞಾನವನ್ನಾಗಿ ಮಾಡಲು ಶ್ರಮಿಸಿದರು. ಮ್ಯಾಕ್ಸ್‌ವೆಬರ್ ಅವರು ಜರ್ಮನಿಯ ಸಮಾಜಶಾಸ್ತ್ರಜ್ಞರು. ಇವರು ಅರ್ಥಶಾಸ್ತ್ರ, ತತ್ವಶಾಸ್ತ್ರ ಹಾಗೂ ಇತಿಹಾಸಗಳನ್ನು ಕುರಿತು ಅಪಾರ ಪಾಂಡಿತ್ಯಗಳಿಸಿದ್ದರು. ನೌಕರಶಾಹಿ ಮತ್ತು ಕ್ರಿಶ್ಚಿಯನ್ ಧರ್ಮ ಕುರಿತು ಸಮಾಜಶಾಸ್ತ್ರೀಯ ಅಧ್ಯಯನ ಮಾಡಿದರು.



ಹರ್ಬಟ್ ಸ್ಪೆನ್ಸರ್



ಮ್ಯಾಕ್ಸ್‌ವೆಬರ್

ಕಾರ್ಲ್‌ಮಾರ್ಕ್ಸ್‌ರವರು ಜರ್ಮನಿಯ ತತ್ವಜ್ಞಾನಿ. ಇವರು ಇತಿಹಾಸ, ಅರ್ಥಶಾಸ್ತ್ರ, ತತ್ವಶಾಸ್ತ್ರ ಮತ್ತು ಕ್ರಿಶ್ಚಿಯನ್ ಧರ್ಮಶಾಸ್ತ್ರಗಳಲ್ಲಿ ಅಪಾರ ತಿಳುವಳಿಕೆಯನ್ನು ಹೊಂದಿದ್ದರು. ಸಮಾಜಶಾಸ್ತ್ರದ ವ್ಯಾಪ್ತಿಯನ್ನು ವಿಸ್ತರಿಸಿದರು. ಭಾರತಕ್ಕೆ ಬ್ರಿಟಿಷರು ಬಂದನಂತರ 1914ನೇ ಇಸವಿಯಲ್ಲಿ ಮುಂಬೈ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರವನ್ನು ಪರಿಚಯಿಸಲಾಯಿತು. ಭಾರತದ ಪ್ರಮುಖ ಸಮಾಜಶಾಸ್ತ್ರಜ್ಞರೆಂದರೆ ಜಿ.ಎಸ್. ಘುರ್ಯೆ, ಎಂ.ಎನ್. ಶ್ರೀನಿವಾಸ್, ಎ.ಆರ್. ದೇಸಾಯಿ, ಇರಾವತಿ ಕರ್ವೆ. ಎಸ್.ಸಿ.ದುಬೆ ಮೊದಲಾದವರು.



ಕಾರ್ಲ್ ಮಾರ್ಕ್ಸ್



ಎಮಿಲಿ ಡರ್ಕಿಮ್

# ಅಭ್ಯಾಸಗಳು

**I ಖಾಲಿ ಬಿಟ್ಟಿರುವ ಸ್ಥಳಗಳನ್ನು ಭರ್ತಿ ಮಾಡಿರಿ.**

1 ಮಾನವನು__________ ಜೀವಿ.

2 ಔಪಾಚಾರಿಕ ಶಿಕ್ಷಣ __________ ಯಲ್ಲಿ ದೊರೆಯುತ್ತದೆ.

3 ಸಮಾಜಶಾಸ್ತ್ರದ ಪಿತಾಮಹ__________

4 ಮಾನವನು ಮಾನವನಂತಾಗಲು__________ ಅಗತ್ಯ

5 ಮಾನವನು ತಮ್ಮ ಭಾವನೆಯನ್ನು __________ ತಮ್ಮ ಭಾವನೆ ವ್ಯಕ್ತಪಡಿಸುತ್ತಾರೆ.

**II ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ಮಾನವ ಸಮಾಜ ಜೀವಿ ಹೇಗೆ?

2 ಸಾಮಾಜೀಕರಣ ಎಂದರೇನು?

3 ಮಿಡ್ನಾಪುರದಲ್ಲಿ ಸಿಕ್ಕ ಕಮಲೆಯು ಹೇಗಿದ್ದಳು?

4 ಆರಂಭಿಕ ಸಮಾಜಶಾಸ್ತ್ರಜ್ಞರನ್ನು ಹೆಸರಿಸಿ.

**III ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿ.**

1 ಮಾನವನು ಸಮಾಜ ಜೀವಿ ಎಂಬುದನ್ನು ವಿವರಿಸಿ.

2 ಮಾನವರಿಗೂ ಭಾಷೆಗೂ ಇರುವ ಸಂಬಂಧವನ್ನು ಬರೆಯಿರಿ.

3 ಮಾನವ ಸಮಾಜಕ್ಕೂ ಪ್ರಾಣಿ ಸಮಾಜಕ್ಕೂ ಇರುವ ವ್ಯತ್ಯಾಸ ತಿಳಿಸಿ.

4 ಸಮಾಜಶಾಸ್ತ್ರವು ಏನನ್ನೂ ಅಧ್ಯಯನ ಮಾಡುತ್ತದೆ?

**IV ಚಟುವಟಿಕೆ.**

1 ಸಮಾಜಶಾಸ್ತ್ರಜ್ಞರ ಚಿತ್ರಗಳನ್ನು ಸಂಗ್ರಹಿಸಿರಿ.

## ಅಧ್ಯಾಯ–2

# ಮಾನವ ಮತ್ತು ಸಂಸ್ಕೃತಿ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಸಂಸ್ಕೃತಿಯ ಬೆಳವಣಿಗೆಯ ಬಗ್ಗೆ ತಿಳಿಯುವುದು.
- ಸಾಂಸ್ಕೃತಿಕ ವೈವಿಧ್ಯತೆ ಮತ್ತು ಆಚಾರ ವಿಚಾರಗಳ ಬಗ್ಗೆ ವಿಶ್ಲೇಷಿಸುವುದು.

ನಮ್ಮ ದಿನನಿತ್ಯದ ಸಂಭಾಷಣೆಯಲ್ಲಿ ಸಂಸ್ಕೃತಿ ಎಂಬ ಪದವು ಉತ್ತಮ ವರ್ತನೆಯನ್ನು ಸೂಚಿಸಲು, ಆಚಾರ ವಿಚಾರ, ರೂಢಿ ಸಂಪ್ರದಾಯಗಳನ್ನು ವಿವರಿಸಲು ವ್ಯಾಪಕವಾಗಿ ಬಳಸಲ್ಪಡುತ್ತದೆ ಹಾಗಾದರೆ ಸಮಾಜಶಾಸ್ತ್ರದಲ್ಲಿ ಈ ಪದವನ್ನು ಹೇಗೆ ಬಳಸಲಾಗುತ್ತದೆ ಎಂಬುದನ್ನು ತಿಳಿದುಕೊಳ್ಳೋಣ.

ಸಂಸ್ಕೃತಿ ಎನ್ನುವ ಪದವು ಇಂಗ್ಲಿಷ್ ಭಾಷೆಯಲ್ಲಿ **'ಕಲ್ಚರ್'** ಎಂದು ಜನಪ್ರಿಯವಾಗಿದೆ. ಈ ಪದವು ಲ್ಯಾಟಿನ್ ಭಾಷೆಯ **'ಕೋಲೆರೆ'** ಪದದಿಂದ ಬಂದಿದೆ. ಅಂದರೆ ಕೃಷಿ ಮಾಡು ಎಂದರ್ಥ. ಸಂಸ್ಕೃತಿಯನ್ನು ವಿವಿಧ ಸಮಾಜಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವಿವರಿಸಿದ್ದಾರೆ. ಮಾನವನು ಸಮಾಜದ ಸದಸ್ಯನಾಗಿದ್ದುಕೊಂಡು ಕಲಿತುಕೊಳ್ಳುವ ಜ್ಞಾನ, ಕಲೆ, ನೈತಿಕ ನಿಯಮ, ಕಾನೂನು, ರೂಢಿ, ಸಾಮರ್ಥ್ಯ, ನೈಪುಣ್ಯಗಳನ್ನು ಒಳಗೊಂಡ ಒಂದು ಸಂಕೀರ್ಣವಾದ ವ್ಯವಸ್ಥೆಯಾಗಿದೆ ಅಥವಾ ನಾವು ಏನಾಗಿದ್ದೇವೆಯೋ ಅದೇ ಸಂಸ್ಕೃತಿ.

ಸಂಸ್ಕೃತಿಯು ಆಯಾ ಸಮಾಜದ ಭೌಗೋಳಿಕ ರಚನೆ, ಪರಂಪರೆ, ಅಗತ್ಯಗಳು ಮುಂತಾದವುಗಳನ್ನು ಅವಲಂಬಿಸಿ ರೂಪುಗೊಂಡಿರುತ್ತದೆ. ಒಂದು ಸಮಾಜದ ಸಂಸ್ಕೃತಿಯು ಮತ್ತೊಂದು ಸಮಾಜದ ಸಂಸ್ಕೃತಿಗಿಂತ ಭಿನ್ನವಾಗಿರುತ್ತದೆ. ಆದುದರಿಂದ ನಾವು ಯಾವುದೇ ಸಂಸ್ಕೃತಿಯನ್ನು ಉತ್ತಮ ಸಂಸ್ಕೃತಿ ಎಂದೂ, ಮತ್ತೊಂದು ಸಂಸ್ಕೃತಿಯನ್ನು ಕೆಟ್ಟ ಸಂಸ್ಕೃತಿ ಎಂದೂ ಹೇಳಲು ಸಾಧ್ಯವಿಲ್ಲ. ಸಂಸ್ಕೃತಿಯು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ವರ್ಗಾವಣೆಯಾಗುತ್ತದೆ. ಈಗ ನಾವು ಕಲಿತಿರುವ ಭಾಷೆ ನಮ್ಮ ಹಿರಿಯರಿಂದ ನಮಗೆ ಬಂದಿದೆ. ಸಂಸ್ಕೃತಿಯು ನಿರಂತರವಾಗಿ ಬದಲಾವಣೆಗೆ ಒಳಪಡುತ್ತಿರುತ್ತದೆ. ನೀವೇ ಗಮನಿಸಿರುವಂತೆ ಉಡುಪಿನ ಶೈಲಿ, ಕೇಶ ಶೈಲಿ, ಆಹಾರ ಶೈಲಿ ಕಳೆದ ಹತ್ತುವರ್ಷಗಳಲ್ಲಿ ಸಾಕಷ್ಟು ಬದಲಾಗಿದೆ.

### ಸಾಂಸ್ಕೃತಿಕ ವೈವಿಧ್ಯತೆ

ನಾವು ಕರ್ನಾಟಕದ ರಾಜಧಾನಿ ಬೆಂಗಳೂರಿನ ಸುಪ್ರಸಿದ್ಧವಾದ ರಸ್ತೆಯೊಂದರಲ್ಲಿ ನಡೆದುಹೋಗುತ್ತಿದ್ದೇವೆ ಎಂದು ಭಾವಿಸೋಣ. ಆಗ ನಮ್ಮ ಕಣ್ಣಿಗೆ ವಿವಿಧ ರೀತಿಯ ಉಡುಪುಗಳನ್ನುಟ್ಟ ಜನರು ಕಣ್ಣಿಗೆ ಬೀಳುತ್ತಾರೆ. ವಿವಿಧ ಜನಾಂಗದವರು ಕಾಣಿಸಿಕೊಳ್ಳುತ್ತಾರೆ. ವಿವಿಧ ಭಾಷೆಗಳಲ್ಲಿ ಜನರು ಸಂಭಾಷಿಸುವುದು ಕಂಡುಬರುತ್ತದೆ.

ಯಾವುದೇ ಸಮಾಜದಲ್ಲಿ ಒಂದೇ ರೀತಿ ಎನ್ನುವ ಸಂಸ್ಕೃತಿ ಇರಲು ಸಾಧ್ಯವಿಲ್ಲ. ವಿವಿಧ ಧರ್ಮ, ಜೀವನ ವಿಧಾನ ಆಧರಿಸಿ ಬೇರೆ ಬೇರೆ ರೀತಿಯ ಸಂಸ್ಕೃತಿಗಳು ಕಂಡುಬರುತ್ತವೆ. ಇದನ್ನು ನಾವು ವೈವಿಧ್ಯಮಯ ಸಂಸ್ಕೃತಿ ಎಂದು ಕರೆಯುತ್ತೇವೆ.

ಸಂಸ್ಕೃತಿಗಳು ಬೇರೆ ಬೇರೆಯಾಗಿದ್ದರೂ ಸಹ ಒಂದು ಮತ್ತೊಂದನ್ನು ಗಾಢವಾಗಿ ಪ್ರಭಾವಿಸುವುದೂ ಕಂಡುಬರುತ್ತದೆ. ಉದಾಹರಣೆಗೆ ಹೆಣ್ಣುಮಕ್ಕಳು ಧರಿಸುವ ಚೂಡಿದಾರ್ ಮೊಘಲರಿಂದ ಬಂದಂತಹ ಉಡುಪು. ಹಾಗೆಯೇ ಸಾಮಾನ್ಯವಾಗಿ ಗಂಡಸರು ಧರಿಸುವ ಪ್ಯಾಂಟು, ಶರ್ಟು, ಇಂಗ್ಲಿಷ್ ಭಾಷೆ ಬ್ರಿಟೀಷರಿಂದ ಬಂದಿವೆ. ಭಾರತದಲ್ಲಿ ನೂರಾರು ಬುಡಕಟ್ಟುಗಳು, ಸಾವಿರಾರು ಜಾತಿಗಳು, ಹಲವು ಜನಾಂಗಗಳು, ನೂರಾರು ಭಾಷೆಗಳು ಹೀಗೆ ವೈವಿಧ್ಯವಾದ ಸಂಸ್ಕೃತಿಯು ಕಂಡುಬರುತ್ತದೆ. ಆದುದರಿಂದ ಭಾರತದಲ್ಲಿ ವಿವಿಧತೆಯಲ್ಲಿ ಏಕತೆ ಕಂಡುಬರುತ್ತದೆ.

**ಆಚಾರ ವಿಚಾರಗಳು**

ನಾವು ಸಂಸ್ಕೃತಿ ಹಾಗೂ ಸಾಂಸ್ಕೃತಿಕ ವೈವಿಧ್ಯತೆಯನ್ನು ಕುರಿತು ತಿಳಿದುಕೊಂಡ ಮೇಲೆ ಸಂಸ್ಕೃತಿಯ ಅಂಶಗಳನ್ನು ತಿಳಿದುಕೊಳ್ಳೋಣ. ಸಂಸ್ಕೃತಿಯ ಅಂಶಗಳೆಂದರೆ, ನಂಬಿಕೆಗಳು, ಮೌಲ್ಯಗಳು, ನಿಯಮಗಳು, ಲೋಕ ರೂಢಿಗಳು ಮತ್ತು ನೈತಿಕ ಅಂಶಗಳಾಗಿವೆ. ಸರಳವಾಗಿ ಇವುಗಳನ್ನು ಆಚಾರ ವಿಚಾರಗಳೆನ್ನಬಹುದು.

ಸ್ವಾತಂತ್ರ್ಯ, ಪ್ರಾಮಾಣಿಕತೆ, ಶುಚಿತ್ವ, ವಿಧೇಯತೆ, ರಾಷ್ಟ್ರಪ್ರೇಮ ಮೊದಲಾದವು ಮೌಲ್ಯಗಳಾಗಿವೆ. ಮೌಲ್ಯಗಳೆಂದರೆ ಸಮಾಜವು ವ್ಯಕ್ತಿಗಳಿಂದ ನಿರೀಕ್ಷಿಸುವ ನಡತೆಯ ಕ್ರಮ ಎಂದು ಭಾವಿಸಬಹುದು. ಪ್ರತಿಯೊಂದು ಸಂಸ್ಕೃತಿಯಲ್ಲಿಯೂ ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನು ನಿರ್ಧರಿಸುವಲ್ಲಿ ಮೌಲ್ಯಗಳು ನೆರವಾಗುತ್ತವೆ.

ನಿಯಮಗಳಿಗೆ ಪೂರಕವಾಗಿ ಲೋಕರೂಢಿಗಳು ಮತ್ತು ನೈತಿಕ ನಿಯಮಗಳಿರುತ್ತವೆ. ಲೋಕರೂಢಿಗಳೆಂದರೆ ನಾವು ದಿನನಿತ್ಯದ ಜೀವನದಲ್ಲಿ ಮತ್ತೆ ಮತ್ತೆ ತೊಡಗುವ ಚಟುವಟಿಕೆಗಳು. ಉದಾಹರಣೆಗೆ–ಊಟ ಮಾಡುವುದು, ನಿದ್ರಿಸುವುದು, ಶುಭಾಶಯ ಹೇಳುವುದು ಇತ್ಯಾದಿ ಚಟುವಟಿಕೆಗಳನ್ನು ಹೆಚ್ಚು ಯೋಚಿಸದೆ ರೂಢಿಯ ಆಧಾರದ ಮೇಲೆ ಮಾಡುತ್ತೇವೆ. ನೀವು ಊಟ ಮಾಡುವಾಗ ಅಥವಾ ಶಾಲೆಯಲ್ಲಿ ಕುಳಿತುಕೊಳ್ಳುವಾಗ ಹೇಗೆ ಊಟ ಮಾಡಬೇಕು, ಹೇಗೆ ಕುಳಿತುಕೊಳ್ಳಬೇಕು ಎಂಬ ಪ್ರಶ್ನೆಯನ್ನು ದಿನವೂ ಕೇಳುವುದಿಲ್ಲ. ನಿಮಗೆ ರೂಢಿಯಿಂದಲೇ ಇವೆಲ್ಲಾ ಅಭ್ಯಾಸವಾಗಿರುತ್ತದೆ. ನಮ್ಮ ದಿನನಿತ್ಯದ ಚಟುವಟಿಕೆಗಳು ಯಾವುದೇ ಅಡೆತಡೆಯಿಲ್ಲದೆ ಸಾಗಲು ಲೋಕರೂಢಿಗಳು ನೆರವಾಗಿವೆ.



## ಅಭ್ಯಾಸಗಳು

**I ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ಸಂಸ್ಕೃತಿ ಎಂದರೆ ____________ ಎಂದರ್ಥ.

2 ಲೋಕ ರೂಢಿಗಳೆಂದರೆ ನಾವು ____________ ಮತ್ತೆ ಮತ್ತೆ ತೊಡಗಿಸಿಕೊಳ್ಳುವ ಚಟುವಟಿಕೆಗಳು.

3 ಭಾರತದಲ್ಲಿ ____________ಯಲ್ಲಿ ಏಕತೆ ಕಂಡುಬರುತ್ತದೆ.

## II ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.

1 ಸಂಸ್ಕೃತಿ ಎಂದರೇನು?

2 ನಿಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಇರುವ ಸಾಂಸ್ಕೃತಿಕ ವೈವಿಧ್ಯತೆಗೆ ಉದಾಹರಣೆ ಕೊಡಿ.

3 ಆಚಾರ ವಿಚಾರಗಳು ಎಂದರೇನು?

4 ಆಚಾರ ವಿಚಾರಗಳಿಗೆ ಉದಾಹರಣೆ ಕೊಡಿ.

## III ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿ.

1 ಲೋಕರೂಢಿಗಳೆಂದರೇನು? ಉದಾಹರಣೆ ಕೊಡಿ.

2 ಸಾಂಸ್ಕೃತಿಕ ವೈವಿಧ್ಯತೆಯನ್ನು ವಿವರಿಸಿ.

3 ಸಂಸ್ಕೃತಿಯ ಗುಣಲಕ್ಷಣಗಳನ್ನು ತಿಳಿಸಿ.

## IV ಚಟುವಟಿಕೆ.

1 ನಿಮ್ಮ ಊರಿನಲ್ಲಿ ನಡೆಯುವ ಜಾತ್ರೆಗೆ ಸಂಬಂಧಿಸಿದಂತೆ ಹಿರಿಯರಿಂದ ಮಾಹಿತಿ ಸಂಗ್ರಹಿಸಿ. ಜಾತ್ರೆಯ ರೀತಿ ನೀತಿಗಳ ಪಟ್ಟಿ ತಯಾರಿಸಿ.

## ಅಧ್ಯಾಯ–3

# ದಿನನಿತ್ಯದ ಜೀವನದಲ್ಲಿ ಸಮಾಜಶಾಸ್ತ್ರ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ದಿನ ನಿತ್ಯ ಜೀವನದಲ್ಲಿನ ಸಾಮಾಜಿಕ ಒಡನಾಟದ ಬಗ್ಗೆ ತಿಳಿಯುವುದು.
- ಸಾಮಾಜಿಕ ಜೀವನದಲ್ಲಿ ವ್ಯಕ್ತಿಯ ಪಾತ್ರ ಪ್ರಜ್ಞೆಯನ್ನು ಅರ್ಥೈಸಿಕೊಳ್ಳುವುದು.

**ದೈನಂದಿನ ಜೀವನ**

ಕೆಲವರು ಮಹಿಳೆಯರ ಬಗೆಗೆ ಮಾತನಾಡುವಾಗ ಹೆಂಗಸರಿಗೆ ಹೆಚ್ಚು ತಿಳುವಳಿಕೆ ಇರುವುದಿಲ್ಲ ಎಂಬ ಹೇಳಿಕೆಯನ್ನು ಆಗಾಗ ವ್ಯಕ್ತಪಡಿಸುತ್ತಿರುತ್ತಾರೆ. ಈ ಹೇಳಿಕೆಯಲ್ಲಿ ಮಹಿಳೆಯರನ್ನು ಕಡೆಗಣಿಸಿರುವುದು ಮತ್ತು ಪುರುಷರಿಗಿಂತ ಶಕ್ತಿಹೀನರೆಂದು ಭಾವಿಸಿರುವುದು ಗೋಚರಿಸುತ್ತದೆ. ಆದರೆ ಇದು ಮಹಿಳೆಯರನ್ನು ಕುರಿತು ಹೇಳುವ ಪೂರ್ವಗ್ರಹದ ಸಾಮಾನ್ಯ ಮಾತೇ ಹೊರತು ವೈಜ್ಞಾನಿಕ ಸತ್ಯವಲ್ಲ, ತಿಳುವಳಿಕೆಗೆ ಹೆಣ್ಣುಗಂಡು ಭೇದವಿರುವುದಿಲ್ಲ.

ಮೇಲಿನ ಉದಾಹರಣೆಯಿಂದ ಅರ್ಥವಾಗುವುದೇನೆಂದರೆ ಸಾಮಾನ್ಯ ಜ್ಞಾನವು ಅನೇಕ ಸಾರಿ ನಮ್ಮ ದಿನನಿತ್ಯದ ಜೀವನದಲ್ಲಿ ನೆರವಾದರೂ ಕೂಡ ಕೆಲವು ಮುಖ್ಯವಾದ ಪ್ರಶ್ನೆಗಳಿಗೆ ಉತ್ತರವನ್ನು ನೀಡಲು ವಿಫಲವಾಗುತ್ತದೆ. ಅಂತಹ ಸಂದರ್ಭದಲ್ಲಿ ನಮಗೆ ಸಮಾಜಶಾಸ್ತ್ರವು ನೆರವಾಗುತ್ತದೆ. ಮಹಿಳೆಯರನ್ನು ಕುರಿತು ಅಧ್ಯಯನ ಮಾಡಿ ಅವರೂ ಸಹ ಪುರುಷರಷ್ಟೇ ಶಕ್ತಿಶಾಲಿಗಳೂ, ಸಮಾನರೂ ಎಂಬುದನ್ನು ವೈಜ್ಞಾನಿಕವಾಗಿ ನಿರೂಪಿಸಲು ಸಾಧ್ಯವಾಗುತ್ತದೆ. ಮೇಲಿನ ವಿವರಣೆಗಳಿಂದ ತಿಳಿದುಬರುವುದೇನೆಂದರೆ ಸಮಾಜಶಾಸ್ತ್ರವು ನಮಗೆ ಸಮಾಜದ ಬಗೆಗೆ, ನಮ್ಮ ದಿನನಿತ್ಯದ ಜೀವನದ ಬಗೆಗೆ ಸರಿಯಾದ ಜ್ಞಾನವನ್ನು ನೀಡುತ್ತದೆ. ಯಾವುದೇ ವಿಚಾರವನ್ನು ಪೂರ್ವಾಗ್ರಹವಿಲ್ಲದೆ ಅಧ್ಯಯನ ಮಾಡಲು ನೆರವಾಗುತ್ತದೆ.

**ವ್ಯಕ್ತಿ, ದೈಹಿಕ ಭಾಷೆ ಮತ್ತು ಸಂಭಾಷಣೆ**

ನಾವು ನಮ್ಮ ದಿನನಿತ್ಯದ ಜೀವನದಲ್ಲಿ ಅನೇಕ ಜನರೊಡನೆ ಒಡನಾಡುತ್ತೇವೆ. ಈ ಸಾಮಾಜಿಕ ಒಡನಾಟವನ್ನು ಸಾಮಾಜಿಕ ಅಂತರ್‌ಕ್ರಿಯೆ ಎಂದು ಕರೆಯಲಾಗುತ್ತದೆ. ಸಾಮಾಜಿಕ ಒಡನಾಟವೆಂದರೆ ಇಬ್ಬರಿಗಿಂತ ಹೆಚ್ಚು ವ್ಯಕ್ತಿಗಳು ಪ್ರತಿನಿತ್ಯವೂ ಭಾಷೆ, ಸಂಕೇತಗಳ ಮೂಲಕ ಪರಸ್ಪರ ಸಂವಹನ ನಡೆಸಿ ಒಬ್ಬರು ಮತ್ತೊಬ್ಬರ ನಡವಳಿಕೆ ಮತ್ತು ಯೋಚನೆಯ ಮೇಲೆ ಪರಿಣಾಮ ಬೀರುವುದಾಗಿದೆ.

ಸಂವಹನ ನಡೆಸದೆ ನಮ್ಮ ದಿನನಿತ್ಯದ ಜೀವನವು ಮುನ್ನಡೆಯಲು ಸಾಧ್ಯವಿಲ್ಲ. ನಾವು ಯಾವ ಭಾಷೆಯಲ್ಲಿ ಮಾತನಾಡುತ್ತೇವೆಂಬುದು ಯಾವ ಪ್ರದೇಶದಲ್ಲಿ ವಾಸಿಸಿದ್ದೇವೆ ಎಂಬುದರ ಮೇಲೆ ನಿರ್ಧಾರವಾಗುತ್ತದೆ. ಅದಕ್ಕೆ ಅನುಗುಣವಾಗಿ ನಾವು ನಮ್ಮ ಭಾಷೆಯನ್ನು ರೂಢಿಸಿಕೊಳ್ಳುತ್ತೇವೆ. ಇಲ್ಲದೆ ಹೋದರೆ ನಮಗೆ ಜೀವನ ನಡೆಸುವುದು ಕಷ್ಟಕರವಾಗುತ್ತದೆ. ಕೆಲವು ಸಾರಿ ನಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ನಾವು ವಿಭಿನ್ನ ರೀತಿಯ ಮಾಧ್ಯಮಗಳನ್ನು ಬಳಸುತ್ತೇವೆ. ಭಾಷೆ ಬರದೆ ಹೋದರೆ ಸಂಭಾಷಣೆ ನಡೆಸಲು ಸಾಧ್ಯವಿಲ್ಲ. ಅಂತಹ ಸಂದರ್ಭದಲ್ಲಿ ದೈಹಿಕ ಭಾಷೆಯ ಮೂಲಕವೋ, ಮುಖಭಾವದ ಮೂಲಕವೋ ನಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತೇವೆ.

**ಪಾತ್ರ ಪ್ರಜ್ಞೆ**

ನೀವು ಆಸ್ಪತ್ರೆಗೆ ಹೋದಾಗ ವೈದ್ಯರನ್ನು ಮತ್ತು ದಾದಿಯರನ್ನು ಗಮನಿಸಿರಬಹುದು. ವೈದ್ಯರು ರೋಗಿಯನ್ನು ಪರೀಕ್ಷೆ ಮಾಡಿದ ಮೇಲೆ ಅದಕ್ಕೆ ಅಗತ್ಯವಾದ ಔಷಧಿಯನ್ನು ಮತ್ತು ಚಿಕಿತ್ಸೆಯನ್ನು ಸೂಚಿಸುತ್ತಾರೆ. ಅವರ ಸೂಚನೆಗೆ ಅನುಗುಣವಾಗಿ ದಾದಿಯು ಔಷಧಿಯನ್ನು ನೀಡಿ ರೋಗಿಯ ಶುಶ್ರೂಷೆಯನ್ನು ಮಾಡುತ್ತಾರೆ. ಹಾಗೆಯೇ ತರಗತಿಯಲ್ಲಿ ಉಪಾಧ್ಯಾಯರು ಬಂದ ಕೂಡಲೇ ನಿಮ್ಮನ್ನು ಕೆಲವು ಪ್ರಶ್ನೆಗಳನ್ನು ಕೇಳುತ್ತಾರೆ. ಪ್ರಶ್ನೆಗಳನ್ನು ಕೇಳಿ ನೀವು ಓದಿಕೊಂಡು ಬಂದಿದ್ದೀರೋ ಇಲ್ಲವೋ ಎಂಬುದನ್ನು ಪರೀಕ್ಷಿಸುತ್ತಾರೆ ಹಾಗೂ ನೀವು ಅಧ್ಯಾಪಕರಿಂದ ನಿಮಗೆ ಅರ್ಥವಾಗದ ವಿಷಯಗಳನ್ನು ಕೇಳಿ ಉತ್ತರಗಳನ್ನು ಪಡೆಯುತ್ತೀರಿ.

ಆದರೆ ಆಸ್ಪತ್ರೆಗೆ ಹೋಗಿ ವೈದ್ಯರನ್ನು ನೀವು ಶಾಲೆಯ ಪಾಠ ಕುರಿತಂತೆ ಪ್ರಶ್ನೆಗಳನ್ನು ಕೇಳುವುದಿಲ್ಲ. ಅಥವಾ ಉಪಾಧ್ಯಾಯರಿಂದ ಕಾಯಿಲೆಗೆ ಸಂಬಂಧಿಸಿದಂತೆ ಔಷಧಿಗಳನ್ನು ಸೂಚಿಸುವಂತೆ ನಿರೀಕ್ಷಿಸುವುದಿಲ್ಲ. ನಾವು ಏಕೆ ಹೀಗೆ ಮಾಡುತ್ತೇವೆ? ವೈದ್ಯರಿಂದ ಆರೋಗ್ಯ ಪರೀಕ್ಷೆಯನ್ನು, ಶಿಕ್ಷಕರಿಂದ ಪಾಠ ಮಾಡುವುದನ್ನು, ದಾದಿಯಿಂದ ಶುಶ್ರೂಷೆಯನ್ನು ನಿರೀಕ್ಷಿಸುತ್ತೇವೆ. ಇಲ್ಲಿ ಯಾವುದೇ ಗೊಂದಲಗಳನ್ನು ಮಾಡಿಕೊಳ್ಳಲು ಹೋಗುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನಗೆ ವಹಿಸಿದ ಪಾತ್ರವನ್ನು ನಿರ್ವಹಿಸುವುದನ್ನೇ ಪಾತ್ರಪ್ರಜ್ಞೆ ಎಂದು ಕರೆಯುತ್ತೇವೆ. ನಾವು ಕುಟುಂಬದಲ್ಲಿಯೂ ಸಹ ಅಣ್ಣ–ತಮ್ಮ, ತಂದೆ–ತಾಯಿ, ತಾತ–ಅಜ್ಜಿ ಹೀಗೆ ಅನೇಕ ಪಾತ್ರಗಳನ್ನು ನಿಭಾಯಿಸುತ್ತೇವೆ. ಮನುಷ್ಯನು ತನ್ನ ವಯೋಮಾನ ಮತ್ತು ಕಾಲಮಾನದಲ್ಲಿ ಇಂತಹ ಅನೇಕ ಪಾತ್ರಗಳನ್ನು ಒಬ್ಬನೇ ನಿರ್ವಹಿಸುತ್ತಾನೆ.

## ಅಭ್ಯಾಸಗಳು

**I ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ನಮ್ಮ ಭಾವನೆಗಳನ್ನು ______________ ಮೂಲಕ ವ್ಯಕ್ತಪಡಿಸುತ್ತೇವೆ.

2 ಸಮಾಜಶಾಸ್ತ್ರವು ಯಾವುದೇ ವಿಷಯವನ್ನು ______________ ಇಲ್ಲದೆ ಅಧ್ಯಯನ ಮಾಡಲು ನೆರವಾಗುತ್ತದೆ.

3 ಸಾಮಾಜಿಕ ಅಂತರ್‌ಕ್ರಿಯೆಯ ಒಡನಾಟವನ್ನು ______________ ಎಂದು ಕರೆಯುತ್ತೇವೆ.

**II ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ದಿನನಿತ್ಯದ ಜೀವನದಲ್ಲಿ ಸಮಾಜವನ್ನು ಅರ್ಥಮಾಡಿಕೊಳ್ಳಲು ಸಮಾಜಶಾಸ್ತ್ರ ಹೇಗೆ ನೆರವಾಗುತ್ತದೆ?

2 ಭಾಷೆಯ ಮಹತ್ವಕ್ಕೆ ಉದಾಹರಣೆಯನ್ನು ನೀಡಿ.

3 ಪಾತ್ರ ಪ್ರಜ್ಞೆ ಎಂದರೇನು?

**III ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿ.**

1 ಭಾಷೆಗೂ ಮತ್ತು ಸಮಾಜಕ್ಕೂ ಇರುವ ಸಂಬಂಧವನ್ನು ವಿವರಿಸಿ.

2 ಪಾತ್ರಪ್ರಜ್ಞೆಯನ್ನು ಉದಾಹರಣೆಯೊಂದಿಗೆ ವಿವರಿಸಿ.

**IV ಚಟುವಟಿಕೆ.**

1 ನೀವು ಇದುವರೆಗೂ ಸಹೋದರ/ಸಹೋದರಿಯಾಗಿ ನಿರ್ವಹಿಸಿರುವ ಪಾತ್ರದ ಬಗ್ಗೆ ಪ್ರಬಂಧ ಬರೆಯಿರಿ.

# ಅಧ್ಯಾಯ–4

# ಸಮಾಜದ ಪ್ರಕಾರಗಳು

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಸಮಾಜದ ವಿವಿಧ ಪ್ರಕಾರಗಳನ್ನು ತಿಳಿಯುವುದು.
- ವಿವಿಧ ಸಮಾಜ ಪ್ರಕಾರಗಳ ಗುಣಲಕ್ಷಣಗಳನ್ನು ತಿಳಿಯುವುದು.

ನಾವು ಎಲ್ಲ ಕಡೆಯೂ ಒಂದೇ ರೀತಿಯ ಸಮಾಜವನ್ನು ಕಾಣುವುದಿಲ್ಲ. ಜನಜೀವನ, ಸಂಸ್ಕೃತಿ, ಆಚಾರ – ವಿಚಾರಗಳು, ಉದ್ಯೋಗ ಮುಂತಾದ ಅಂಶಗಳು ಪ್ರದೇಶದಿಂದ ಪ್ರದೇಶಕ್ಕೆ ಬೇರೆ ಬೇರೆಯಾಗಿರುತ್ತದೆ. ಪಶುಪಾಲಕ ಸಮುದಾಯದ ಜನರು ಬೇಟೆ ಮತ್ತು ಗೆಡ್ಡೆ ಗೆಣಸುಗಳನ್ನು ಸಂಗ್ರಹಿಸಿ ಜೀವನ ನಡೆಸುವುದನ್ನು ಈಗಲೂ ನೋಡಬಹುದು. ಹಾಗೆಯೇ ಗ್ರಾಮಾಂತರ ಪ್ರದೇಶಗಳಿಗೆ ಹೋದಾಗ ನೂರಾರು ಸಂಖ್ಯೆಯ ಕುರಿಗಳು, ದನಗಳು ಮತ್ತಿತರ ಸಾಕುಪ್ರಾಣಿಗಳು ಮತ್ತು ಕಣ್ಣಿಗೆ ಕಾಣುವಷ್ಟು ದೂರ ಹೊಲಗದ್ದೆಗಳನ್ನು ಗಮನಿಸಬಹುದು. ಅಲ್ಲಲ್ಲಿ ಗುಂಪು ಗುಂಪಾಗಿ ಇರುವ ಮನೆಗಳು, ವಿರಳವಾಗಿರುವ ಮನೆಗಳು, ನೇಗಿಲನ್ನು ಹೊತ್ತುಕೊಂಡು ಹೋಗುತ್ತಿರುವ ರೈತ, ಬಾವಿಯಿಂದ ನೀರನ್ನು ಹೊತ್ತುಕೊಂಡು ಹೋಗುತ್ತಿರುವ ಮಹಿಳೆಯರು ಕಾಣಸಿಗುತ್ತಾರೆ.

ಹಾಗೆಯೇ ಬೆಂಗಳೂರು, ಹುಬ್ಬಳ್ಳಿ, ಮುಂಬೈ, ದೆಹಲಿಯಂತಹ ನಗರಗಳಲ್ಲಿ ರಸ್ತೆಯ ತುಂಬಾ ವಾಹನಗಳು, ಗಿಜಿಗುಡುವ ಜನಸಂದಣಿ, ವಿಶಾಲವಾದ ಬಡಾವಣೆಗಳು ಹಾಗೂ ಕೊಳಚೆ ಪ್ರದೇಶಗಳನ್ನೂ ಕಾಣುತ್ತೇವೆ. ಅಲ್ಲೆಲ್ಲ ವಿವಿಧ ತರಹದ ವೇಷಭೂಷಣಗಳನ್ನು ತೊಟ್ಟ ಜನರನ್ನು, ಹೊಗೆಯುಗುಳುವ ಕಾರ್ಖಾನೆಗಳನ್ನು, ಎತ್ತರವಾದ ಕಟ್ಟಡಗಳನ್ನು, ವಿಶ್ವವಿದ್ಯಾನಿಲಯಗಳನ್ನು, ದೊಡ್ಡ ದೊಡ್ಡ ಆಸ್ಪತ್ರೆಗಳನ್ನು ನಾವು ಗಮನಿಸಬಹುದು.

ಅಂದರೆ ಸಮಾಜವು ಎಲ್ಲ ಕಡೆಯೂ ಒಂದೇ ರೀತಿಯಾಗಿಲ್ಲ. ವಿಭಿನ್ನ ಬಗೆಯಲ್ಲಿ ಕಾಣಿಸುತ್ತದೆ. ಆದುದರಿಂದ ನಾವು ಸಮಾಜವನ್ನು ವಿವಿಧ ಬಗೆಯಲ್ಲಿ ವರ್ಗೀಕರಿಸುತ್ತೇವೆ. ಅವು ಯಾವುವೆಂದರೆ,

1. ಬೇಟೆಯಾಡುವ ಮತ್ತು ಆಹಾರ ಸಂಗ್ರಹಿಸುವ ಸಮಾಜಗಳು
2. ಪಶುಪಾಲನ ಸಮಾಜ
3. ಕೃಷಿ ಸಮಾಜ
4. ಕೈಗಾರಿಕಾ ಸಮಾಜ

## 1. ಬೇಟೆಯಾಡುವ ಹಾಗೂ ಆಹಾರ ಸಂಗ್ರಹಿಸುವ ಸಮಾಜ

ಇದು ಮಾನವ ಸಮಾಜದಲ್ಲಿ ಅತ್ಯಂತ ಪ್ರಾಚೀನ ಮತ್ತು ಸರಳವಾದ ಸಮಾಜವಾಗಿದೆ. ಈ ಸಮಾಜವು ಬಹಳ ಚಿಕ್ಕದಾಗಿದ್ದು, ಕೆಲವೇ ಮಂದಿ ಜನರನ್ನು ಒಳಗೊಂಡಿದ್ದು ಸಂಚಾರೀ ಸ್ವರೂಪದ ಜೀವನಶೈಲಿಯನ್ನು ಹೊಂದಿದೆ. ಇವರು ಉಪಯೋಗಿಸುವ ಆಯುಧಗಳು – ಕಲ್ಲಿನಿಂದ ಮಾಡಿದ ಕೊಡಲಿ, ಈಟಿ, ಚೂರಿ ಮುಂತಾದವು. ಈ ಜನರು ತಮ್ಮ ಅಸ್ತಿತ್ವಕ್ಕಾಗಿ ಕಾಡು ಪ್ರಾಣಿಗಳನ್ನು ಬೇಟೆಯಾಡುತ್ತಾರೆ ಹಾಗೂ ಪ್ರಕೃತಿ ಸಹಜವಾಗಿ ಬೆಳೆದಿರುವ ಹಣ್ಣುಗಳು, ಬೀಜಗಳು, ಗೆಡ್ಡೆ–ಗೆಣಸುಗಳು, ತರಕಾರಿಗಳನ್ನು ಸಂಗ್ರಹಿಸುತ್ತಾರೆ. ಸಂಪತ್ತನ್ನು ಸಂಪಾದಿಸುವ ಒಲವು ಇವರಿಗಿಲ್ಲ. ಹಂಚಿಕೊಂಡು ಬದುಕುವುದು ಇವರ ರೀತಿಯಾಗಿದೆ.

**ಈ ಸಮಾಜದ ಗುಣಲಕ್ಷಣಗಳು**

1. ಈ ಸಮಾಜವು ಬಹಳ ಚಿಕ್ಕದಾದ ಹಾಗೂ ಅಲ್ಲಲ್ಲಿ ಚದುರಿದ ಮಾನವ ಸಮೂಹಗಳನ್ನು ಒಳಗೊಂಡಿದೆ. ಇವುಗಳ ಒಟ್ಟು ಸದಸ್ಯರು 49–50 ಕ್ಕಿಂತ ಹೆಚ್ಚಾಗಿ ಇರುವುದಿಲ್ಲ.
2. ಈ ಸಮಾಜಗಳು ಸದಾ ಚಲಿಸುತ್ತಲೇ ಇರುವುದರಿಂದ ಒಂದು ಪ್ರದೇಶದ ಆಹಾರ ಬರಿದಾದಾಗ ಇನ್ನೊಂದು ಕಡೆ ಅದನ್ನು ಹುಡುಕಿಕೊಂಡು ಹೋಗುವುದು ಅನಿವಾರ್ಯ.
3. ಇಲ್ಲಿ ಸಂಪತ್ತನ್ನು ಸಂಗ್ರಹಿಸುವ ಬಲವಾದ ಇಚ್ಛೆ ಕಾಣಿಸದು. ಸಂಪತ್ತಿನ ಕಲ್ಪನೆಯು ಈ ಸಮಾಜದಲ್ಲಿ ಕಂಡು ಬರುವುದಿಲ್ಲ. ಲಭ್ಯವಿರುವ ಆಹಾರವನ್ನು ಇತರರೊಂದಿಗೆ ಹಂಚಿಕೊಳ್ಳುತ್ತಾರೆ.
4. ಇಡೀ ಸಮಾಜವೇ ಇಲ್ಲಿ ಬಂಧುತ್ವದ ಸಂಬಂಧಗಳ ಆಧಾರದ ಮೇಲೆ ಹೆಣೆದುಕೊಂಡಿದೆ. ವೈಯಕ್ತಿಕ ಅಸ್ತಿತ್ವ ಇರುವುದಿಲ್ಲ. ಈ ಸಮಾಜದಲ್ಲಿ ಕುಟುಂಬ ಮತ್ತು ಬಂಧುತ್ವಗಳು ಮಾತ್ರ ಪರಸ್ಪರ ಸಂಬಂಧಿತ ಸಂಸ್ಥೆಗಳಾಗಿವೆ.
5. ಇಲ್ಲಿ ರಾಜಕೀಯ ಸಂಸ್ಥೆಗಳಿಲ್ಲದಿರುವುದರಿಂದಲೇ ಆಳುವವರು ಮತ್ತು ಆಳಿಸಿಕೊಳ್ಳುವವರು ಎಂಬ ವರ್ಗಗಳೇ ಇರುವುದಿಲ್ಲ.

**2. ಪಶುಪಾಲನಾ ಸಮಾಜ**

ತಮ್ಮ ಜೀವನಾಧಾರಕ್ಕೆ ಪೂರಕವಾಗಿ ಪಶುಗಳನ್ನು ಹಿಂಡು ಹಿಂಡಾಗಿ ಸಾಕುವ ಸಮಾಜವೇ ಪಶುಪಾಲನಾ ಸಮಾಜ. ಇಲ್ಲಿ ಜನರು ಜೀವನೋಪಾಯದ ಅಗತ್ಯತೆಗಳನ್ನು, ಪಶುಪಾಲನೆ, ಬೇಟೆಯಾಡುವಿಕೆ, ಆಹಾರ ಸಂಗ್ರಹಿಸುವಿಕೆಗಳಿಂದ ಪೂರೈಸಿಕೊಳ್ಳುತ್ತಾರೆ. ಆಫ್ರಿಕ ಮತ್ತು ಮಧ್ಯ ಏಷ್ಯಾದ ಕೆಲವು ಪ್ರದೇಶಗಳಲ್ಲಿ ಇಂದಿಗೂ ಪಶುಪಾಲನಾ ಸಮಾಜಗಳಿರುವುದು ಕಂಡುಬರುತ್ತದೆ.

**ಈ ಸಮಾಜದ ಗುಣಲಕ್ಷಣಗಳು**

1. ಈ ಸಮಾಜ ಗಾತ್ರದಲ್ಲಿ ದೊಡ್ಡದಾಗಿದ್ದು ಕೆಲವೊಮ್ಮೆ ನೂರಾರು ಹಾಗೂ ಸಾವಿರಾರು ಜನರನ್ನು ಒಳಗೊಂಡಿರುತ್ತವೆ. ಉದಾ: ಬಖ್ತಿಯರಿ ಸಮುದಾಯವು ಇಂದಿಗೂ 5000ದಿಂದ 1,50,000 ಮಂದಿಯನ್ನು ಒಳಗೊಂಡಿದೆ.
2. ಈ ಸಮಾಜ ಸಾಮಾನ್ಯವಾಗಿ ಹುಲ್ಲುಗಾವಲು ಪ್ರದೇಶಗಳಲ್ಲಿ, ಬೆಟ್ಟ, ಗುಡ್ಡಪ್ರದೇಶಗಳಲ್ಲಿ, ಮರುಭೂಮಿ ಮತ್ತು ಕೃಷಿಗೆ ಅನುಕೂಲವಿಲ್ಲದ ಪ್ರದೇಶಗಳಲ್ಲಿ ಕಾಣಬಹುದು. ಇಂತಹ ಪ್ರದೇಶಗಳು ಪಶುಪಾಲನೆಗೆ ಸಹಕಾರಿಯಾಗಿರುತ್ತವೆ. ಇದರಿಂದ ಇವರ ಮುಖ್ಯ ಕಸುಬು ಪಶುಪಾಲನೆಯಾಗಿರುತ್ತದೆ.
3. ಈ ಸಮಾಜದಲ್ಲಿ ಯಾರು ಹೆಚ್ಚು ಪಶುಗಳ ಒಡೆತನ ಹೊಂದಿರುತ್ತಾರೋ ಅವರು ಉಳಿದವರಿಗಿಂತ ಹೆಚ್ಚು ಪ್ರಭಾವಶಾಲಿಯಾಗುತ್ತಾರೆ. ಅವರು ಶ್ರೀಮಂತರೆನಿಸಿಕೊಂಡು ಇತರರಿಗೆ ನಾಯಕರಾಗುತ್ತಾರೆ. ಶ್ರೀಮಂತ ಕುಟುಂಬಗಳು ಉತ್ತಮ ಸ್ಥಾನ ಪಡೆಯುತ್ತಾ ಹೋದಂತೆ ಅದರ ಪರಿಣಾಮವೆಂಬಂತೆ ಸಮಾಜದಲ್ಲಿ ನಾಯಕತ್ವವೆಂಬುದು ಹುಟ್ಟಿಕೊಳ್ಳುತ್ತದೆ. ಇದರಿಂದ ಅಸಮಾನತೆಯ ಆರಂಭದ ಹಂತವಾಗುತ್ತದೆ.

### 3. ಕೃಷಿಕ ಸಮಾಜ

ಬೇಸಾಯವನ್ನು ಅವಲಂಬಿಸಿ ಬದುಕುವ ಸಮಾಜವನ್ನು ಕೃಷಿಸಮಾಜ ಎನ್ನುತ್ತಾರೆ. ಕೃಷಿಗೆ ಪ್ರಾಣಿ ಮತ್ತು ನೇಗಿಲನ್ನು ಬಳಸುತ್ತಾರೆ.

**ಈ ಸಮಾಜದ ಗುಣಲಕ್ಷಣಗಳು**

1. ಕ್ರಿ.ಪೂ. 3000ದ ಸುಮಾರಿಗೆ ನೇಗಿಲ ಸಂಶೋಧನೆಯೊಂದಿಗೆ 'ಕೃಷಿ ಕ್ರಾಂತಿ' ಆರಂಭಗೊಂಡಿತು. ಇದರೊಂದಿಗೆ ಆಹಾರದ ಉತ್ಪಾದನೆಯೂ ಹೆಚ್ಚಾಯಿತು. ಈ ನೇಗಿಲನ್ನು ಎಳೆಯಲು ಪ್ರಾಣಿಶಕ್ತಿಯನ್ನು ಬಳಸಲು ಪ್ರಾರಂಭವಾದಾಗಲಂತೂ ಆಹಾರ ಉತ್ಪಾದನೆ ಇನ್ನಷ್ಟು ಹೆಚ್ಚಾಯಿತು.
2. ಕೃಷಿಕ ಸಮಾಜದಲ್ಲಿ ಬೇಸಾಯವು ಪ್ರಮುಖ ಉದ್ಯೋಗವಾಗಿದೆ. ಆದುದರಿಂದ ಜನರು ಒಂದೇ ಕಡೆ ನೆಲೆಸಿದರು. ಇದರಿಂದಾಗಿ ಗ್ರಾಮಗಳು ಹುಟ್ಟಿಕೊಂಡವು.
3. ಇಲ್ಲಿ ಹೆಚ್ಚಿನ ಆಹಾರದ ಉತ್ಪಾದನೆ ಸಾಧ್ಯವಾದುದರಿಂದ ಎಲ್ಲರೂ ಗಂಟೆಗಟ್ಟಲೆ ದುಡಿಯಬೇಕಾದ ಅವಶ್ಯಕತೆ ಇರಲಿಲ್ಲ. ಆದುದರಿಂದ ಹೆಚ್ಚಿನ ಸಂಖ್ಯೆಯ ಜನರು ತಮ್ಮನ್ನು ಇನ್ನಿತರ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ವಿವಿಧ ಕೌಶಲ್ಯಗಳು ರೂಪುಗೊಂಡವು.



### 4. ಕೈಗಾರಿಕಾ ಸಮಾಜ

ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳಸಿ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳನ್ನು ಅವಲಂಬಿಸಿ ಬದುಕುವ ಸಮಾಜವನ್ನು ಕೈಗಾರಿಕಾ ಸಮಾಜ ಎಂದು ಕರೆಯಲಾಗುತ್ತದೆ.

**ಈ ಸಮಾಜದ ಗುಣಲಕ್ಷಣಗಳು**

1. ಹೊಸ ಹೊಸ ಶೋಧಗಳು ಸಾಮಾಜಿಕ ಪರಿವರ್ತನೆಯನ್ನೇ ಸೃಷ್ಟಿಸಿದವು. ಹಬೆಯಂತ್ರ, ಆಂತರಿಕ ದಹನ ಯಂತ್ರ, ವಿದ್ಯುತ್ ಶಕ್ತಿ, ಅಣುಶಕ್ತಿ ಮುಂತಾದವು ಬಹು ವ್ಯಾಪಕ ಸ್ವರೂಪದ ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆ ತಂದಿವೆ ಮತ್ತು ತರುತ್ತಲಿವೆ.
2. ಕೈಗಾರಿಕೆಗಳನ್ನು ಸ್ಥಾಪಿಸಿರುವ ನಗರಗಳಿಗೆ ಉದ್ಯೋಗ ಹುಡುಕಿಕೊಂಡು ಜನ ವಲಸೆ ಬರುತ್ತಾರೆ. ಆದುದರಿಂದಾಗಿ ಜನಸಂಖ್ಯೆ ಪ್ರಮಾಣ ಜಾಸ್ತಿಯಾಗುತ್ತದೆ.
3. ಕೈಗಾರಿಕೆಗಳನ್ನು ನಡೆಸಲು ಶ್ರಮವಿಭಜನೆ ಅಗತ್ಯ. ಶ್ರಮವಿಭಜನೆ ಎಂದರೆ ಕೌಶಲ್ಯದ ಆಧಾರದ ಮೇಲೆ ಕೆಲಸ ವಿಂಗಡಿಸುವುದು. ಕೈಗಾರಿಕಾ ಸಮಾಜದ ಎಲ್ಲಾ ಅಂಗಗಳಲ್ಲಿಯೂ ಶ್ರಮವಿಭಜನೆ ಕಂಡು ಬರುತ್ತದೆ.

## ಅಭ್ಯಾಸಗಳು

**I ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1 ಬೇಟೆಯಾಡುವ ಸಮಾಜದ ಸದಸ್ಯರು, ಬೇಟೆಯಾಡಲು____________ ಆಯುಧಗಳನ್ನು ಉಪಯೋಗಿಸುತ್ತಾರೆ.

2 ಕೃಷಿ ಸಮಾಜದಲ್ಲಿ ಉಳುಮೆಗೆ ____________ ಬಳಸುತ್ತಾರೆ.

3 ಕೌಶಲ್ಯದ ಕೆಲಸ ಹಂಚುವುದಕ್ಕೆ ________________ ಎಂದು ಹೆಸರು.

**II ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ಪಶುಪಾಲನ ಸಮಾಜ ಎಂದರೇನು?

2 ಕೃಷಿ ಸಮಾಜ ಎಂದರೇನು?

3 ಕೈಗಾರಿಕಾ ಸಮಾಜ ಎಂದರೇನು?

4 ಸಮಾಜದ ಪ್ರಕಾರಗಳು ಯಾವುವು?

**III ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿ.**

1 ಬೇಟೆಯಾಡುವ ಹಾಗೂ ಆಹಾರ ಸಂಗ್ರಹಿಸುವ ಸಮಾಜದ ಜೀವನ ಶೈಲಿ ವಿವರಿಸಿ.

2 ಪಶುಪಾಲನ ಸಮಾಜದ ಲಕ್ಷಣಗಳನ್ನು ತಿಳಿಸಿ.

3 ಕೃಷಿ ಸಮಾಜದ ಲಕ್ಷಣಗಳನ್ನು ವಿವರಿಸಿ.

4 ಕೈಗಾರಿಕಾ ಸಮಾಜದ ಲಕ್ಷಣಗಳನ್ನು ತಿಳಿಸಿ.

**IV ಚಟುವಟಿಕೆಗಳು.**

1 ನಗರ ಜೀವನ ಮತ್ತು ಗ್ರಾಮೀಣ ಜೀವನ ಕುರಿತಂತೆ ಶಿಕ್ಷಕರೊಂದಿಗೆ ಚರ್ಚಿಸಿ, ಹೋಲಿಸಿ ಮತ್ತು ವ್ಯತ್ಯಸಿಸಿ.

2 ಆದರ್ಶ ಸಮಾಜದ ಪರಿಕಲ್ಪನೆಯ ಬಗ್ಗೆ ಗುಂಪಿನಲ್ಲಿ ಚರ್ಚಿಸಿ.

# ಭೂಗೋಳಶಾಸ್ತ್ರ

## ಅಧ್ಯಾಯ–1

## ಭೂಮಿ–ನಮ್ಮ ಜೀವಂತ ಗ್ರಹ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಭೂಮಿಗೆ ಇರುವ ವಿವಿಧ ಹೆಸರುಗಳನ್ನು ಪರಿಚಯಿಸಿಕೊಳ್ಳುವುದು.
- ಭೂಮಿಯ ಗಾತ್ರ ಮತ್ತು ಭೂಮಿಯಲ್ಲಿನ ಜಲರಾಶಿಯ ಹಂಚಿಕೆಯನ್ನು ತಿಳಿಯುವುದು.
- ಭೂ ಖಂಡಗಳನ್ನು ಹಾಗೂ ಮಹಾಸಾಗರಗಳನ್ನು ಗುರುತಿಸುವುದು.
- ಅಕ್ಷಾಂಶ ಮತ್ತು ರೇಖಾಂಶಗಳ ಪರಿಚಯ, ಇವುಗಳಿಂದ ವೇಳೆ, ಸ್ಥಾನಿಕವೇಳೆ, ಪ್ರಮಾಣವೇಳೆ, ಅಂತರಾಷ್ಟ್ರೀಯ ದಿನಾಂಕಗಳನ್ನು ನಿರ್ಧರಿಸುವುದರ ಬಗ್ಗೆ ತಿಳಿಯುವುದು.
- ಪ್ರಪಂಚದ ಪ್ರಾಕೃತಿಕ ಭೂಪಟದಲ್ಲಿ ಭೂಖಂಡಗಳು ಮತ್ತು ಸಾಗರಗಳನ್ನು ಗುರುತಿಸುವುದು.

ನಾವು ಎಲ್ಲಿ ಜೀವಿಸುತ್ತಿದ್ದೇವೆ ಎಂಬುದು ನಿಮಗೆ ತಿಳಿದಿದೆಯೆ?



ನಾವು ಭೂಮಿಯ ಮೇಲೆ ಜೀವಿಸುತ್ತಿದ್ದೇವೆ. ಇದು ಸೂರ್ಯನಿಂದ ಮೂರನೆ ಗ್ರಹವಾಗಿದೆ. ಸೌರವ್ಯೂಹದಲ್ಲಿರುವ ಗ್ರಹಗಳಲ್ಲಿ ಭೂಮಿಯು ಮಾತ್ರ ಜೀವಿಗಳನ್ನು ಹೊಂದಿದೆ. ಭೂಮಿ ಎಲ್ಲ ಬಗೆ–ಯ ಜೀವಿಗಳಿಗೆ ವಾಸಸ್ಥಾನವಾಗಿದೆ. ಸಸ್ಯಗಳು, ಪ್ರಾಣಿಗಳು ಮತ್ತು ಮಾನವ ಜೀವಿಗಳು ಇಲ್ಲಿವೆ. ಇದಕ್ಕೆ ಕಾರಣ ಸೂರ್ಯನ ಮತ್ತು ಭೂಮಿಯ ನಡುವಿನ ಅನುಕೂಲಕರ ದೂರ, ಉಷ್ಣಾಂಶ, ಅನಿಲಗಳು, ವಾತಾವರಣ ಮತ್ತು ಜಲಚಕ್ರಗಳಾಗಿವೆ. ಭೂಮಿಯನ್ನು 'ಜೀವಂತ ಗ್ರಹ', 'ವಿಶಿಷ್ಠ ಗ್ರಹ', 'ಜಲಾವೃತ ಗ್ರಹ,' 'ನೀಲಿಗ್ರಹ' ಹೀಗೆ ವಿವಿಧ ಹೆಸರಿನಿಂದ ಕರೆಯಲಾಗಿದೆ.

### ಭೂಮಿಯಗಾತ್ರ, ಭೂಭಾಗ ಮತ್ತು ಜಲರಾಶಿಗಳ ಹಂಚಿಕೆ


ಪೃಥ್ವಿ

ಸೂರ್ಯನ ಪರಿವಾರದಲ್ಲಿ ಭೂಮಿಯು ಐದನೇ ದೊಡ್ಡ ಗ್ರಹವಾಗಿದೆ. ಭೂಮಿಯ ವ್ಯಾಸವು ಚಂದ್ರನ ವ್ಯಾಸಕ್ಕಿಂತ ಸುಮಾರು ನಾಲ್ಕು ಪಟ್ಟು ದೊಡ್ಡದಾಗಿದೆ ಹಾಗೂ ಸೂರ್ಯನಿಗಿಂತ 107 ಪಟ್ಟು ಚಿಕ್ಕದಾಗಿದೆ.

ಭೂಮಿಯ ಒಟ್ಟು ಭೌಗೋಳಿಕ ಕ್ಷೇತ್ರವು 510 ದಶಲಕ್ಷ ಚದರ ಕಿ.ಮೀ.ಗಳಾಗಿದ್ದು ಅದರಲ್ಲಿ 361 ದಶಲಕ್ಷ ಚದರ ಕಿ.ಮೀ. ಗಳಷ್ಟು (70.78%) ಕ್ಷೇತ್ರವು ನೀರಿನಿಂದ ಆವರಿಸಲ್ಪಟ್ಟಿದೆ. ಉಳಿದ 149 ದಶಲಕ್ಷ ಚದರ ಕಿ.ಮೀ.ನಷ್ಟು ಕ್ಷೇತ್ರವು (29.22%)



**ಭೂಮಿಯ ಆಕಾರ**

ಭೂ ಭಾಗದಿಂದ ಕೂಡಿದೆ. ಹೀಗೆ ಭೂಮಿಯು ಜಲಭಾಗ ಹಾಗೂ ಭೂ ಭಾಗಗಳ ಅಸಮತೆಯಿಂದ ಕೂಡಿದೆ. ಭೂ ಮತ್ತು ಜಲರಾಶಿಗಳ ಕ್ಷೇತ್ರ 1:2.43ರಷ್ಟು ಅನುಪಾತವನ್ನು ಹೊಂದಿವೆ.

ಭೂಮಿಯ ಆಕಾರವನ್ನು 'ಭೂಮ್ಯಾಕಾರ' ಅಥವಾ 'ಜಿಯಾಡ್' ಎಂದು ಕರೆಯಲಾಗಿದೆ. ಏಕೆಂದರೆ ಭೂಮಿಯು ದ್ರುವಗಳ ಬಳಿ ಸ್ವಲ್ಪ ಚಪ್ಪಟೆಯಾಗಿದ್ದು ಸಮಭಾಜಕವೃತ್ತದ ಬಳಿ ಉಬ್ಬಿದಂತಿದೆ. ಭೂಮಿಯ ಸಮಭಾಜಕವೃತ್ತದ ವ್ಯಾಸ 12756 ಕಿ.ಮೀ.ಗಳು ಮತ್ತು ಧ್ರುವೀಯ ವ್ಯಾಸ 12714 ಕಿ.ಮೀ ಆಗಿದೆ. ಅದೇ ರೀತಿ ಸಮಭಾಜಕವೃತದ ಸುತ್ತಳತೆ 40,076 ಕಿ.ಮೀಗಳು ಮತ್ತು ಧ್ರುವೀಯ ಸುತ್ತಳತೆ 40,008 ಕಿ.ಮೀ.ಗಳಷ್ಟಿದೆ. ವ್ಯಾಸದಲ್ಲಿ 42ಕಿ.ಮೀಗಳಷ್ಟು ವ್ಯತ್ಯಾಸ ಇರುವುದು ಭೂಮಿಯು ಗೋಳಾಕಾರವಾಗಿರುವುದನ್ನು ಸ್ಪಷ್ಟಪಡಿಸುವುದು.

ಭೂಮಿಯಲ್ಲಿನ ಭೂಭಾಗಳನ್ನು ಖಂಡಗಳೆಂದು ಕರೆಯುತ್ತಾರೆ. ಇಡೀ ಭೂ ಭಾಗವನ್ನು ಏಳು ಖಂಡಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಏಷಿಯಾ, ಆಫ್ರಿಕಾ, ಉತ್ತರ ಅಮೆರಿಕ, ದಕ್ಷಿಣ ಅಮೆರಿಕ, ಅಂಟಾರ್ಕ್ಟಿಕ, ಯುರೋಪ್ ಮತ್ತು ಆಸ್ಟ್ರೇಲಿಯಾ. ಈ ಖಂಡಗಳು ವಿಸ್ತಾರವಾದ ಭೂ ಭಾಗಗಳಾಗಿವೆ. ಏಷ್ಯಾವು ಅತಿ ದೊಡ್ಡ ಖಂಡವಾಗಿದ್ದು ಆಸ್ಟ್ರೇಲಿಯಾವು ಅತಿ ಚಿಕ್ಕ ಖಂಡವಾಗಿದೆ. ಭೂಮಿಯ ಮೇಲಿನ ವಿಸ್ತಾರವಾದ ಜಲರಾಶಿಯನ್ನು ಮಹಾಸಾಗರಗಳೆಂದು ಕರೆಯುತ್ತಾರೆ. ಅವುಗಳನ್ನು ನಾಲ್ಕು ಮಹಾಸಾಗರಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಪೆಸಿಫಿಕ್‌ಸಾಗರ, ಅಟ್ಲಾಂಟಿಕ್‌ಸಾಗರ, ಹಿಂದೂಮಹಾಸಾಗರ ಮತ್ತು ಆರ್ಕ್ಟಿಕ್‌ಸಾಗರ. ಪೆಸಿಫಿಕ್ ಸಾಗರವು ಅತಿ ದೊಡ್ಡದು ಹಾಗೂ ಹೆಚ್ಚು ಆಳವಾದುದಾಗಿದೆ. ಆರ್ಕ್ಟಿಕ್ ಸಾಗರವು ಅತಿಚಿಕ್ಕದು ಮತ್ತು ಕಡಿಮೆ ಆಳಹೊಂದಿದೆ.

ಭೂಮಿ ಮತ್ತು ಜಲರಾಶಿಗಳು ಉತ್ತರಗೋಳಾರ್ಧ ಮತ್ತು ದಕ್ಷಿಣಗೋಳಾರ್ಧದಲ್ಲಿ ಸಮನಾಗಿ ಹಂಚಿಕೆಯಾಗಿಲ್ಲ. ಉತ್ತರಗೋಳಾರ್ಧದಲ್ಲಿ ಶೇ 60 ಭಾಗದಷ್ಟು ಭೂ ಭಾಗವಿದ್ದು, ಶೇ 40 ಭಾಗದಷ್ಟು ಜಲರಾಶಿಯಿರುವುದು. ಆದ್ದರಿಂದ ಇದನ್ನು 'ಭೂ ಪ್ರಧಾನಗೋಳ' (ಭೂಗೋಳಾರ್ಧ)ವೆಂದೂ ಕರೆಯಲಾಗಿದೆ. ಇದಕ್ಕೆ ವಿರುದ್ದವಾಗಿ ದಕ್ಷಿಣಗೋಳಾರ್ಧದಲ್ಲಿ ಶೇ 81 ಭಾಗದಷ್ಟು ಜಲರಾಶಿಯಿದ್ದು ಶೇ 19ರಷ್ಟು ಭಾಗ ಭೂ ಭಾಗವಿದೆ. ಇದರಿಂದ ಇದನ್ನು 'ಜಲ ಪ್ರಧಾನಗೋಳ' (ಜಲಗೋಳಾರ್ಧ) ವೆಂದು ಕರೆಯುವರು.

## ಅಕ್ಷಾಂಶಗಳು ಮತ್ತು ರೇಖಾಂಶಗಳು

| ಒಂದು ಸ್ಥಳದ ಸನ್ನಿವೇಶ, ದಿಕ್ಕು ಮತ್ತು ಅಂತರವನ್ನು ಹೇಗೆ ತಿಳಿಯುತ್ತೇವೆ? |
|---|

ಭೂಮಿಯು ಗೋಳಾಕಾರವಾಗಿದೆ. ಆದ್ದರಿಂದ ಭೂಮಿಯ ಮೇಲಿನ ಸ್ಥಳಗಳನ್ನು, ದಿಕ್ಕುಗಳನ್ನು ಹಾಗೂ ಎರಡು ಸ್ಥಳಗಳ ನಡುವಿನ ಅಂತರವನ್ನು ಗುರುತಿಸುವುದು ಕಠಿಣ. ಭೂಮಿಯ ಮೇಲಿನ ಒಂದು ಸ್ಥಳದ ನಿರ್ದಿಷ್ಟ ಸ್ಥಾನ, ಸನ್ನಿವೇಶ, ಅಂತರ ಮತ್ತು ದಿಕ್ಕುಗಳನ್ನು ಅರಿಯಲು ಕಾಲ್ಪನಿಕ ರೇಖಾಜಾಲ ವ್ಯವಸ್ಥೆಯನ್ನು ನಕ್ಷೆ ಅಥವಾ ಗೋಳದ ಮೇಲೆ ಊಹಾರೇಖೆಗಳನ್ನು ಎಳೆಯಲಾಗಿದೆ. ಈ ಊಹಾರೇಖೆಗಳನ್ನು ಪೂರ್ವ ಪಶ್ಚಿಮವಾಗಿ ಮತ್ತು ಉತ್ತರ ದಕ್ಷಿಣವಾಗಿ ಎಳೆಯಲಾಗಿದ್ದು, ಇವುಗಳನ್ನು ಅಕ್ಷಾಂಶಗಳು ಮತ್ತು ರೇಖಾಂಶಗಳೆನ್ನುವರು. ಇವುಗಳನ್ನು ಭೌಗೋಳಿಕ ನಿರ್ದೇಶಾಂಕಗಳು (Geographic Co-ordinates) ಅಥವಾ ಭೌಗೋಳಿಕ ಜಾಲ ವ್ಯವಸ್ಥೆ ಎಂದೂ ಕರೆಯುವರು.

**ಅಕ್ಷಾಂಶಗಳು :** ಭೂಅಕ್ಷವನ್ನು ಆಧಾರವಾಗಿಟ್ಟುಕೊಂಡು ಗೋಳದ ಮೇಲೆ ಅಕ್ಷಾಂಶಗಳನ್ನು ಎಳೆಯಲಾಗಿದೆ. ಉತ್ತರ ಮತ್ತು ದಕ್ಷಿಣ ಧ್ರುವಗಳ ಮಧ್ಯದಲ್ಲಿ ಭೂಅಕ್ಷಕ್ಕೆ ಲಂಬವಾಗಿ ಸಮಭಾಜಕವೃತ್ತವನ್ನು ರಚಿಸಲಾಗಿದೆ. ಈ ಸಮಭಾಜಕ ವೃತ್ತಕ್ಕೆ ಸಮಾನಾಂತರವಾಗಿರುವಂತೆ ಗೋಳದ ಮೇಲೆ ಪೂರ್ವ ಪಶ್ಚಿಮವಾಗಿ ಎಳೆದಿರುವ ಕಾಲ್ಪನಿಕ ರೇಖೆಗಳನ್ನೇ 'ಅಕ್ಷಾಂಶಗಳು' (Latitudes) ಎನ್ನುವರು. ಸಮಭಾಜಕವೃತ್ತವು $0^0$ ಮಹಾವೃತ್ತವಾಗಿದ್ದು ಅಲ್ಲಿಂದ ಉತ್ತರ ಹಾಗೂ ದಕ್ಷಿಣಕ್ಕಿರುವ ಅಕ್ಷಾಂಶಿಕ ವರ್ತುಲಗಳು ಚಿಕ್ಕದಾಗುತ್ತವೆ. ಅದರೆ $90^0$ ಉತ್ತರ ಹಾಗೂ ದಕ್ಷಿಣ ಅಕ್ಷಾಂಶಗಳು ಬಿಂದುಗಳಾಗಿವೆ. ಸಮಭಾಜಕವೃತ್ತದಿಂದ ಉತ್ತರಗೋಳಾರ್ಧದಲ್ಲಿ $90^0$ ಹಾಗೂ ದಕ್ಷಿಣಗೋಳಾರ್ಧದಲ್ಲಿ $90^0$ ಅಕ್ಷಾಂಶಗಳನ್ನು ರಚಿಸಲಾಗಿದೆ. ಒಂದು ಅಕ್ಷಾಂಶದಿಂದ ಮತ್ತೊಂದು ಅಕ್ಷಾಂಶಕ್ಕಿರುವ ಭೂಮಿಯ ಮೇಲಿನ ಅಂತರ 110.4 ಕಿ.ಮೀಗಳಾಗುತ್ತದೆ.



### ಪ್ರಮುಖ ಅಕ್ಷಾಂಶಗಳು




ಅಕ್ಷಾಂಶಗಳು ಮತ್ತು ರೇಖಾಂಶಗಳ ಜಾಲ

1) $0^0$ ಅಕ್ಷಾಂಶ – ಸಮಭಾಜಕ ವೃತ್ತ ಅಥವಾ ಮಹಾವೃತ್ತ.
2) $23\frac{1}{2}^0$ ಉತ್ತರ ಅಕ್ಷಾಂಶ – ಕರ್ಕಾಟಕ ಸಂಕ್ರಾಂತಿ ವೃತ್ತ
3) $23\frac{1}{2}^0$ ದಕ್ಷಿಣ ಅಕ್ಷಾಂಶ – ಮಕರ ಸಂಕ್ರಾಂತಿ ವೃತ್ತ.
4) $66\frac{1}{2}^0$ ಉತ್ತರ ಅಕ್ಷಾಂಶ – ಉತ್ತರಧ್ರುವ ವೃತ್ತ (ಆರ್ಕ್ಟಿಕ್ ವೃತ್ತ)
5) $66\frac{1}{2}^0$ ದಕ್ಷಿಣ ಅಕ್ಷಾಂಶ– ದಕ್ಷಿಣಧ್ರುವ ವೃತ್ತ (ಅಂಟಾರ್ಕ್ಟಿಕ್ ವೃತ್ತ)
6) $90^0$ ಉತ್ತರ ಅಕ್ಷಾಂಶ – ಉತ್ತರಧ್ರುವ
7) $90^0$ ದಕ್ಷಿಣ ಅಕ್ಷಾಂಶ – ದಕ್ಷಿಣಧ್ರುವ.

**ರೇಖಾಂಶಗಳು:** ಸಮಭಾಜಕ ವೃತ್ತವನ್ನು ಸಮಾನಾಂತರವಾಗಿ ಛೇದಿಸಿ ಉತ್ತರ ಮತ್ತು ದಕ್ಷಿಣಧ್ರುವಗಳನ್ನು ಸಂಧಿಸುವ ರೇಖೆಗಳನ್ನು ರೇಖಾಂಶಗಳು ಎನ್ನುವರು. ರೇಖಾಂಶಗಳು ಪ್ರಧಾನ ರೇಖಾಂಶಕ್ಕೆ (ಗ್ರೀನ್‌ವಿಚ್ ರೇಖಾಂಶ) ಪೂರ್ವ ಮತ್ತು ಪಶ್ಚಿಮಕ್ಕೆ ಒಂದೇ ಕೌನಿಕ ಅಂತರದಲ್ಲಿರುವ ಪ್ರದೇಶಗಳನ್ನು ಸಂದಿಸುವ ಹಾಗೂ ಸಮಭಾಜಕವೃತ್ತದ ಮೇಲೆ ಡಿಗ್ರಿಗಳಲ್ಲಿ ಅಳೆಯುವ ಕಾಲ್ಪನಿಕ ರೇಖೆಗಳಾಗಿವೆ.

ಗೋಳದ ಮೇಲೆ ರೇಖಾಂಶಗಳು ಅರ್ಧವೃತ್ತಗಳ ಶ್ರೇಣಿಗಳಂತೆ ಕಂಡು ಬರುತ್ತವೆ. ಇವು ಉತ್ತರ ಮತ್ತು ದಕ್ಷಿಣ ಧ್ರುವಗಳಿಂದ ಸಮಭಾಜಕವೃತ್ತದ ಮೂಲಕ ಹಾದು ಹೋಗುತ್ತವೆ. ಎಲ್ಲ ರೇಖಾಂಶಗಳ ಉದ್ದ ಒಂದೇ ಆಗಿದೆ. ರೇಖಾಂಶಗಳನ್ನು ಮಧ್ಯಾಹ್ನ ಅಥವಾ ಮೆರಿಡಿಯನ್ ರೇಖೆಗಳೆನ್ನುವರು. (ಮೆರಿ– ಮಧ್ಯ, ಡಿಯನ್– ದಿನ) ಏಕೆಂದರೆ ಒಂದು ರೇಖಾಂಶದುದ್ದಕ್ಕು ಎಲ್ಲ ಸ್ಥಳಗಳಲ್ಲೂ ಒಂದೇ ಸಮಯದಲ್ಲಿ ಮಧ್ಯಾಹ್ನವಾಗುತ್ತದೆ.

ಇಂಗ್ಲೆಂಡಿನ ಗ್ರೀನ್‌ವಿಚ್‌ನ ಮೇಲೆ ಹಾದು ಹೋಗುವ ರೇಖಾಂಶವನ್ನು ಪ್ರಧಾನ ರೇಖಾಂಶವೆಂದು ಆಯ್ಕೆಮಾಡಲಾಗಿದೆ. ಇದನ್ನು '0' ಡಿಗ್ರಿ ಎಂದು ಗುರುತಿಸಲಾಗಿದೆ. ಗ್ರೀನ್‌ವಿಚ್ ರೇಖಾಂಶದ ಪೂರ್ವಕ್ಕೆ 180 ಹಾಗೂ ಪಶ್ಚಿಮಕ್ಕೆ 180 ರೇಖಾಂಶಗಳಿವೆ. ಆದ್ದರಿಂದ ಒಟ್ಟು 360 ರೇಖಾಂಶಗಳಿರುತ್ತವೆ. ಪ್ರಧಾನ ರೇಖಾಂಶದಿಂದ 180 ಪೂರ್ವ ರೇಖಾಂಶದವರಗಿನ ವಲಯವನ್ನು ಪೂರ್ವಾರ್ಧಗೋಳವೆನ್ನುವರು. ಅದರ ವಿರುದ್ಧದ ಭಾಗವನ್ನು ಪಶ್ಚಿಮಾರ್ಧಗೋಳವೆನ್ನುವರು.

ಸಮಭಾಜಕ ವೃತ್ತದಿಂದ ಧ್ರುವದ ಕಡೆಗೆ ಹೋದಂತೆ ಎರಡು ರೇಖಾಂಶಗಳ ಅಂತರವು ನಿಧಾನವಾಗಿ ಕಡಿಮೆಯಾಗುತ್ತಾ ಹೋಗುತ್ತದೆ. ಇದಕ್ಕೆ ಕಾರಣ ಎಲ್ಲ ರೇಖಾಂಶಗಳು ಎರಡೂ ಧ್ರುವಗಳಲ್ಲಿ ಸಂಧಿಸುತ್ತವೆ. ಸಮಭಾಜಕ ವೃತ್ತದ ಮೇಲೆ ಎರಡು ರೇಖಾಂಶಗಳ ನಡುವಿನ ಅಂತರ ಅತಿ ಹೆಚ್ಚು ಅಂದರೆ ಸುಮಾರು 111 ಕಿ.ಮೀ ಗಳಷ್ಟು ಇರುತ್ತದೆ.

**ರೇಖಾಂಶ ಮತ್ತು ವೇಳೆ:** ರೇಖಾಂಶ ಮತ್ತು ವೇಳೆಗೆ ನಿಕಟವಾದ ಸಂಬಂಧವಿದೆ. ಭೂಮಿಯು ತನ್ನ ಅಕ್ಷದ ಸುತ್ತ ತಿರುಗುತ್ತಿರುತ್ತದೆ ಹಾಗೂ ಒಂದು ಸುತ್ತನ್ನು ಪೂರ್ಣಗೊಳಿಸಲು 24 ಗಂಟೆಗಳ ಸಮಯಬೇಕು. ಅಂದರೆ 360 ರೇಖಾಂಶಗಳನ್ನು ಸುತ್ತಿ ಪೂರ್ಣಗೊಳಿಸಲು 24 ಗಂಟೆಗಳು ಬೇಕು. ಒಂದು ರೇಖಾಂಶದಿಂದ ಮತ್ತೊಂದು ರೇಖಾಂಶಕ್ಕೆ ಇರುವ ವೇಳೆಯ ವ್ಯತ್ಯಾಸ 4 ನಿಮಿಷಗಳಾಗಿದ್ದು, ಪ್ರತಿ 15 ರೇಖಾಂಶಗಳಿಗೆ ಒಂದು ಗಂಟೆ ಅಥವಾ 60 ನಿಮಿಷಗಳಾಗುತ್ತವೆ. ($360 \times 4 = 1440 / 60 = 24$ ಗಂಟೆಗಳು). ನಾವು ಪಶ್ಚಿಮದಿಂದ ಪೂರ್ವದ ಕಡೆಗೆ ಚಲಿಸುವಾಗ ವೇಳೆಯು ಹೆಚ್ಚಾಗುತ್ತದೆ. (EGA- East Gain Add) ಹಾಗೂ ಪೂರ್ವದಿಂದ ಪಶ್ಚಿಮದ ಕಡೆಗೆ ಚಲಿಸುವಾಗ ವೇಳೆಯು ಕಡಿಮೆಯಾಗುತ್ತಾ ಹೋಗುತ್ತದೆ (WLS - West Lose Subtracts).

**ಸ್ಥಾನಿಕವೇಳೆ:** ಒಂದು ಸ್ಥಳದ ಸ್ಥಾನಿಕವೇಳೆಯನ್ನು ಆ ಸ್ಥಳದ ರೇಖಾಂಶ ಅಥವಾ ಸೂರ್ಯನ ಸ್ಥಾನಕ್ಕನುಸಾರವಾಗಿ ಹೇಳುತ್ತಾರೆ. ಸ್ಥಾನಿಕವೇಳೆಯು ಆ ಸ್ಥಳದ ಸ್ಥಳೀಯ ರೇಖಾಂಶವನ್ನು ಅದರಲ್ಲೂ ಸ್ಥಳೀಯ ಮಧ್ಯಾಹ್ನದ ರೇಖೆಯನ್ನು ಆಧರಿಸಿರುತ್ತದೆ. ಆ ಸ್ಥಳದ ಮೇಲೆ ಸೂರ್ಯನ ಕಿರಣ ನೇರವಾಗಿ ಬೀಳುವುದರಿಂದ ಮಧ್ಯಾಹ್ನ 12 ಗಂಟೆಯಾಗಿರುತ್ತದೆ. ಆ ಮಧ್ಯಾಹ್ನರೇಖೆ ಹಾದುಹೋಗುವ ಎಲ್ಲಾ ಸ್ಥಳಗಳಲ್ಲೂ ಒಂದೇ ಸ್ಥಾನಿಕ ವೇಳೆಯಿರುತ್ತದೆ. ಪ್ರತಿ ರೇಖಾಂಶವೂ ತನ್ನದೇ ಆದ ಸ್ಥಾನಿಕವೇಳೆ ಹೊಂದಿದೆ.

**ಪ್ರಮಾಣವೇಳೆ:** ಸ್ಥಾನಿಕ ವೇಳೆಯು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುತ್ತದೆ. ಪ್ರತಿಯೊಂದು ಸ್ಥಳವೂ ತನ್ನದೇ ಸ್ಥಾನಿಕ ವೇಳೆಯನ್ನು ಅನುಸರಿಸುವುದರಿಂದ, ಸಾಕಷ್ಟು ಗೊಂದಲವುಂಟಾಗುತ್ತದೆ. ಈ ಗೊಂದಲವನ್ನು ನಿವಾರಿಸಲು ಹಲವು ದೇಶಗಳು ಇಡೀ ದೇಶದಲ್ಲಿ ಏಕರೂಪದ ವೇಳೆಯನ್ನು ಅನುಸರಿಸುತ್ತವೆ. ಇಂತಹ ಏಕರೂಪದ ವೇಳೆಯು ಆ ದೇಶದ ಮಧ್ಯದಲ್ಲಿ ಹಾದುಹೋಗುವ ರೇಖಾಂಶದ ವೇಳೆಯನ್ನಾಧರಿಸಿರುತ್ತದೆ ಅಥವಾ ಆ ರೇಖಾಂಶದ ಮೇಲಿರುವ ಪ್ರಮುಖ ನಗರದ ವೇಳೆಯಾಗಿರುತ್ತದೆ. ಈ ವೇಳೆಯನ್ನು ದೇಶದ ಎಲ್ಲಾ ಭಾಗಗಳಲ್ಲೂ ಅನುಸರಿಸುವುದರಿಂದ ಇದನ್ನು ಪ್ರಮಾಣವೇಳೆ(Standard Time) ಎಂದು ಕರೆಯುತ್ತಾರೆ.

ಭಾರತದಲ್ಲಿ $82\frac{1}{2}^0$ ಪೂರ್ವ ರೇಖಾಂಶವನ್ನು ದೇಶದ ಮಧ್ಯದ ರೇಖಾಂಶವೆಂದು ನಿರ್ಧರಿಸಲಾಗಿದೆ. ಇದು ಉತ್ತರ ಪ್ರದೇಶ ರಾಜ್ಯದ ಅಲಹಾಬಾದ್ ನಗರದ ಮೂಲಕ ಹಾದು ಹೋಗಿದೆ. ಭಾರತದ ವೇಳೆ ಈ ರೇಖಾಂಶವನ್ನು ಆಧರಿಸುವುದರಿಂದ ಇದನ್ನು ಭಾರತದ ಪ್ರಮಾಣ ವೇಳೆ (I S T) ಎನ್ನುವರು. ಇದು ಗ್ರೀನ್‌ವಿಚ್ ವೇಳೆಗಿಂತ 5 ಗಂಟೆ 30 ನಿಮಿಷಗಳಷ್ಟು ಮುಂದಿರುತ್ತದೆ.

**ವೇಳಾವಲಯಗಳು:–** ಪ್ರಪಂಚದ ಕೆಲವು ರಾಷ್ಟ್ರಗಳಲ್ಲಿ 45 ಕ್ಕಿಂತ ಹೆಚ್ಚು ರೇಖಾಂಶಗಳು ಹಾದುಹೋಗುವುದರಿಂದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ 3ರಿಂದ 4ಗಂಟೆಗಳಷ್ಟು ವ್ಯತ್ಯಾಸವಾಗುತ್ತದೆ. ಇಲ್ಲಿ ಒಂದೇ ಪ್ರಮಾಣವೇಳೆಯನ್ನು ಅನುಸರಿಸಲು ಸಾಧ್ಯವಾಗುವುದಿಲ್ಲ, ಆದುದರಿಂದ ಇಡೀ ರಾಷ್ಟ್ರವನ್ನು ಕಾಲವಲಯಗಳನ್ನಾಗಿ ವಿಭಾಗಿಸಲಾಗಿದೆ. ಹಾಗೂ ಇಡೀ ಗೋಳವನ್ನು 24 ವೇಳಾವಲಯಗಳನ್ನಾಗಿ ವಿಂಗಡಿಸಲಾಗಿದೆ. ಪ್ರತಿ ವೇಳಾವಲಯಕ್ಕೆ ಒಂದು ಗಂಟೆಯಷ್ಟು ಮಾತ್ರ ವ್ಯತ್ಯಾಸವಾಗುತ್ತದೆ.

ವಿಸ್ತಾರವಾದ ರಾಷ್ಟ್ರಗಳಲ್ಲಿ ಅನೇಕ ರೇಖಾಂಶಗಳು ಹಾದುಹೋಗುವುದರಿಂದ ಹೆಚ್ಚು ವೇಳಾವಲಯಗಳನ್ನು ಹೊಂದಿರುತ್ತವೆ. ಉದಾಹರಣೆಗಾಗಿ, ರಷ್ಯಾದಲ್ಲಿ 11 ವೇಳಾವಲಯಗಳು, ಯು ಎಸ್ ಎ ಮತ್ತು ಕೆನಡಾಗಳಲ್ಲಿ 5 ವೇಳಾವಲಯ ಹಾಗೂ ಆಸ್ಟ್ರೇಲಿಯಾದಲ್ಲಿ 3 ವೇಳಾವಲಯಗಳಿವೆ.

**ಅಂತರರಾಷ್ಟ್ರೀಯ ದಿನಾಂಕ ರೇಖೆ** (I D L) **:–** ಪ್ರಪಂಚದ ವೇಳೆಯ ಸಮಸ್ಯೆಯನ್ನು ಮೊದಲು ಪ್ರಮಾಣ ವೇಳೆಯಿಂದ, ನಂತರ ವೇಳಾವಲಯದಿಂದಲೂ ಪರಿಹರಿಸಲಾಗಿದೆ. ಆದರೆ ಪ್ರಪಂಚದ ಸುತ್ತು ಸಂಚರಿಸುವ ಪ್ರಯಾಣಿಕರಿಗೆ ವಾರದಲ್ಲಿನ ಸರಿಯಾದ ದಿನಾಂಕ ಮತ್ತು ದಿನಗಳನ್ನು ಸರಿಪಡಿಸಲು ಹೊಸ ಸಮಸ್ಯೆ ಎದುರಾಗುತ್ತದೆ. ಆದ್ದರಿಂದ ಗ್ರೀನ್‌ವಿಚ್ ರೇಖಾಂಶದ ವಿರುದ್ಧವಾದ $180^0$ ರೇಖಾಂಶದ ಮೇಲೆ ಪ್ರಪಂಚ ಪರ್ಯಟನೆ ಮಾಡುವವರು ತಮ್ಮ ಅನುಕೂಲಕ್ಕೆ ದಿನ ಮತ್ತು ದಿನಾಂಕವನ್ನು ಸರಿದೂಗಿಸಿಕೊಳ್ಳಬೇಕಾಗುತ್ತದೆ. ಇದು ಪೆಸಿಫಿಕ್ ಸಾಗರದ ಮೂಲಕ ಹಾದು ಹೋಗುವ $180^0$ ರೇಖಾಂಶದ ಮೇಲೆ ಇದ್ದರೂ ಕೆಲವು ಭೂಭಾಗಗಳನ್ನು ತಪ್ಪಿಸಲು ಅಲ್ಲಲ್ಲಿ ಅಂಕುಡೊಂಕಾಗಿ ಎಳೆಯಲಾಗಿದೆ. ಇದನ್ನೇ ಅಂತರರಾಷ್ಟ್ರೀಯ ದಿನಾಂಕರೇಖೆ ಎನ್ನುವರು.

ಹಡಗು ಮತ್ತು ವಿಮಾನದಲ್ಲಿ ಪ್ರಯಾಣಿಸುವವರು ರೇಖೆಯನ್ನು ದಾಟುವಾಗ ಜನರು ದಿನಾಂಕ ಮತ್ತು ದಿನಗಳನ್ನು ಬದಲಾಯಿಸಿಕೊಳ್ಳಬೇಕಾಗುತ್ತದೆ. ಯಾವುದೇ ಹಡಗು ಈ ರೇಖೆಯನ್ನು ಪಶ್ಚಿಮದಿಂದ ಪೂರ್ವಕ್ಕೆ ದಾಟಿದಾಗ (ಏಷ್ಯಾದಿಂದ ಉತ್ತರ ಅಮೆರಿಕಾ) ಒಂದೇ ದಿನವನ್ನು ಎರಡು ಬಾರಿ ಪಡೆ–ಯುತ್ತದೆ. ಅದೇರೀತಿ ಈ ರೇಖೆಯನ್ನು ಪೂರ್ವದಿಂದ ಪಶ್ಚಿಮದ ಕಡೆಗೆ ಹಾದುಹೋಗುವಾಗ (ಉತ್ತರ ಅಮೇರಿಕಾದಿಂದ ಏಷ್ಯಾ) ಒಂದು ದಿನವನ್ನು ಕಳೆದುಕೊಳ್ಳಬೇಕಾಗುತ್ತದೆ.




**ಪ್ರಪಂಚದ ವೇಳಾವಲಯಗಳು ಮತ್ತು ಅಂತರರಾಷ್ಟ್ರೀಯ ದಿನರೇಖೆ**

## ಅಭ್ಯಾಸಗಳು

**I ಬಿಟ್ಟಿರುವ ಸ್ಥಳಗಳಲ್ಲಿ ಸೂಕ್ತವಾದ ಉತ್ತರಗಳಿಂದ ಭರ್ತಿಮಾಡಿ.**

1 ಭೂಮಿಯ ಒಟ್ಟು ಭೌಗೋಳಿಕ ಕ್ಷೇತ್ರವು __________ಚ.ಕಿ.ಮೀ.

2 ಭೂಮಿಯು __________ ಆಕಾರದಲ್ಲಿದೆ.

3 ಭೂಮಿಯ ಸಮಭಾಜಕವೃತ್ತ ಮತ್ತು ದ್ರವ ಪ್ರದೇಶಗಳ ವ್ಯಾಸವು ______ ಮತ್ತು______ಕಿ.ಮೀ.ಗಳು.

4 $23\frac{1}{2}^0$ ಉತ್ತರ ಅಕ್ಷಾಂಶವನ್ನು __________ ಎಂದು ಕರೆಯುತ್ತಾರೆ.

5 ಭಾರತದ ಪ್ರಮಾಣವೇಳೆಯು __________ ರೇಖಾಂಶವನ್ನು ಆಧರಿಸಿದೆ.

**II ಈ ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿರಿ.**

1 ಭೂಮಿಯನ್ನು 'ಜೀವಂತಗ್ರಹ'ವೆಂದು ಏಕೆ ಕರೆಯುತ್ತಾರೆ?

2 ಉತ್ತರಗೋಳಾರ್ಧವನ್ನು 'ಭೂಪ್ರಧಾನಗೋಳ'ವೆಂದು ಹಾಗು ದಕ್ಷಿಣಗೋಳಾರ್ದವನ್ನು 'ಜಲಪ್ರಧಾನಗೋಳ'ವೆಂದು ಏಕೆ ಕರೆಯುತ್ತಾರೆ ?

3 ಅಕ್ಷಾಂಶಗಳು ಮತ್ತು ರೇಖಾಂಶಗಳೆಂದರೇನು ?

4 ಸ್ಥಾನಿಕ ವೇಳೆ ಮತ್ತು ಪ್ರಮಾಣವೇಳೆಗೂ ಇರುವ ವ್ಯತ್ಯಾಸಗಳನ್ನು ತಿಳಿಸಿ.

5 ಅಂತರರಾಷ್ಟ್ರೀಯ ದಿನಾಂಕ ರೇಖೆ ಎಂದರೇನು ?

**III ಈ ಕೆಳಗಿನವುಗಳ ಅರ್ಥ ಬರೆಯಿರಿ.**

1. ವಿಶಿಷ್ಟ ಗ್ರಹ
2. ಭೂಮಿಯಗಾತ್ರ
3. ಭೂಮ್ಯಾಕಾರ
4. ಭೂಖಂಡಗಳು
5. ಪ್ರಧಾನ ರೇಖಾಂಶ
6. ಭಾರತದ ಪ್ರಮಾಣ ವೇಳೆ

**IV ನೆನಪಿನಲ್ಲಿಡಬೇಕಾದ ಅಂಶಗಳು.**

1. ಜೀವಂತಗ್ರಹ
2. ಸಮಭಾಜಕವೃತ್ತ
3. ಉತ್ತರ ದ್ರುವವೃತ್ತ (ಆರ್ಕ್ಟಿಕ್ ವೃತ್ತ)
4. ಅಂಟಾರ್ಕ್ಟಿಕ್ ವೃತ್ತ
5. ವೇಳಾವಲಯ
6. ಅಂತರ ರಾಷ್ಟ್ರೀಯ ದಿನಾಂಕ ರೇಖೆ

**V ಚಟುವಟಿಕೆ.**

1. ರೇಖಾಂಶಗಳ ಆಧಾರದ ಮೇಲೆ ಪೂರ್ವಾರ್ಧ ಗೋಳದ ರಾಷ್ಟ್ರಗಳು ಮತ್ತು ಪಶ್ಚಿಮಾರ್ಧ ಗೋಳದ ರಾಷ್ಟ್ರಗಳನ್ನು ಪಟ್ಟಿ ಮಾಡಿರಿ.





ತಿರಸ್ಕಾರಕ್ಕೆ ತಿರಸ್ಕಾರವೇ ಮದ್ದಲ್ಲ, ಪ್ರೀತಿಯೇ ದಿವ್ಯ ಔಷಧಿ

**–ಗೌತಮಬುದ್ಧ**

## ಅಧ್ಯಾಯ–2
# ಶಿಲಾಗೋಳ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಶಿಲಾಗೋಳದ ಅರ್ಥ ಮತ್ತು ಪ್ರಾಮುಖ್ಯತೆ ತಿಳಿಯುವುದು.
- ಭೂಮಿಯ ಅಂತರಾಳದಲ್ಲಿರುವ ರಚನೆ ಮತ್ತು ಸಂಯೋಜನೆಯನ್ನು ಅರ್ಥೈಸಿಕೊಳ್ಳುವುದು.
- ಶಿಲೆಗಳ ರಚನೆಯ ಪರಿಚಯ ಮಾಡಿಕೊಳ್ಳುವುದು.
- ಭೂಮಿಯ ಅಂತರ್ಜನಿಕ ಶಕ್ತಿಗಳಾದ, ಜ್ವಾಲಾಮುಖಿಗಳು, ಭೂಕಂಪನಗಳು ಇವುಗಳ ಕಾರಣ ಪರಿಣಾಮಗಳ ಬಗ್ಗೆ ತಿಳಿಯುವುದು.
- ಭೂಮಿಯ ಬಾಹ್ಯ ಶಕ್ತಿಗಳಾದ ಉಷ್ಣಾಂಶ, ಮಾರುತಗಳು, ಮಳೆ, ನದಿ, ಇವುಗಳ ಮಹತ್ವ ತಿಳಿಯುವುದು.
- ಅಂತರ್ಜಲದ ಅರ್ಥ ಮತ್ತು ಮಹತ್ವದ ಬಗ್ಗೆ ತಿಳಿಯುವುದು.

**ಅರ್ಥ ಮತ್ತು ಪ್ರಾಮುಖ್ಯತೆ**

ಭೂಮಿಯ ಅತ್ಯಂತ ಮೇಲ್ಭಾಗದ ಘನ ಪದರವನ್ನು 'ಶಿಲಾಗೋಳ' ಎನ್ನುವರು. ಈ ಪದರವು ಭೂಖಂಡಗಳಲ್ಲಿ ಹೆಚ್ಚು ದಪ್ಪವಾಗಿದ್ದು ಮತ್ತು ಸಾಗರಗಳ ತಳಭಾಗದಲ್ಲಿ ಸ್ವಲ್ಪ ತೆಳುವಾಗಿದೆ. ಶಿಲಾಗೋಳವು ವಿವಿಧ ಬಗೆಯ ಶಿಲೆಗಳು, ಖನಿಜಗಳು, ಮಣ್ಣುಗಳು ಇತ್ಯಾದಿಗಳಿಂದ ಕೂಡಿರುವುದು. ವಾಯುಗೋಳ ಮತ್ತು ಜಲಗೋಳಗಳ ಸಹಾಯದಿಂದ ಈ ಪದರದ ಮೇಲೆ ಜೀವಿಗಳು ಅಸ್ತಿತ್ವದಲ್ಲಿವೆ. ಭೂಖಂಡಗಳು ಶಿಲಾಗೋಳದ ಭಾಗಗಳಾಗಿವೆ, ಇಲ್ಲಿ ವಿವಿಧ ರೀತಿಯ ಭೂಸ್ವರೂಪಗಳು ಅಂದರೆ ಪರ್ವತಗಳು, ಪ್ರಸ್ಥಭೂಮಿಗಳು, ಮೈದಾನಗಳು ಇತ್ಯಾದಿಗಳನ್ನು ಹೊಂದಿದೆ.

**ಭೂಮಿಯ ಅಂತರಾಳದ ರಚನೆ ಮತ್ತು ಸಂಯೋಜನೆ.**

**ಭೂಮಿಯ ಒಳಗೆ ಏನಿದೆಯೆಂದು ನಿಮಗೆ ತಿಳಿದಿದೆಯೇ ?**

ನಮ್ಮ ಭೂಗ್ರಹವು 4.6 ದಶಲಕ್ಷ ಕೋಟಿ ವರ್ಷಗಳಿಗಿಂತ ಹಳೆಯದಾಗಿದ್ದು ಈಗಲೂ ಬದಲಾವಣೆಯ ಕಾರ್ಯಾಚರಣೆ ನಡೆಯುತ್ತಿದೆ. ಮಾನವನು ಈ ಬದಲಾವಣೆಯನ್ನು ಅರ್ಥಮಾಡಿಕೊಳ್ಳಲು ಮತ್ತು ಭೂಮಿಯ ಅಂತರಾಳದ ಬಗ್ಗೆ ಹೆಚ್ಚು ತಿಳಿಯಲು ಪ್ರಯತ್ನಿಸುತ್ತಿರುವನು. ಹಲವಾರು ವರ್ಷಗಳ ಅಧ್ಯಯನ ಮತ್ತು ಸಂಶೋಧನೆಯ ಫಲವಾಗಿ ಮಾನವನು ಭೂಮಿಯ 10 ರಿಂದ 12 ಕಿ.ಮೀ. ಗಳ ಒಳಗಿನ ವಸ್ತುಗಳ ಬಗ್ಗೆ ಮಾಹಿತಿ ಪಡೆಯಲು ಸಾಧ್ಯವಾಗಿದೆ. ಇನ್ನು ಹೆಚ್ಚು ಆಳಕ್ಕೆ ಹೋದಂತೆ ಉಷ್ಣಾಂಶವು ಹೆಚ್ಚಾಗುವುದರಿಂದ (ಪ್ರತಿ 32 ಮೀಟರೆಗೆ $1^0$ ಸೆಂಟಿಗ್ರೇಡ್) ಆಳದ ಬಗ್ಗೆ ಹೆಚ್ಚು ತಿಳಿಯಲು ಕಷ್ಟವಾಗುತ್ತದೆ.

ಭೂಮಿಯ ಅಂತರಾಳದ ಬಗ್ಗೆ ಹೆಚ್ಚು ತಿಳಿಯಲು ಮಾನವನು ಪರೋಕ್ಷ ಮೂಲಗಳನ್ನು ಅವಲಂಬಿಸಿದ್ದಾನೆ. ಅವುಗಳಾವುವೆಂದರೆ ಭೂಕಂಪನದ ಅಲೆಗಳು. ಜ್ವಾಲಾಮುಖಿಯ ವಸ್ತುಗಳು ಇತ್ಯಾದಿ.

ಭೂಮಿಯ ಅಂತರಾಳವು ವಿವಿಧ ಬಗೆಯ ವಸ್ತುಗಳನ್ನು ವಿವಿಧ ರೂಪಗಳಲ್ಲಿ ಒಳಗೊಂಡಿದೆ. ವಸ್ತುಗಳ ಸಾಂದ್ರತೆ, ರಾಸಾಯನಿಕ ಸಂಯೋಜನೆ ಮತ್ತು ಭೌತದ್ರವ್ಯಗಳ ರೂಪದ ಆಧಾರದ ಮೇಲೆ ಭೂಮಿಯ ಅಂತರಾಳವನ್ನು 3 ಪ್ರಮುಖ ಪದರುಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ–ಭೂಕವಚ, ಮ್ಯಾಂಟಲ್ ಮತ್ತು ಕೇಂದ್ರ ಗೋಳ.

**ಭೂಕವಚ:** (Crust) ಇದು ಭೂಮಿಯ ಅಂತ್ಯಂತ ಮೇಲ್ಭಾಗದ ಪದರಾಗಿದೆ. ಇದು ಹೆಚ್ಚಾಗಿ ಸಿಲಿಕ, ಅಲ್ಯೂಮಿನಿಯಂ ಮತ್ತು ಮ್ಯಾಗ್ನೀಷಿಯಂಗಳಿಂದ ಕೂಡಿದೆ. ಇದನ್ನು ಸಾಮಾನ್ಯವಾಗಿ 'ಶಿಲಾಗೋಳ'ವೆಂದೂ ಕರೆಯಲಾಗಿದೆ. ಈ ವಲಯವು ಸುಮಾರು 60 ಕಿ.ಮೀ. ಆಳದವರೆಗೆ ವಿಸ್ತರಿಸಿದೆ. ಈ ಪದರದ ಮೇಲ್ಭಾಗವು ಹೆಚ್ಚು ಹಗುರವಾದ ವಸ್ತುಗಳಿಂದ ಕೂಡಿದೆ. ಇವುಗಳಲ್ಲಿ ಸಿಲಿಕ ಮತ್ತು ಅಲ್ಯೂಮಿನಿಯಂಗಳ ಪ್ರಮಾಣ ಹೆಚ್ಚಾಗಿರುವುದರಿಂದ ಇದನ್ನು 'ಸಿಯಾಲ್' (Sial) ಎಂದು ಕರೆಯಲಾಗಿದೆ. ಇದನ್ನು 'ಭೂಖಂಡಗಳ ಮೇಲ್ಪದರು' ಎಂದೂ ಸಹ ಕರೆಯುವರು. ಇದರ ಕೆಳಭಾಗವು ಸಿಲಿಕ ಮತ್ತು ಮ್ಯಾಗ್ನೀಷಿಯಂಗಳಿಂದ ಕೂಡಿದ್ದು, ಹೆಚ್ಚು ಸಾಂದ್ರಯುತವಾಗಿದೆ. ಇದನ್ನು 'ಸೈಮಾ' (Sima) ಎಂದು ಕರೆಯಲಾಗಿದೆ. ಇದನ್ನು ಕೆಲವೊಮ್ಮೆ 'ಸಾಗರೀಕ ವಲಯದ ಮೇಲ್ಪದರು' ಎಂತಲೂ ಕರೆಯುವರು.



ಭೂಮಿಯ ಅಂತರಾಳ

**ಮ್ಯಾಂಟಲ್:** ಇದು ಭೂಮಿಯ ಅಂತರಾಳದ ಎರಡನೆಯ ಹಾಗೂ ಮಧ್ಯಭಾಗದ ಪದರು. ಮ್ಯಾಂಟಲ್ ವಲಯವು ಭೂ ಮೇಲ್ಮೈ ನಿಂದ ಸುಮಾರು 2900 ಕಿ.ಮಿಗಳ ಆಳದವರೆಗೆ ಇರುವುದು. ಇದರ ಮೇಲ್ಪರದಲ್ಲಿನ ವಸ್ತಗಳು ಭಾಗಶ: ದ್ರವೀಕರಿಸಿದ ಸ್ಥಿತಿಯಲ್ಲಿರುವುದರಿಂದ. ಇದನ್ನು 'ಶಿಲಾಪಾಕ' (ಮ್ಯಾಗ್ಮಾ) ಎಂದು ಕರೆಯುವರು. ಮ್ಯಾಂಟಲ್ ವಲಯವು ಹೆಚ್ಚು ಸಾಂದ್ರತೆಯುಳ್ಳ ಹಾಗೂ ಕಠಿಣ ಶಿಲಾ ವಸ್ತುಗಳಿಂದ ಕೂಡಿದ್ದು ಪ್ರಮುಖವಾಗಿ ಖನಿಜಗಳನ್ನು ಹೆಚ್ಚಾಗಿ ಹೊಂದಿದೆ. ಅವುಗಳೆಂದರೆ ಮೆಗ್ನೀಷಿಯಂ ಮತ್ತು ಕಬ್ಬಿಣ. ಮ್ಯಾಂಟಲ್‌ನಲ್ಲಿ ಎರಡು ಭಾಗಗಳಿವೆ. a) ಮ್ಯಾಂಟಲ್‌ನ ಮೇಲ್ಪದರು ಅಥವಾ 'ಏಸ್ತೆನೋಸ್ಪಿಯರ್' ಎನ್ನುವರು. ಇದು ಭಾಗಶಃ ದ್ರವರೂಪದಲ್ಲಿದೆ. b) ಮ್ಯಾಂಟಲ್‌ನ ಕೆಳಪದರು ಅಥವಾ ಮೆಸಾಸ್ಪಿಯರ್ ಎನ್ನುವರು. ಇದು ಘನರೂಪದಲ್ಲಿರುತ್ತದೆ.

ಭೂಕವಚ ಮತ್ತು ಮ್ಯಾಂಟಲ್ ಸಂಧಿಸುವ ವಲಯವನ್ನು ಮೊಹೊರೋವಿಸಿಕ್ ಅಥವಾ ಮೋಹೋ ವಲಯ ಎನ್ನುವರು ಅದೇರೀತಿ ಮ್ಯಾಂಟಲ್ ಮತ್ತು ಕೇಂದ್ರಗೋಳವನ್ನು ಬೇರ್ಪಡಿಸುವ ಗಡಿಯನ್ನು 'ಗುಟೆನ್‌ಬರ್ಗ್ ಸೀಮಾ ವಲಯ' ಎನ್ನುವರು. ಇಲ್ಲಿಂದ ಮೇಲೆ ಅಥವಾ ಕೆಳಗೆ ಶಿಲೆಗಳು ವಿವಿಧ ರಾಸಾಯನಿಕ ಸಂಯೋಜನೆಗಳಿಂದ ಕೂಡಿರುತ್ತವೆ.

**ಕೇಂದ್ರ ಗೋಳ(ಭೂ ತಿರುಳು):** ಇದು ಭೂಮಿಯ ಅತ್ಯಂತ ಒಳಭಾಗ. ಇದು ಭೂಮಿಯ ಮೇಲ್ಮೈನಿಂದ 6,371 ಕಿ.ಮಿ ಆಳದವರೆಗೆ ಇರುವುದು. ಕೇಂದ್ರಗೋಳವು ನಿಕ್ಕಲ್ (Ni) ಮತ್ತು ಕಬ್ಬಿಣ (Fe) ದ ವಸ್ತುಗಳಿಂದ ಕೂಡಿರುವುದು. ಇದರಿಂದ ಕೇಂದ್ರವಲಯವನ್ನು 'ನಿಫೆ' (Nife) ಎಂದು ಸಹ ಕರೆಯಲಾಗಿದೆ. ಕೇಂದ್ರವಲಯವನ್ನು ಎರಡು ಉಪ ವಲಯಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ a) ಹೊರಕೇಂದ್ರ –ಇದು ಅರೆದ್ರವರೂಪ ಸ್ಥಿತಿಯಲ್ಲಿದೆ. b) ಒಳಕೇಂದ್ರ – ಇದು ಘನರೂಪದಲ್ಲಿದೆ.

**ಇದು ನಿಮಗೆ ತಿಳಿದಿರಲಿ.**

**ಪ್ರಪಂಚದ ಅತಿ ಆಳವಾದ ಕೆಲವು ಗಣಿಪ್ರದೇಶಗಳು**

1. ರಷ್ಯಾದ ಅಕೋಲ ಪರ್ಯಾಯ ದ್ವೀಪ ಸುಮಾರು 12 ಕಿ.ಮೀ ಆಳವಾಗಿದೆ.
2. ದಕ್ಷಿಣ ಆಫ್ರಿಕಾದಲ್ಲಿ ಕಿಂಬರ್ಲಿ ವಜ್ರದ ಗಣಿಯು ಸುಮಾರು 3.9 ಕಿ.ಮಿ. ಆಳವಿದೆ
3. ಭಾರತದ ಕರ್ನಾಟಕದಲ್ಲಿನ ಕೆ.ಜಿ.ಎಫ್‌ನ ಗಣಿಯು ಸುಮಾರು 1.5ಕಿ.ಮಿ. ಆಳವಿದೆ. .

## ಶಿಲೆಗಳು (Rocks)

ಶಿಲೆಗಳು ವಿವಿಧ ಬಗೆಯ ಖನಿಜಗಳಿಂದ ಕೂಡಿರುವ ಕಠಿಣ ವಸ್ತುಗಳಾಗಿವೆ. ಇವುಗಳು ಶಿಲಾಗೋಳದಲ್ಲಿ ಸ್ವಾಭಾವಿಕವಾಗಿ ಘನ ರೂಪದಲ್ಲಿದ್ದು ಅಜೈವಿಕ (Inorganic) ವಸ್ತುಗಳನ್ನು ಒಳಗೊಂಡಿರುತ್ತವೆ. ಇದರಿಂದ ಶಿಲೆಗಳನ್ನು ಖನಿಜಗಳ ಮಿಶ್ರಣವೆಂದೂ ಕರೆಯುವರು. ಈ ಶಿಲೆಗಳು ವಿವಿಧ ನೈಸರ್ಗಿಕ ಪ್ರಕ್ರಿಯೆಗಳಿಂದ ನಿರ್ಮಿತವಾಗುವುದರಿಂದ ಇವುಗಳನ್ನು ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ; ಅಗ್ನಿ ಶಿಲೆಗಳು, ಕಣ ಶಿಲೆಗಳು ಮತ್ತು ರೂಪಾಂತರ ಶಿಲೆಗಳು.

**1. ಅಗ್ನಿ ಶಿಲೆಗಳು** (Igneous Rocks): ಅಗ್ನಿ ಶಿಲೆಗಳನ್ನು ಆಂಗ್ಲಭಾಷೆಯಲ್ಲಿ 'ಇಗ್ನೀಯಸ್ ರಾಕ್ಸ್' ಎಂದು ಕರೆಯುವರು. ಇಗ್ನೀಯಸ್ ಎಂದರೆ ಬೆಂಕಿ ಎಂದರ್ಥ. ಇದು ಲ್ಯಾಟಿನ್ ಭಾಷೆಯ 'ಇಗ್ನೀಸ್' ಅಥವಾ ಸಂಸ್ಕೃತದ 'ಅಗ್ನಿ' ಎಂಬ ಪದದಿಂದ ಬಂದಿದೆ. ಅಗ್ನಿ ಶಿಲೆಗಳು ಭೂಮಿಯ ಅಂತರಾಳದಿಂದ ಶಿಲಾಪಾಕವು ಹೊರ ಹೊಮ್ಮಿ ಭೂ ಮೇಲ್ಮೈಯಲ್ಲಿ ತಂಪಾಗಿ ಘನೀಭವಿಸುವುದರಿಂದ ನಿರ್ಮಿತವಾಗುತ್ತವೆ. ಅಗ್ನಿಶಿಲೆಗಳು ಮೊದಲು ನಿರ್ಮಾಣವಾಗುವುದರಿಂದ ಇವುಗಳನ್ನು ಪ್ರಾಥಮಿಕ ಶಿಲೆಗಳೆಂದೂ ಕರೆಯುವರು. ಅಗ್ನಿ ಶಿಲೆಗಳಲ್ಲಿ ಈ ಕೆಳಕಂಡಂತೆ ಎರಡು ವಿಧಗಳಿವೆ.



**ಅಂತಸ್ಸರಣ ಶಿಲೆಗಳು:** ಶಿಲಾಪಾಕ ಅಥವಾ ಮ್ಯಾಗ್ಮಾ ಭೂ ಮೇಲ್ಮೈಯನ್ನು ತಲುಪುವ ಮೊದಲೇ ಕೆಲವು ವೇಳೆ ಅಂತರಾಳದಲ್ಲಿ ತಂಪಾಗಿ ಘನೀಭವಿಸಿ ನಿಧಾನವಾಗಿ ಅಂತರಾಗ್ನಿ ಶಿಲೆಗಳು ನಿರ್ಮಿತವಾಗುತ್ತವೆ. ಈ ಶಿಲೆಗಳು ದಪ್ಪ ಹರಳಿನಿಂದ ಕೂಡಿರುತ್ತವೆ ಮತ್ತು ಇವುಗಳು ಭೂಮಿಯ ಒಳಭಾಗದಲ್ಲಿ ಹೆಚ್ಚು ಆಳದಲ್ಲಿರುತ್ತವೆ. ಉದಾ: ಗ್ರಾನೈಟ್, ಡಯೊರೈಟ, ಗ್ಯಾಬ್ರೊ ಇತ್ಯಾದಿ.

ಶಿಲಾ ಚಕ್ರ

**ಬಹಿಸ್ಸರಣ ಶಿಲೆಗಳು :** ಶಿಲಾಪಾಕವು (ಮ್ಯಾಗ್ಮ) ಹೊರಹೊಮ್ಮಿ ಕ್ರಮೇಣ ಭೂಮೇಲ್ಮೈಯಲ್ಲಿ ಘನೀಭವಿಸಿ ಬಹಿಸ್ಸರಣ ಶಿಲೆಗಳು ನಿರ್ಮಿತವಾಗುತ್ತವೆ. ಈ ಶಿಲೆಗಳು ಸಾಮಾನ್ಯವಾಗಿ ಸಣ್ಣ ಹರಳುಗಳಿಂದ ಕೂಡಿದ್ದು ಗಾಜಿನಂತೆ ನಯವಾಗಿರುತ್ತದೆ. ಏಕೆಂದರೆ ಲಾವಾರಸವು ಭೂಮಿಯ ಮೇಲೆ ಬಹುಬೇಗ ತಂಪಾಗಿ, ಘನೀಭವಿಸಿ ಶಿಲೆಗಳಾಗುತ್ತವೆ. ಉದಾ: ಬಸಾಲ್ಟ್, ಆಂಡೆಸೈಟ್.

ಶಿಲಾವಸ್ತುಗಳು ಭೂಮಿಯ ಒಳಭಾಗದಲ್ಲಿ ಕರಗಿ ದ್ರವ ಅಥವಾ ಅರೆ ದ್ರವರೂಪದಲ್ಲಿರುತ್ತವೆ. ಇದನ್ನು 'ಮ್ಯಾಗ್ಮಾ' (ಶಿಲಾಪಾಕ) ಎನ್ನುವರು. ಇದು ಭೂಮಿಯ ಹೊರಭಾಗಕ್ಕೆ ಬಂದಾಗ 'ಲಾವಾರಸ' ಎನ್ನುವರು.

**2. ಕಣ ಶಿಲೆಗಳು:** ಇದು ಆಂಗ್ಲಭಾಷೆಯ ಸೆಡಿಮೆಂಟರಿ ಅಥವಾ ಲ್ಯಾಟಿನ್ ಭಾಷೆಯ **'ಸೆಡಿಮೆಂಟಮ್'** ಎಂಬ ಪದದಿಂದ ಬಳಕೆಗೆ ಬಂದಿದೆ, ಅಂದರೆ ತಳಸೇರುವಿಕೆ ಎಂದರ್ಥ. ಕಣಶಿಲೆಗಳು ನೀರು, ಗಾಳಿ ಮತ್ತು ಹಿಮ ಮುಂತಾದ ಕರ್ತೃಗಳಿಂದ ನಿರ್ಮಾಣವಾಗುತ್ತವೆ. ಇವು ಆಗ್ನಿಶಿಲೆಗಳನ್ನು ಚೂರುಚೂರಾಗಿ ಒಡೆದು ಸವೆಸುತ್ತವೆ. ಒಡೆದ ಶಿಲಾಚೂರುಗಳು ಸಾಗಿಸಲ್ಪಟ್ಟು ಕೆಲವು ಸ್ಥಳಗಳಲ್ಲಿ ಸಂಚಯಗೊಳ್ಳುತ್ತವೆ. ಇವು ಪದರು ರೂಪದಲ್ಲಿ ರಚನೆಯಾಗುವುದರಿಂದ ಕಣಶಿಲೆಗಳನ್ನು ಪದರು ಶಿಲೆಗಳೆಂದು ಕರೆಯುವರು. ಕಣಶಿಲೆಗಳು ಅಗ್ನಿಶಿಲೆಯ ನಂತರ ರಚನೆಯಾಗುವುದರಿಂದ ದ್ವಿತೀಯ ಶಿಲೆಗಳೆಂದೂ ಕರೆಯುವರು. ಸಾಮಾನ್ಯವಾಗಿ ಇವು ಸಮುದ್ರ, ಸಾಗರ, ಮೊದಲಾದ ಜಲರಾಶಿಗಳಲ್ಲಿ ಸಂಚಯಿತವಾಗಿ ನಿರ್ಮಿತವಾಗುವುದರಿಂದ ಇವುಗಳನ್ನು **'ಜಲಶಿಲೆ'**ಗಳೆಂದೂ ಕರೆಯುವರು. ಇವುಗಳ ನಿರ್ಮಾಣದಲ್ಲಿ ನೀರು ಮುಖ್ಯ ಪಾತ್ರ ವಹಿಸುವುದು. ಕಣ ಶಿಲೆಗಳನ್ನು ಎರಡು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಭೌತಿಕ ಕ್ರಿಯೆಯಿಂದಾದ ಕಣ ಶಿಲೆಗಳು ಮತ್ತು ರಾಸಾಯನಿಕ ಕ್ರಿಯೆಯಿಂದಾದ ಕಣ ಶಿಲೆಗಳು.




**ಭೌತಿಕ ಕ್ರಿಯೆಯಿಂದಾದ ಶಿಲೆಗಳು :** ಇವುಗಳು ಮೂಲಶಿಲೆಯ ಶಿಥಿಲೀಕರಣ ಮತ್ತು ಸವೆತ ಕಾರ್ಯದಿಂದ ಉತ್ಪತ್ತಿಯಾದ ಶಿಲಾ ಚೂರುಗಳಿಂದ ಈ ಶಿಲೆಗಳು ನಿರ್ಮಿತವಾಗುತ್ತವೆ. ಉದಾ: ಮರಳುಗಲ್ಲು (ಮರುಳುಮಯಶಿಲೆ) ಮತ್ತು ಜೇಡಿಶಿಲೆ (ಮೃಣ್ಮಯಶಿಲೆಗಳು).

**ರಾಸಾಯನಿಕ ಕ್ರಿಯೆಯಿಂದಾದ ಕಣಶಿಲೆಗಳು :** ಲವಣಾಂಶಗಳಿಂದ ಕೂಡಿರುವ ನೀರಿನ ದ್ರಾವಣವು ಉಷ್ಣಾಂಶದಿಂದ ಬಾಷ್ಪೀಭವನಗೊಳ್ಳುವುದರಿಂದ ರಾಸಾಯನಿಕ ಕಣಗಳು ಸಂಚಯಗೊಂಡು ಈ ಶಿಲೆಗಳು ನಿರ್ಮಿತವಾಗುತ್ತವೆ. ಉದಾ : ಕಲ್ಲುಪ್ಪು, ಜಿಪ್ಸಂ ಇತ್ಯಾದಿ.

**ಜೈವಿಕ ಕ್ರಿಯೆಗಳಿಂದಾದ ಕಣಶಿಲೆಗಳು :** ಜೀವಾವಶೇಷಗಳಾದ ಜಲಚರಗಳ ಚಿಪ್ಪುಗಳು, ಸಸ್ಯವರ್ಗ ಮತ್ತು ಪ್ರಾಣಿವರ್ಗಗಳ ಪಳೆಯುಳಿಕೆಗಳು ಮಣ್ಣಿನಲ್ಲಿ ಸೇರಿ ಗಟ್ಟಿಯಾಗಿ ಜೈವಿಕ ಕಣಶಿಲೆಗಳಾಗುತ್ತವೆ. ಉದಾ: ಸುಣ್ಣಕಲ್ಲು (ಚೂರ್ಣಾಧಿಕ್ಯಶಿಲೆ) ಮತ್ತು ಕಲ್ಲಿದ್ದಲು (ಇಂಗಾಲಾಧಿಕ್ಯಶಿಲೆ)

**3. ರೂಪಾಂತರ ಶಿಲೆಗಳು:** ಅಗ್ನಿಶಿಲೆಗಳು ಹಾಗೂ ಕಣಶಿಲೆಗಳು ಅತ್ಯಧಿಕ ಉಷ್ಣ ಹಾಗೂ ಒತ್ತಡದ ಪರಿಣಾಮದಿಂದ ಮಾರ್ಪಾಡುಹೊಂದಿ ರೂಪಾಂತರ ಶಿಲೆಗಳಾಗಿ ರೂಪುಗೊಳ್ಳುತ್ತವೆ.

**ಉದಾ:**

ಗ್ರಾನೈಟ್–>ನೀಸ್, ಮರುಳು ಶಿಲೆ–>ಸ್ಪಟಿಕ ಶಿಲೆ,

ಬಸಾಲ್ಟ್–> ಶಿಸ್ಟ್, ಕಲ್ಲಿದ್ದಲು–>ಗ್ರಾಫೈಟ್,

ಸುಣ್ಣಕಲ್ಲು–>ಅಮೃತ ಶಿಲೆ, ಗ್ರಾಫೈಟ್–>ವಜ್ರ

ರೂಪಾಂತರ ಶಿಲೆಗಳು ಅತ್ಯಂತ ಕಠಿಣವಾದವು. ಇವುಗಳು ಅಮೂಲ್ಯವಾದ ಖನಿಜಗಳನ್ನು ಮತ್ತು ಬೆಲೆಬಾಳುವ ಹರಳುಗಳನ್ನು ಒಳಗೊಂಡಿರುತ್ತವೆ. ಉದಾ: ವಜ್ರ, ರೂಬಿ, ಎಮರಾಲ್ಡ್, ಇತ್ಯಾದಿ.

## ಭೂಕವಚದ ಶಕ್ತಿಗಳು

ಭೂಮಿಯು ಎರಡು ಬಗೆಯ ಶಕ್ತಿಗಳನ್ನು ಹೊಂದಿದೆ. ಈ ಶಕ್ತಿಗಳು ಭೂ ಮೇಲ್ಮೈನ ಸ್ವರೂಪಗಳ ಮೇಲೆ ಪರಿಣಾಮವನ್ನು ಬೀರುತ್ತವೆ. ಅವುಗಳೆಂದರೆ ಅಂತರ್ಜನಿತ (Internal force) ಅಥವಾ ಆಂತರಿಕ ಶಕ್ತಿ ಹಾಗೂ ಬಹಿರ್ಜನಿತ ಅಥವಾ ಬಾಹ್ಯ ಶಕ್ತಿ (External force)ಗಳು.

### ಅಂತರ್ಜನಿತ ಶಕ್ತಿಗಳು

ಇವುಗಳು ಭೂಮಿಯ ಒಳಗಿನ ಅಥವಾ ಆಂತರಿಕ ಶಕ್ತಿಗಳು. ಇವುಗಳಿಂದ ಭೂ ಮೇಲ್ಮೈನ ಸ್ವರೂಪಗಳು ಕ್ಷಿಪ್ರವಾಗಿ ಬದಲಾವಣೆಯನ್ನು ಹೊಂದುತ್ತವೆ. ಉದಾ: ಜ್ವಾಲಾಮುಖಿಗಳು ಮತ್ತು ಭೂಕಂಪಗಳು.

### ಜ್ವಾಲಾಮುಖಿಗಳು (Volcanoes)

ಭೂ ಮೇಲ್ಮೈನಲ್ಲಿ ಬಿರುಕು ಅಥವಾ ರಂಧ್ರಗಳು ಅಥವಾ ದ್ವಾರಗಳು ಉಂಟಾಗಿ ಅವುಗಳ ಮೂಲಕ ಭೂಮಿಯ ಒಳಗಿನ ಶಿಲಾಪಾಕವು ಹೊರಬೀಳುವುದನ್ನು ಜ್ವಾಲಾಮುಖಿಯೆಂದು ಕರೆಯುವರು. ಭೂಕವಚದಿಂದ ನೇರವಾಗಿ ಆಳದಲ್ಲಿರುವ ಶಿಲಾಪಾಕದ ಜಾಗಕ್ಕೆ ಸಂಪರ್ಕ ಕಲ್ಪಿಸುವ ರಂಧ್ರಗಳನ್ನು ನಾಳವೆನ್ನುವರು. ಇದರ ಮೂಲಕ ಶಿಲಾಪಾಕ, ಶಿಲಾಚೂರುಗಳು, ಲಾವಾರಸ, ಬೂದಿ, ನೀರಾವಿ, ಜ್ವಾಲೆಗಳು ಮತ್ತು ಇತರೆ ಅನಿಲಗಳು ಭೂಮಿಯ ಅಂತರಾಳದಿಂದ ಹೊರ ಹೊಮ್ಮುತ್ತವೆ.



ಜ್ವಾಲಾಮುಖಿಯ ರಚನೆ

ಆಲಿಕೆಯಾಕಾರದ ಜ್ವಾಲಾಮುಖಿ ಬಾಯಿಯನ್ನು ಜ್ವಾಲಾಮುಖಿ ಕುಂಡ ಎನ್ನುವರು. ತಗ್ಗಾದ ವಿಸ್ತಾರವಾದ ಜ್ವಾಲಾಮುಖಿಯ ದ್ವಾರವನ್ನು ಕಾಲ್ಡೆರಾ (caldera)

**ಜ್ವಾಲಾಮುಖಿಯ ವಿಧಗಳು:** ಜ್ವಾಲಾಮುಖಿಗಳನ್ನು ಅವುಗಳ ಕಾರ್ಯಾಚರಣೆ ಆಧರಿಸಿ ಮೂರು ವಿಧಗಳಾಗಿ ವಿಂಗಡಿಸಬಹುದು.

**ಜಾಗೃತ ಜ್ವಾಲಾಮುಖಿಗಳು (Active Volcanoes):** ಇವು ಮೇಲಿಂದ ಮೇಲೆ ಸ್ಫೋಟಗೊಂಡು ಲಾವಾರಸ, ಅನಿಲ, ಬೂದಿ ಇತ್ಯಾದಿಗಳನ್ನು ಹೊರಚಿಮ್ಮುತ್ತವೆ. ಇವನ್ನೇ ಜಾಗೃತ ಜ್ವಾಲಾಮುಖಿ ಎನ್ನುವರು. ಪ್ರಪಂಚದಾದ್ಯಂತ ಸುಮಾರು 600 ಜೀವಂತ ಜಾಗೃತ ಜ್ವಾಲಾಮುಖಿಗಳಿವೆ. ಉದಾ: ಫಿಲಿಪೈನ್ಸ್ ದ್ವೀಪದ ಪಿನಾಟುಬೊ, ಇಟಲಿಯ ಸ್ಟ್ರಾಂಬೋಲಿ ಮತ್ತು ಎಟ್ನಾ, ಯುಎಸ್‌ಎಯ ಸೇಂಟ್ ಹೆಲೆನಾ, ಹವಾಯಿ ದ್ವೀಪದ ಮೌನಲೋವ ಮೊದಲಾದವು.

**ಸುಪ್ತ ಜ್ವಾಲಾಮುಖಿಗಳು(Dormant Volcanoes) :** ಒಮ್ಮೆ ಸ್ಫೋಟಿಸಿ ಅನಂತರ ಬಹುಕಾಲ ಕಾರ್ಯಾಚರಣೆ ನಡೆಸದೆ ಸುಪ್ತವಾಗಿದ್ದು ಯಾವಾಗಲೋ ಒಮ್ಮೆ ಜಾಗೃತವಾಗಿ ಕಾರ್ಯಾಚರಣೆ ನಡೆಸುವ

ಜ್ವಾಲಾಮುಖಿಗಳನ್ನು ಸುಪ್ತ ಜ್ವಾಲಾಮುಖಿ ಎನ್ನುವರು. ಉದಾ: ಇಟಲಿಯ ಮೌಂಟ್ ವೆಸೂವಿಯಸ್, ಜಪಾನಿನ ಫ್ಯೂಜಿಯಾಮ, ಇಂಡೋನೇಷಿಯಾದ ಕ್ರಕಟೋವ, ತಾಂಜೇನಿಯಾದ ಕಿಲಿಮಾಂಜಿರೋ ಮೊದಲಾದವು.

**ಲುಪ್ತ ಜ್ವಾಲಾಮುಖಿಗಳು (Extinct Volcanoes):** ಇವುಗಳು ಪುರಾತನಕಾಲದಲ್ಲಿ ಕಾರ್ಯಾಚರಣೆ ನಡೆಸಿದ್ದು ನಂತರದಲ್ಲಿ ಯಾವುದೇ ಕಾರ್ಯಾಚರಣೆ ನಡೆಸಿರುವುದಿಲ್ಲ. ಉದಾ: ಅರ್ಜೆಂಟೈನಾದ ಅಕಾಂಕಗುವಾ, ತಾಂಜೇನಿಯಾದ ಗೊರಾಂಗೊರೊ, ಸ್ಕಾಟ್ಲೆಂಡ್‌ನ ಆರ್ಥರ್‌ಸೀಟ್ ಮೊದಲಾದವು.

**ನಿಮಗೆ ತಿಳಿದಿರಲಿ**

**ಪ್ರಪಂಚದ ಪ್ರಸಿದ್ಧ ಜ್ವಾಲಾಮುಖಿಗಳು**

1. ಮೌಂಟ್ ವೆಸೂವಿಯಸ್, (ಇಟಲಿ)
2. ಕ್ರಕಟೋವ, (ಇಂಡೋನೇಷಿಯ)
3. ಮೌಂಟ್ ಪೀಲೀ (ವೆಸ್ಟ್ ಇಂಡೀಸ್)
4. ಮೌಂಟ್ ಫ್ಯೂಜಿಯಾಮ ಜ್ವಾಲಾಮುಖಿಯನ್ನು ಜಪಾನಿಯರು ದೇವರೆಂದು ಪೂಜಿಸುತ್ತಾರೆ.

**ಜ್ವಾಲಾಮುಖಿಯ ವಸ್ತುಗಳು** : ಜ್ವಾಲಾಮುಖಿಗಳಿಂದ ಮೂರು ಬಗೆಯ ವಸ್ತುಗಳು ಹೊರಬೀಳುತ್ತವೆ. ಅವುಗಳೆಂದರೆ:–

**ಘನವಸ್ತುಗಳು**–ಜ್ವಾಲಾಮುಖಿಯ ಗುಂಡುಗಳು, ಕಿಟ್ಟಧೂಳು, ಬೂದಿ.

**ಅನಿಲಗಳು**–ಗಂಧಕ, ಜಲಜನಕ, ಇಂಗಾಲದ ಡೈ ಆಕ್ಸೈಡ್, ನೀರಾವಿ ಮೊದಲಾದವು.

**ದ್ರವವಸ್ತು** –ಲಾವಾರಸ.

**ಜ್ವಾಲಾಮುಖಿಯ ಹಂಚಿಕೆ** : ಪ್ರಪಂಚದ ಅನೇಕ ಪ್ರದೇಶಗಳಲ್ಲಿ ಜ್ವಾಲಾಮುಖಿಗಳು ಸಂಭವಿಸುತ್ತವೆ. ದ್ವೀಪಗಳು, ಹೊಸಮಡಿಕೆ ಪರ್ವತ ಶ್ರೇಣಿಗಳು ಹಾಗೂ ಭೂ ಖಂಡಗಳಲ್ಲಿರುವ ಪ್ರಸ್ಥಭೂಮಿಗಳಲ್ಲೂ ಕಂಡುಬರುತ್ತವೆ. ಜ್ವಾಲಾಮುಖಿ ಕಂಡುಬರುವ ಪ್ರಮುಖ ಪ್ರದೇಶಗಳೆಂದರೆ –

ಪೆಸಿಫಿಕ್ ವೃತ್ತಪ್ರದೇಶ ಅಥವಾ ಪೆಸಿಫಿಕ್ ಅಗ್ನಿವೃತ್ತ : ಪೆಸಿಫಿಕ್ ಸಾಗರ ಕರಾವಳಿ ತೀರಗಳಲ್ಲಿ ಅಂದರೆ ಫಿಲಿಫೈನ್ಸ್, ಜಪಾನ್, ಯುಎಸ್ಎ, ಮಧ್ಯಅಮೇರಿಕಾ, ದಕ್ಷಿಣಅಮೇರಿಕಾ ಇತ್ಯಾದಿಗಳಲ್ಲಿ ಜ್ವಾಲಾಮುಖಿಗಳಿವೆ

ಮಧ್ಯ ಅಟ್ಲಾಂಟಿಕ್‌ವಲಯ : ಐಸ್‌ಲ್ಯಾಂಡ್, ವೆಸ್ಟ್‌ಇಂಡೀಸ್ ದ್ವೀಪಗಳು

ಮಧ್ಯ ಭೂಖಂಡವಲಯ : ಇಟಲಿ, ಸ್ಪೇನ್, ಫ್ರಾನ್ಸ್, ಗ್ರೀಸ್, ಟರ್ಕಿ ಇತ್ಯಾದಿ

ಪ್ರಮುಖ ದ್ವೀಪಗಳು : ಹವಾಯಿ, ಇಂಡೋನೇಷಿಯಾ ಇತ್ಯಾದಿ.

**ಭೂಕಂಪಗಳು: (Earthquakes)**



ಭೂಕಂಪದ ಕ್ರಿಯೆಗಳು

ಭೂ ಮೇಲ್ಮೈಯಲ್ಲಿ ಉಂಟಾಗುವ ನಡುಗುವಿಕೆ, ಕಂಪನ ಹಾಗೂ ಕಂಪನಗಳ ಸರಣಿಯನ್ನು ಭೂಕಂಪವೆಂದು ಕರೆಯುವರು. ಇವುಗಳು ಭೂಕವಚದ ಶಿಲೆಗಳ ಕ್ಷಿಪ್ರ ಚಲನೆಯಿಂದ ಭೂಕವಚ ಅಥವಾ ಮ್ಯಾಂಟಲ್ ಪದರದೊಳಗೆ ಉಂಟಾಗುತ್ತವೆ. ಭೂಕಂಪದ ಕಂಪನದ ತೀವ್ರತೆಯು ಭೂಕಂಪನದ ಹೊರಕೇಂದ್ರದ ಸಮೀಪ ಗರಿಷ್ಠ ಪ್ರಮಾಣದಲ್ಲಿರುತ್ತದೆ ಮತ್ತು ಭೂಕಂಪ ಹೊರಕೇಂದ್ರದಿಂದ ದೂರ ಹೋದಂತೆ ಕಂಪನದ ತೀವ್ರತೆಯು ಕಡಿಮೆಯಾಗುತ್ತಾ ಹೋಗುತ್ತದೆ. ಭೂಕಂಪನಾಭಿಯು ಭೂ ಮೇಲ್ಮೈನ ಸಮೀಪದಲ್ಲಿದ್ದರೆ ಭೂಕಂಪದ ಅಲೆಗಳು ಪ್ರಭಲವಾಗಿದ್ದು ಹೆಚ್ಚು ಪರಿಣಾಮವನ್ನುಂಟು ಮಾಡುತ್ತವೆ.

ಭೂಮಿಯ ಅಂತರಾಳದಲ್ಲಿ ಉಂಟಾಗುವ ಭೂಕಂಪದ ಉಗಮಸ್ಥಾನವನ್ನು ಭೂಕಂಪನಾಭಿಕೇಂದ್ರ ಅಥವಾ ಭೂಕಂಪ ಒಳಕೇಂದ್ರವೆಂದು ಕರೆಯುವರು. ಭೂಕಂಪ ನಾಭಿಯಿಂದ ಲಂಬಕೋನದಲ್ಲಿರುವ ಭೂ ಮೇಲ್ಮೈನ ಸ್ಥಳವನ್ನು ಭೂಕಂಪ ಹೊರಕೇಂದ್ರವೆನ್ನುವರು.

ಭೂಕಂಪದ ವೈಜ್ಞಾನಿಕ ಅಧ್ಯಯನವನ್ನು ಭೂಕಂಪಶಾಸ್ತ್ರ (Seismology) ಎನ್ನುವರು. ಭೂಕಂಪ ಅಲೆಗಳ ಆರಂಭ ಸ್ಥಳ, ವೇಳೆ, ವೇಗ ಹಾಗೂ ದಿಕ್ಕನ್ನು ದಾಖಲಿಸುವ ಉಪಕರಣವನ್ನು ಭೂಕಂಪಮಾಪಕ (Seismograph) ಎನ್ನುವರು.

**ಭೂಕಂಪನಗಳು ಉಂಟಾಗಲು ಕಾರಣಗಳು**

**ಭೂರಚನಾ ಕಾರಣಗಳು :** ಭೂಕವಚವು ಹಲವಾರು ದೊಡ್ಡ ಮತ್ತು ಸಣ್ಣ ಶಿಲಾಫಲಕಗಳಿಂದ ಕೂಡಿದೆ. ಈ ಫಲಕಗಳ ಅಂಚುಗಳು ಚಲಿಸುವ ಸ್ಥಳಗಳಾಗಿದ್ದು ಇವು ಭೂಕಂಪಗಳುಂಟಾಗುವ ಮೂಲಸ್ಥಳಗಳಾಗಿವೆ. (ಪೆಸಿಫಿಕ್ ಸಾಗರದ ಸುತ್ತಮುತ್ತಲಿನ ವಲಯ).

**ಜ್ವಾಲಾಮುಖಿ ಕಾರ್ಯಾಚರಣೆಗಳು :** ಜ್ವಾಲಾಮುಖಿಗಳಲ್ಲಿ ಅನಿಲಗಳ ಸ್ಫೋಟನೆಯಿಂದ ಭೂಕಂಪಗಳುಂಟಾಗುತ್ತವೆ. (ಇಂಡೋನೇಸಿಯಾದ ಕ್ರಕಟೋವ ಜ್ವಾಲಾಮುಖಿ).

**ಸ್ತರಭಂಗ :** ಭೂಮಿಯ ಶಿಲಾಸ್ತರಗಳ ಮರುಹೊಂದಾಣಿಕೆಯು ಹಲವು ವಿಧಗಳಲ್ಲಿ ಕಂಡುಬರುವುದು. ಅವುಗಳ ಸ್ಥಾನಪಲ್ಲಟ, ಭೂಕುಸಿತ ಇವುಗಳಿಂದ ಭೂಸ್ತರಗಳು ಮೇಲಕ್ಕೆ ಅಥವಾ ಕೆಳಮುಖವಾಗಿ ಜರುಗುವುದರಿಂದ ಉದ್ದವಾದ ಬಿರುಕುಗಳುಂಟಾಗುತ್ತವೆ. ಈ ರೀತಿ ಭೂಪಲಕಗಳು ಚಲಿಸುವುದರಿಂದ ಭೂಕಂಪಗಳುಂಟಾಗುತ್ತವೆ. (ಅಮೆರಿಕಾದ ಕ್ಯಾಲಿಫೋರ್ನಿಯಾದಲ್ಲಿರುವ ಸಾನ್ ಆಂಡ್ರಿಯಾಸ್ ಸ್ತರಭಂಗ ಪ್ರದೇಶ.)

**ಮಾನವ ನಿರ್ಮಿತ ಅಂಶಗಳು :** ಪ್ರಕೃತಿಯೊಡನೆ ಮಾನವನು ನಡೆಸುವ ಅತಿಯಾದ ಕಾರ್ಯಚರಣೆಗಳು ಭೂಕಂಪಗಳುಂಟಾಗಲು ಪ್ರಮುಖ ಕಾರಣಗಳಾಗಿವೆ. ಅವುಗಳೆಂದರೆ ಗಣಿಗಾರಿಕೆ, ಬೃಹತ್ ಆಣೆಕಟ್ಟುಗಳು, ಜಲಾಶಯಗಳು ಮತ್ತು ಅಣುಪರೀಕ್ಷೆಗಳು ಇತ್ಯಾದಿ (ಮಹಾರಾಷ್ಟ್ರದ ಕೊಯ್ನಾ ಅಣೆಕಟ್ಟು, ಯು.ಎಸ್. ಎಯ ಹೂವರ್‌ಡ್ಯಾಂ.)

**ಭೂಕಂಪನ ಅಲೆಗಳು**

ಭೂಕಂಪನ ಒಳಕೇಂದ್ರದಿಂದ ಕಂಪನಗಳು ನಿರ್ಮಿತಗೊಂಡು ಅಲ್ಲಿಂದ ವೃತ್ತಾಕಾರದಲ್ಲಿ ಅಲೆಗಳ ರೀತಿ ಭೂ ಹೊರಕೇಂದ್ರದ ಕಡೆ ಹರಡುತ್ತವೆ. ಭೂಕಂಪನ ಅಲೆಗಳಲ್ಲಿ ಮೂರು ವಿಧಗಳಿವೆ. ಅವುಗಳೆಂದರೆ

**1. ಪ್ರಾಥಮಿಕ ಅಥವಾ ತಳ್ಳುವ ಅಲೆಗಳು :** ಇವುಗಳು ಭೂಕಂಪನದ ಒಳಕೇಂದ್ರದಿಂದ ಮೊದಲು ಹೊರಕೇಂದ್ರವನ್ನು ತಲುಪುತ್ತವೆ. ಇವುಗಳು ನೀಳ ಅಲೆಗಳಾಗಿದ್ದು ಅತ್ಯಂತ ವೇಗವಾಗಿ ಚಲಿಸುತ್ತವೆ. ಇವುಗಳು ಘನ, ದ್ರವ ಮತ್ತು ಅನಿಲಗಳ ಮೂಲಕ ಚಲಿಸುತ್ತವೆ.

**2. ದ್ವಿತೀಯ ಅಲೆಗಳು :** ಇವುಗಳನ್ನು 'ಅಡ್ಡ ಅಲೆ' (Transverse) ಗಳೆಂದು ಸಹ ಕರೆಯುವರು. ಇವು ದ್ರವ ವಸ್ತುಗಳ ಮೂಲಕ ಚಲಿಸಲಾರವು. ಪ್ರಾಥಮಿಕ ಅಲೆಗಳ ನಂತರ ಇವು ಹೊರ ಕೇಂದ್ರವನ್ನು ತಲಪುತ್ತವೆ.

**3. ಮೇಲ್ಮೈ ಅಲೆಗಳು :** ಇವುಗಳನ್ನು ಉದ್ದ ಅಲೆಗಳೆಂದೂ ಸಹ ಕರೆಯುವರು. ಇವು ಅತ್ಯಂತ ನಿಧಾನ ಗತಿಯ ಭೂಕಂಪನ ಅಲೆಗಳಾಗಿವೆ. ಆದರೆ ಇವು ಅತ್ಯಂತ ಹಾನಿಕಾರಕ ಅಲೆಗಳಾಗಿವೆ.

ಭೂಕಂಪನದ ತೀವ್ರತೆ ಮತ್ತು ಪ್ರಮಾಣವನ್ನು ರಿಕ್ಟರ್ ಮಾಪನದಿಂದ ಅಳತೆ ಮಾಡಲಾಗುವುದು.

ಭೂಕಂಪಗಳು ಅತ್ಯಂತ ವಿನಾಶಕಾರಿಯಾದವು. ಇವುಗಳಿಂದ ಅಪಾರ ಜೀವಹಾನಿ ಹಾಗೂ ಆಸ್ತಿ-ಪಾಸ್ತಿ ನಷ್ಟವುಂಟಾಗುವುದು. ಇವುಗಳಿಂದ ಉಂಟಾಗುವ ಭೂಕುಸಿತ, ಕ್ಷಿಪ್ರ ಪ್ರವಾಹ ಮೊದಲಾದವುಗಳಿಂದ ಅಪಾರ ಜನರು ಸಾವಿಗೀಡಾಗುವರು. ಕಟ್ಟಡ, ಸೇತುವೆ, ರಸ್ತೆ ಹಾಗೂ ರೈಲು ಮಾರ್ಗಗಳು ಹಾನಿಗೀಡಾಗುತ್ತವೆ.

**ಸುನಾಮಿ:** ಸಮುದ್ರ ಮತ್ತು ಸಾಗರ ತಳದಲ್ಲಿ ಉಂಟಾಗುವ ಭೂಕಂಪನಗಳಿಂದ ಸಾಗರಗಳಲ್ಲಿ ಅತಿ ಎತ್ತರವಾದ ಭೀಕರ ಅಲೆಗಳು ತೀರಕ್ಕೆ ಅಪ್ಪಳಿಸುತ್ತವೆ. ಇವುಗಳನ್ನು ಸುನಾಮಿ ಎಂದು ಕರೆಯುವರು. ಇದು ಜಪಾನ್ ಭಾಷೆಯ ಪದವಾಗಿದ್ದು, ಇದರ ಅರ್ಥ ತೀರಕ್ಕೆ ಅಪ್ಪಳಿಸುವ ಎತ್ತರದ ಅಲೆಗಳು (ಬಂದರು ಅಲೆಗಳು).

**ನಿಮಗೆ ತಿಳಿದಿರಲಿ.**

1. 2004 ಡಿಸೆಂಬರ್ 26 ರಂದು ಸುನಾಮಿ ಅಲೆಗಳು ಭಾರತ, ಇಂಡೋನೇಷಿಯಾ, ಥೈಲ್ಯಾಂಡ್, ಶ್ರೀಲಂಕಾ ದೇಶಗಳ ತೀರಕ್ಕೆ ಅಪ್ಪಳಿಸಿ ಅಪಾರ ಹಾನಿಯನುಂಟುಮಾಡಿದವು.
2. 2011 ರ ಮಾರ್ಚಿ 11 ರಂದು ಸುನಾಮಿ ಅಲೆಗಳು ಜಪಾನಿನ ಫುಕುಶೀಮ, ಸೆಂಡೈ, ಮೀಯಾಗಿ ಪ್ರದೇಶಗಳಿಗೆ ಅಪ್ಪಳಿಸಿ ಅಪಾರ ಹಾನಿಯನ್ನುಂಟು ಮಾಡಿವೆ.
3. ಭಾರತದಲ್ಲಿರುವ ಕೆಲವು ಭೂಕಂಪನ ದಾಖಲೆಯ ಕೇಂದ್ರಗಳೆಂದರೆ : ಗೌರಿಬಿದನೂರು, ಕೊಡೈಕೆನಾಲ್, ಪುಣೆ, ಹೈದರಾಬಾದ್ ಮತ್ತು ಡೆಹರಾಡೂನ್.

**ಭೂಕಂಪನದ ಹಂಚಿಕೆ : ಭೂಕಂಪನದ ಹಂಚಿಕೆಯು ಈ ಕೆಳಕಂಡಂತೆ ಇದೆ. ಅವುಗಳೆಂದರೆ:**

- ಪೆಸೆಫಿಕ್ ಸಾಗರದ ಸುತ್ತಲಿನ ತೀರ ಪ್ರದೇಶ. ಇದು ನ್ಯೂಜಿಲ್ಯಾಂಡ್, ಫಿಲಿಫೈನ್ಸ್, ಯು.ಎಸ್.ಎ, ಜಪಾನ್ ಪೆರು, ಮೊದಲಾದವುಗಳನ್ನು ಒಳಗೊಂಡಿದೆ.
- ಮೆಡಿಟರೇನಿಯನ್ ಸಮುದ್ರದ ಸುತ್ತಲಿನ ತೀರ ಪ್ರದೇಶ.
- ಭಾರತದ ಹಿಮಾಲಯ ಪರ್ವತ ಪ್ರದೇಶ. (ಸಿವಾಲಿಕ್ ಪ್ರದೇಶ).




**ಭೂಕಂಪಗಳು ಮತ್ತು ಜ್ವಾಲಾಮುಖಿ ಪ್ರದೇಶಗಳು**



## ಬಾಹ್ಯಶಕ್ತಿಗಳು (Exogenic forces)

ಬಾಹ್ಯಶಕ್ತಿಗಳು ಭೂಮಿಯ ಮೇಲಿನ ಪ್ರಾಕೃತಿಕ ಶಕ್ತಿಗಳಾಗಿವೆ. ಇವು ತಮ್ಮ ಕಾರ್ಯದಿಂದ ಭೂಮೇಲ್ಮೈನ ಸ್ವರೂಪಗಳನ್ನು ಮಾರ್ಪಡಿಸುತ್ತವೆ. ಪ್ರಮುಖ ಬಾಹ್ಯ ಶಕ್ತಿಗಳೆಂದರೆ ಉಷ್ಣಾಂಶ, ಮಾರುತಗಳು, ಮಳೆ, ಹಿಮವೃಷ್ಠಿ, ನದಿ, ಹಿಮನದಿ, ಗಾಳಿ.

**ಶಿಥಿಲೀಕರಣ :** ಶಿಲೆಗಳು ಒಡೆದು ಚೂರಾಗುವ ಮತ್ತು ಕ್ಷೀಣಿಸುವ ಸ್ವಾಭಾವಿಕ ಪ್ರಕ್ರಿಯೆಯೇ ಶಿಥಿಲೀಕರಣ. ಇದು ವಾಯುಮಂಡಲದಲ್ಲಿನ ಉಷ್ಣಾಂಶ, ಮಳೆ, ಗಾಳಿ ಮುಂತಾದವುಗಳಿಂದ ನಡೆಯುತ್ತದೆ. ಶಿಥಿಲೀಕರಣದ ವಿಧಗಳೆಂದರೆ:

**1. ಭೌತಿಕ ಶಿಥಿಲೀಕರಣ:** ಶಿಲೆಗಳು ಯಾವುದೇ ರಾಸಾಯನಿಕ ಬದಲಾವಣೆಯಾಗದೇ ಒಡೆದು ಚೂರಾಗುವ ಮತ್ತು ಕ್ಷೀಣಿಸುವ ಕ್ರಿಯೆಯನ್ನು ಭೌತಿಕ ಶಿಥಿಲೀಕರಣವೆನ್ನುವರು. ಪ್ರಮುಖ ಭೌತಿಕ ಶಿಥಿಲೀಕರಣದ ಕ್ರಿಯೆಗಳೆಂದರೆ ಕಣವಿಭಜನೆ, ಶಿಲಾವಿಭಜನೆ, ಪದರುವಿಭಜನೆ. ಭೌತಿಕ ಶಿಥಿಲೀಕರಣದ ಕರ್ತೃಗಳಾವುವೆಂದರೆ ಉಷ್ಣಾಂಶ, ಮಳೆ, ಹಿಮ ಇತ್ಯಾದಿ.

**2. ರಾಸಾಯನಿಕ ಶಿಥಿಲೀಕರಣ:** ಈ ವಿಧದ ಶಿಥಿಲೀಕರಣದಲ್ಲಿ ಮಳೆಯ ನೀರು ವಾಯುಮಂಡಲದ ಅನಿಲಗಳೊಡನೆ ವಿಲೀನಗೊಂಡು ಶಿಲೆಗಳನ್ನು ಒಡೆಯುವುದು ಹಾಗೂ ವಿಘಟಿಸುವುದು. ಈ ಶಿಥಿಲೀಕರಣದ ಪರಿಣಾಮವೆಂದರೆ ಶಿಲೆಗಳಲ್ಲಿರುವ ಖನಿಜಗಳ ಸಂಯೋಜನೆಯಲ್ಲಿ ಬದಲಾವಣೆಯಾಗುತ್ತವೆ. ರಾಸಾಯನಿಕ ಶಿಥಿಲೀಕರಣದಲ್ಲಿ ನಾಲ್ಕು ವಿಧಗಳಿವೆ.

- **ಆಮ್ಲಜನಕ ಸಂಯೋಜನೆ (Oxidation):** ಆಮ್ಲಜನಕದಿಂದ ಕೂಡಿರುವ ಮಳೆಯ ನೀರು ಕೆಲವು ಖನಿಜಗಳ ಮೇಲೆ ಪ್ರಭಾವ ಬೀರುತ್ತವೆ. ಇದರಿಂದ ಶಿಲೆಗಳು ನಶಿಸುತ್ತವೆ. ವಿಶೇಷವಾಗಿ ಕಬ್ಬಿಣವು ಕಬ್ಬಿಣದ ಆಕ್ಸೈಡ್ ಆಗುತ್ತದೆ.

- **ಇಂಗಾಲದ ಸಂಯೋಜನೆ (Carbonation) :** ಇಂಗಾಲಯುಕ್ತ ಮಳೆನೀರು ಸುಣ್ಣಕಲ್ಲುಗಳ ಮೇಲೆ ಬಿದ್ದಾಗ, ಶಿಲೆಗಳಲ್ಲಿರುವ ಕ್ಯಾಲ್ಸಿಯಂ ಕಾರ್ಬೋನೇಟ್‌ಗಳನ್ನು ಮಳೆಯ ನೀರಿನಲ್ಲಿರುವ ಇಂಗಾಲದ ಡೈ–ಆಕ್ಸೈಡ್ ಹೀರಿಕೊಳ್ಳುವುದರಿಂದ ಕ್ಯಾಲ್ಸಿಯಂ ಬೈಕಾರ್ಬೋನೇಟ್ ಆಗಿ ಬದಲಾಗುತ್ತದೆ.

- **ಜಲಸಂಯೋಜನೆ (Hydration) :** ಈ ಕ್ರಿಯೆಯಲ್ಲಿ ಕೆಲವು ಬಗೆಯ ಖನಿಜಗಳಲ್ಲಿನ ಕಣಗಳು ನೀರನ್ನು ಹೀರುವುದರಿಂದ ಉಬ್ಬಿಕೊಂಡು ಪುಡಿರೂಪದಲ್ಲಿ ಕ್ರಮೇಣ ನಶಿಸುತ್ತವೆ. ಫೆಲ್ಸಫರ್ ಇದು ಹರಳುಗಳಿಂದುಂಟಾದ ಪ್ರಮುಖ ಶಿಲೆಯಾಗಿದೆ.

- **ದ್ರಾವಣೀಕರಣ (Solution) :** ಮಳೆಯ ನೀರು ಕೆಲವು ಶಿಲೆಗಳನ್ನು ಕರಗಿಸಿ ದ್ರಾವಣೀಕರಿಸುವುದು. ಉದಾ: ಜಿಪ್ಸಂ, ಉಪ್ಪು, ಫಾಸ್ಫೇಟ್ ಇತ್ಯಾದಿ.

**3. ಜೈವಿಕ ಶಿಥಿಲೀಕರಣ (Biological Weathering):** ಸಸ್ಯವರ್ಗ, ಪ್ರಾಣಿವರ್ಗ ಮತ್ತು ಮಾನವನಿಂದ ಶಿಲೆಗಳು ಒಡೆದು ಚೂರಾಗುವುದನ್ನು ಜೈವಿಕ ಶಿಥಿಲೀಕರಣ ಎನ್ನುವರು. ಇದರಲ್ಲಿ ಭೌತಿಕ ಹಾಗೂ ರಾಸಾಯನಿಕ ಕ್ರಿಯೆಗಳೆರಡರಿಂದಲೂ ಶಿಥಿಲೀಕರಣವಾಗುತ್ತವೆ.

**ಸಸ್ಯವರ್ಗ** – ಸಸ್ಯಗಳ ಬೇರುಗಳು ಬೆಳೆದು ದಪ್ಪವಾಗುವುದರಿಂದ ಶಿಲೆಗಳು ಒಡೆದು ಚೂರಾಗುತ್ತವೆ.
**ಪ್ರಾಣಿವರ್ಗ** – ಬಿಲಗಳಲ್ಲಿ ವಾಸಿಸುವ ಪ್ರಾಣಿಗಳು, ಎರೆಹುಳು, ಮೊಲಗಳು, ಇಲಿಗಳು ಇತ್ಯಾದಿ.

**ಮಾನವಜೀವಿ** – ಗಣಿಗಾರಿಕೆ, ಕಲ್ಲುಗಣಿ, ಕಟ್ಟಡನಿರ್ಮಾಣ ಕೆಲಸ ಇತ್ಯಾದಿ.

## ಭೂ ನಗ್ನೀಕರಣ (Denudation)

**ಭೂ ನಗ್ನೀಕರಣದ ಕಾರಣ ಕರ್ತೃಗಳು:** ವಿವಿಧ ರೀತಿಯ ನೈಸರ್ಗಿಕ ಶಕ್ತಿಗಳು ಭೂಮಿಯ ಮೇಲ್ಭಾಗವನ್ನು ಸವೆಸುವ ಕಾರ್ಯವನ್ನು ಭೂ ನಗ್ನೀಕರಣ ಎನ್ನುವರು. ನಗ್ನೀಕರಣದ ಕಾರಣ ಕರ್ತೃಗಳೆಂದರೆ; ನದಿ, ಹಿಮನದಿ, ಅಂತರ್ಜಲ, ಮಾರುತ ಹಾಗೂ ಸಮುದ್ರದ ಅಲೆಗಳು. ಇವು ಸವೆತ, ಸಾಗಾಣಿಕೆ ಮತ್ತು ಸಂಚಯನ ಎಂಬ ಮೂರು ಕಾರ್ಯಗಳನ್ನು ನಡೆಸಿ ಭೂಮಿಯ ಮೇಲ್ಭಾಗದಲ್ಲಿ ವಿಶಿಷ್ಟವಾದ ಭೂಸ್ವರೂಪಗಳನ್ನು ನಿರ್ಮಿಸುತ್ತವೆ.

**ನದಿ :** ಉಗಮದಿಂದ ಸಮುದ್ರದವರೆಗೆ ತನ್ನ ಕಣಿವೆಯಲ್ಲಿ ಹರಿಯುವ ಶುದ್ಧನೀರಿನ ಜಲಧಾರೆಯೇ ನದಿ. ಹರಿಯುವ ನದಿಯ ನೀರು ಭೂಮೇಲ್ಮೈ ವಿಸ್ತಾರವಾದ ಭಾಗದಲ್ಲಿ ನಗ್ನೀಕರಣ ಕಾರ್ಯವನ್ನು ನಿರ್ವಹಿಸುವ ಮುಖ್ಯ ಕರ್ತೃ. ನದಿಗಳು ಸಾಮಾನ್ಯವಾಗಿ ಚಿಲುಮೆ, ಹಿಮನದಿ ಅಥವಾ ಮಳೆನೀರಿನ ಮೂಲದಿಂದ ಉಗಮವಾಗುತ್ತದೆ. ನದಿ ಹರಿಯುವ ಮಾರ್ಗವೇ 'ನದಿಯ ಪಾತ್ರ'. ನದಿಯು ಆರಂಭಗೊಳ್ಳುವ

ಸ್ಥಾನವನ್ನು 'ನದಿಯಮೂಲ' ಎಂದೂ, ನದಿ ಅಂತ್ಯಗೊಂಡು ಸಮುದ್ರ ಸೇರುವ ಭಾಗವನ್ನು 'ನದಿಮುಖ' ಎಂದೂ ಕರೆಯುವರು. ಒಂದು ಸಣ್ಣ ನದಿಯು ತನ್ನ ಕಣಿವೆಯಲ್ಲಿ ಮತ್ತೊಂದು ಪ್ರಧಾನ ನದಿಯನ್ನು ಸೇರಿದಲ್ಲಿ ಅದನ್ನು 'ಉಪನದಿ' ಎಂದು ಕರೆಯುವರು. ಒಂದು ನದಿ ಮತ್ತೊಂದು ನದಿಯನ್ನು ಸೇರುವ ಸ್ಥಳವನ್ನು 'ಸಂಗಮ' ಎನ್ನುವರು.

**ನದಿಯ ಪಾತ್ರ** : ನದಿಯ ಪಾತ್ರವನ್ನು ಮೇಲ್ಕಣಿವೆ ಪಾತ್ರ, ಮದ್ಯಕಣಿವೆ ಪಾತ್ರ ಮತ್ತು ಕೆಳಕಣಿವೆ ಪಾತ್ರ ಎಂದು ಮೂರುಹಂತಗಳಾಗಿ ವಿಂಗಡಿಸಬಹುದು. ಈ ಹಂತಗಳ ನದಿಯ ನೀರಿನ ಪ್ರಮಾಣ, ನೀರಿನ ವೇಗ ಮತ್ತು ನದಿ ಪಾತ್ರದ ಭೂ ಸ್ವರೂಪ ಬೇರೆ ಬೇರೆ ರೀತಿಯಲ್ಲಿರುವುದು. ಪ್ರತಿ ಹಂತದಲ್ಲಿಯೂ ನದಿಯ ಕಾರ್ಯ ಹಾಗೂ ಅದರಿಂದ ಉಂಟಾಗುವ ಭೂ ಸ್ವರೂಪಗಳು ವಿಶಿಷ್ಟವಾಗಿವೆ.



**ನದಿಯ ಪಾತ್ರದ ವಿವಿಧ ಹಂತಗಳು ಮತ್ತು ಅವುಗಳಿಗೆ ಸಂಬಂಧಿಸಿದ ಭೂಸ್ವರೂಪಗಳು**

**ಮೇಲ್ಕಣಿವೆ ಪಾತ್ರ:** ನದಿಯು ಈ ಹಂತದಲ್ಲಿ ಎತ್ತರ ಭಾಗದಲ್ಲಿದ್ದು ಮುಖ್ಯವಾಗಿ ಸವೆತ ಕಾರ್ಯವನ್ನು ನಿರ್ವಹಿಸುವುದು. ಅದರಲ್ಲಿಯೂ ತಳಸವೆತ ಹೆಚ್ಚು. ಅಂದರೆ ನದಿಯು ತನ್ನ ಕಣಿವೆಯನ್ನು ಆಳವಾಗಿ ಕೊರೆಯುವುದು. ಇದರಿಂದ ಆಳವಾದ ಕಂದರಗಳು, ಮಹಾಕಂದರ 'V' ಆಕಾರದ ಕಣವೆಗಳು, ಜಲಪಾತಗಳು, (ಏಂಜಲ್ ಜಲಪಾತ, ನಯಾಗರ ಜಲಪಾತ, ಜೋಗ್ ಜಲಪಾತ ಇತ್ಯಾದಿ) ಮತ್ತು ಕುಂಭಕಳಿಗಳು ಮೊದಲಾದ ಭೂಸ್ವರೂಪಗಳು ನಿರ್ಮಾಣವಾಗುತ್ತವೆ.

**ಮಧ್ಯಕಣಿವೆ ಪಾತ್ರ:** ಈ ಹಂತದಲ್ಲಿ ನದಿಯು ಮೈದಾನವನ್ನು ಪ್ರವೇಶಿಸುವುದು. ಇಲ್ಲಿ ನದಿಯ ಪಾತ್ರದ ಇಳಿಜಾರು ಕಡಿಮೆಯಾಗುವುದರಿಂದ ನೀರಿನ ವೇಗವೂ ಸಹ ಕಡಿಮೆಯಾಗುವುದು. ಪ್ರಧಾನ ನದಿಗೆ ಅನೇಕ ಉಪ ನದಿಗಳು ಸೇರುವುದರಿಂದ ನದಿಯ ನೀರಿನ ಪ್ರಮಾಣ ಹೆಚ್ಚುವುದು. ಈ ಹಂತದಲ್ಲಿ ನದಿಯು ಮುಖ್ಯವಾಗಿ ಸಾಗಾಣಿಕೆ ಕಾರ್ಯವನ್ನು ನಿರ್ವಹಿಸುವುದು. ಜೊತೆಗೆ ಅಲ್ಲಲ್ಲಿ ಇದರ ಸಂಚಯನ ಕಾರ್ಯವನ್ನೂ ಕಾಣಬಹುದು. ಇದರಿಂದ ಹಲವು ವಿಶಿಷ್ಟ ಭೂ ಸ್ವರೂಪಗಳು ನಿರ್ಮಿತವಾಗುತ್ತವೆ. ಅವುಗಳೆಂದರೆ ಮೆಕ್ಕಲು ಬೀಸಣಿಗೆ, ನದಿಯ ತಿರುವುಗಳು ಮೊದಲಾದವು.

**ಕೆಳಕಣಿವೆ ಪಾತ್ರ:** ಈ ಹಂತದಲ್ಲಿ ನದಿಯು ಅತ್ಯಂತ ನಿಧಾನವಾಗಿ ಹರಿಯುವುದು. ಇದಕ್ಕೆ ಕಾರಣ ಇಳಿಜಾರು ಅತ್ಯಂತ ಕಡಿಮೆಯಾಗುವುದು ಹಾಗೂ ನದಿಯ ಪಾತ್ರ ದೊಡ್ಡದಾಗುವುದು. ಈ ಹಂತದಲ್ಲಿ ನದಿಯು ಮುಖ್ಯವಾಗಿ ಸಂಚಯನ ಕಾರ್ಯವನ್ನು ನಿರ್ವಹಿಸುವುದು. ಕೆಳಕಣಿವೆ ಪಾತ್ರದಲ್ಲಿ ಪ್ರವಾಹ ಮೈದಾನ, ಸ್ವಾಭಾವಿಕ ದಡಕಟ್ಟೆ, ಶೃಂಗ ಸರೋವರ, ಸುಂದರಬನ್ ಮುಖಜಭೂಮಿ, ನೈಲ್‌ನದಿ ಮುಖಜಭೂಮಿ ಮೊದಲಾದ ಭೂ ಸ್ವರೂಪಗಳು ನಿರ್ಮಿತವಾಗುತ್ತವೆ.




**ನದಿ ಸಂಚಯನದಿಂದಾದ ಪ್ರಮುಖ ಭೂಸ್ವರೂಪಗಳು**

"ನದಿಯ ಕಾರ್ಯವನ್ನು (ನದಿಯ ಆವರ್ತನ) fluvial cycle ಎಂದು ಕರೆಯುವರು."

**ನಿಮಗೆ ತಿಳಿದಿರಲಿ**

**ಅಳಿವೆ**(Estuary): ನದಿಯು ಸಮುದ್ರವನ್ನು ಸೇರುವ ಭಾಗದಲ್ಲಿ ಅಗಲವಾಗಿ ಕಂಡುಬರುವ ಉಬ್ಬರವಿಳಿತ ಮುಖ ಭಾಗ.

**ಮುಖಜ ಭೂಮಿ :** ನದಿಯು ಸಮುದ್ರ ಸೇರುವ ಅಂತಿಮ ಭಾಗದಲ್ಲಿ ಸಂಚಯದಿಂದ ನಿರ್ಮಿತವಾಗಿರುವ ಮೈದಾನಗಳು.

**ಹಿಮನದಿ:** ಪರ್ವತದ ಅತಿ ಎತ್ತರ ಭಾಗಗಳಲ್ಲಿ ಮತ್ತು ದ್ರುವ ಪ್ರದೇಶಗಳಲ್ಲಿ ಮಂಜುಗಡ್ಡೆಯ ಆಗಾಧವಾದ ಹಿಮರಾಶಿ ಕಂಡುಬರುತ್ತದೆ. ಹಿಮರಾಶಿಯು ಅದರ ಭಾರ ಹಾಗೂ ಗುರುತ್ವಾಕರ್ಷಣ ಬಲದಿಂದ ಇಳಿಜಾರಿನವರೆಗೆ ಜಾರುವುದನ್ನು ಹಿಮನದಿ ಎನ್ನುವರು. ಹಿಮರಾಶಿಯ ಕೆಳಭಾಗ ಹೆಚ್ಚು ಒತ್ತಡದಿಂದ ಕರಗಿ ಇಳಿಜಾರನ್ನು ಅನುಸರಿಸಿ ಚಲಿಸುವುದು.

**ಹಿಮನದಿಯ ವಿಧಗಳು :–** ಹಿಮನದಿಗಳಲ್ಲಿ ಎರಡು ಮುಖ್ಯ ವಿಧಗಳಿವೆ. ಅವುಗಳೆಂದರೆ ಖಂಡಾಂತರ ಹಿಮನದಿ ಮತ್ತು ಪರ್ವತ ಹಿಮನದಿ

**ಖಂಡಾಂತರ ಹಿಮನದಿ :** ದ್ರುವಪ್ರದೇಶಗಳಲ್ಲಿರುವ ವಿಸ್ತಾರವಾದ ಮಂಜುಗಡ್ಡೆಯ ಹಾಳೆಯನ್ನು ಖಂಡಾಂತರ ಹಿಮನದಿ ಎನ್ನುವರು. ಉದಾ : ಗ್ರೀನ್‌ಲ್ಯಾಂಡ್ ಮತ್ತು ಅಂಟಾರ್ಕ್ಟಿಕಾ

**ಪರ್ವತ ಅಥವಾ ಆಲ್ಪೈನ್ ಅಥವಾ ಕಣಿವೆ ಹಿಮನದಿಗಳು :** ಎತ್ತರದ ಪರ್ವತ ಪ್ರದೇಶಗಳಲ್ಲಿರುವ ಹಿಮನದಿಗಳನ್ನು ಪರ್ವತ ಹಿಮನದಿ ಎನ್ನುವರು.

ಭೂ ನಗ್ನೀಕರಣದ ಕಾರಣಕರ್ತೃವಾಗಿ ಹಿಮನದಿಯು ಸವೆತ, ಸಾಗಾಣಿಕೆ ಮತ್ತು ಸಂಚಯನ ಕಾರ್ಯವನ್ನು ನಿರ್ವಹಿಸುತ್ತದೆ. ಹಿಮನದಿಯ ಸವೆತಕಾರ್ಯ ಬಹುತೇಕ ಪಾರ್ಶ್ವ ಕೊರೆತವಾಗಿರುವುದು. ಇದರಿಂದ ಹಲವು ಬಗೆಯ ವಿಶಿಷ್ಟವಾದ ಭೂ ಸ್ವರೂಪಗಳು ನಿರ್ಮಿತವಾಗುತ್ತವೆ. ಇವುಗಳೆಂದರೆ ಹಿಮಾಗಾರ, ಗಿರಿಶೃಂಗ, ಪರ್ವತಕಟಕ, ಶಿಲಾಸೋಪಾನ, **U** ಆಕಾರದ ಕಣಿವೆ, ತೂಗುಕಣಿವೆ ಮೊದಲಾದವು.

ಹಿಮನದಿಯು ಸಾಗಾಣಿಕೆ ಮತ್ತು ಸಂಚಯನ ಕಾರ್ಯಗಳನ್ನು ಜೊತೆ ಜೊತೆಯಲ್ಲಿಯೇ ನಿರ್ವಹಿಸುವುದು. ಸಂಚಯನ ಕಾರ್ಯದಿಂದ ನಿರ್ಮಿತವಾಗುವ ಮುಖ್ಯ ಸ್ವರೂಪಗಳೆಂದರೆ ಶಿಲಾನಿಚಯಗಳು, ಸರ್ಪಾಕಾರದ ದಿಣ್ಣೆಗಳು, ರೇವೆಮೈದಾನಗಳು, ತ್ರಿಕೋನಾಕೃತಿಯ ದಿಣ್ಣೆಗಳು ಹಾಗೂ ಹಿಮಜಲ ಪ್ರವಾಹ ಮೈದಾನಗಳು (out wash plains).




**ಹಿಮನದಿ**



'ಶಿಲಾನಿಚಯ'ಗಳು ಹಿಮನದಿ ನಗ್ನೀಕರಣ ಪ್ರದೇಶದಲ್ಲಿ ಕಂಡುಬರುವ ಅತಿ ಮುಖ್ಯ ಭೂ ಸ್ವರೂಪಗಳು. ಇವು ಹಿಮನದಿಯಿಂದ ಸಂಚಯಿತವಾಗಿರುವ ವಿವಿಧ ಆಕಾರ, ಗಾತ್ರದ ಅಗಾಧ ಪ್ರಮಾಣದ ಶಿಲಾವಸ್ತುಗಳು. ಶಿಲಾನಿಚಯಗಳನ್ನು ಅವುಗಳು ಸಂಚಯಿತಗೊಂಡಿರುವ ಸ್ಥಳದ ಆಧಾರದಿಂದ ನಾಲ್ಕು ವಿಧಗಳಾಗಿ ವಿಂಗಡಿಸಬಹುದು. ಅವುಗಳೆಂದರೆ:

**ಪಾರ್ಶ್ವ ಶಿಲಾನಿಚಯ:** ಹಿಮನದಿಯ ಕಣಿವೆಯುದ್ದಕ್ಕೂ ಎರಡೂ ದಡಗಳಲ್ಲಿ ಶಿಲಾವಸ್ತುಗಳು ಸಂಚಯವಾಗುವುದನ್ನು ಪಾರ್ಶ್ವ ಶಿಲಾನಿಚಯ ಎನ್ನುವರು.

**ಮಧ್ಯ ಶಿಲಾನಿಚಯ:** ಎರಡು ಹಿಮನದಿಗಳು ಸಂಧಿಸಿದಾಗ ಅವುಗಳ ಪಾರ್ಶ್ವ ಶಿಲಾನಿಚಯಗಳು ಪರಸ್ಪರ ಒಗ್ಗೂಡಿದ್ದು ಇವುಗಳನ್ನು ಮಧ್ಯಶಿಲಾನಿಚಯವೆಂದು ಕರೆಯುವರು.

**ತಳದ ಶಿಲಾನಿಚಯ:** ಹಿಮನದಿಯ ಕಣಿವೆಯ ತಳಭಾಗದಲ್ಲಿ ಶಿಲಾವಸ್ತುಗಳು ಸಂಚಯವಾಗುವುದನ್ನು ತಳದ ಶಿಲಾನಿಚಯವೆನ್ನುವರು.

**ಅಂತ್ಯ ಶಿಲಾನಿಚಯ :** ಇವು ಹಿಮನದಿಯ ಅಂತ್ಯಭಾಗದಲ್ಲಿ ಸಂಚಯಗೊಳ್ಳುತ್ತವೆ.

ಹಿಮನದಿ ಕಾರ್ಯವನ್ನು ಹಿಮನದಿ ಆವರ್ತನ (Glacial Cycle) ವೆನ್ನುವರು.

## ಅಂತರ್ಜಲ

ಭೂಮಿಯ ಮೇಲೆ ಬೀಳುವ ಮಳೆಯ ನೀರಿನ ಸ್ವಲ್ಪ ಭಾಗವು ಇಂಗಿ ಒಳಸೇರುವುದು. ಹೀಗೆ ಒಳಪದರಗಳಲ್ಲಿ ಸಂಗ್ರಹವಾಗಿರುವ ನೀರನ್ನು 'ಅಂತರ್ಜಲವೆಂದು ಕರೆಯುವರು. ಅಂತರ್ಜಲವು ಸುಲಭವಾಗಿ ಪ್ರವಹಿಸಬಹುದಾದ ಶಿಲಾಪದರುಗಳನ್ನು 'ಪ್ರವೇಶ್ಯ ಶಿಲೆ' ಅಥವಾ 'ವ್ಯಾಪ್ಯಶಿಲೆ'ಗಳೆನ್ನುವರು. ಅಂತರ್ಜಲವು ಪ್ರವೇಶಿಸಲಾರದ ಶಿಲಾಪದರಗಳನ್ನು 'ಅಪ್ರವೇಶ್ಯ' ಅಥವಾ 'ಅವ್ಯಾಪ್ಯ' ಶಿಲೆಗಳೆಂದು ಕರೆಯುವರು. ಕೆಲವು ಪ್ರವೇಶ್ಯ ಶಿಲೆಗಳು ಅಪಾರ ಪ್ರಮಾಣದ ಅಂತರ್ಜಲವನ್ನು ಹೊಂದಿರುತ್ತವೆ. ಇವುಗಳನ್ನು 'ಜಲಜಶಿಲೆ' ಎನ್ನುವರು. ಪ್ರವೇಶ್ಯ ಶಿಲೆಗಳಲ್ಲಿ ಭರ್ತಿಯಾದ ನೀರು ಕೆಲವು ಸನ್ನಿವೇಶಗಳಲ್ಲಿ ಸ್ವಾಭಾವಿಕವಾಗಿ ಹೊರಬೀಳುವುದು. ಹೀಗೆ ಅಂತರ್ಜಲವು ಸ್ವಾಭಾವಿಕವಾಗಿ ಹೊರಬೀಳುವುದನ್ನು 'ಚಿಲುಮೆ' (Spring) ಗಳೆಂದು ಕರೆಯುವರು.

**ಚಿಲುಮೆಗಳ ವಿಧಗಳು:**

- ನಿರಂತರ ಚಿಲುಮೆಗಳು: ಈ ಚಿಲುಮೆಗಳಲ್ಲಿ ವರ್ಷದ ಎಲ್ಲಾ ಕಾಲದಲ್ಲಿಯೂ ನಿರಂತರವಾಗಿ ನೀರು ಹೊರಬೀಳುವುದು.
- ನಿಯತಕಾಲಿಕ ಚಿಲುಮೆಗಳು: ಈ ಚಿಲುಮೆಗಳಲ್ಲಿ ವರ್ಷದ ಕೆಲವುಕಾಲ (ಮಳೆಗಾಲ) ಮಾತ್ರ ಅಂತರ್ಜಲ ಹೊರಬೀಳುವುದು.
- ಬಿಸಿನೀರಿನ ಚಿಲುಮೆಗಳು: ಈ ಚಿಲುಮೆಗಳಲ್ಲಿ ಬಿಸಿನೀರು ಹೊರಬೀಳುವುದು. ಇವುಗಳು ಸಾಮಾನ್ಯವಾಗಿ ಜ್ವಾಲಾಮುಖಿ ಪ್ರದೇಶದಲ್ಲಿ ಕಂಡು ಬರುತ್ತದೆ.
- ಬಿಸಿನೀರಿನ ಬುಗ್ಗೆಗಳು: ಈ ಚಿಲುಮೆಗಳಲ್ಲಿ ಬಿಸಿನೀರು ನೀರಾವಿಯೊಡನೆ ಆಗಿಂದಾಗ್ಗೆ ಸಾಕಷ್ಟು ಎತ್ತರದವರೆಗೆ ಚಿಮ್ಮುವುದು. ಉದಾ: ಯು.ಎಸ್.ಎ.ಯಲ್ಲಿರುವ 'ಓಲ್ಡ್ ಫೇತ್ ಫುಲ್ ಗೇಸರ್'.
- ಆರ್ಟಿಸಿಯನ್ ಬಾವಿ: ಕೆಲವು ಕಡೆಗಳಲ್ಲಿ ಶಿಲಾಪದರುಗಳು ಬೋಗುಣಿಯಾಕಾರದಲ್ಲಿ ಒಂದು ಪ್ರವೇಶ್ಯ ಶಿಲಾ ಪದರಿನ ಮೇಲೆ ಹಾಗೂ ಕೆಳಗೆ ಅಪ್ರವೇಶ್ಯ ಶಿಲಾಪದರುಗಳಿರುತ್ತವೆ. ಇದರಿಂದ ಶಿಲಾಪದರವನ್ನು ಸೇರುವ ನೀರು ಸ್ವಾಭಾವಿಕವಾಗಿ ಹೊರಬೀಳಲಾರದು. ಇಂತಹ ಕಡೆ ಪ್ರವೇಶ್ಯ ಶಿಲೆಯವರೆಗೆ ರಂಧ್ರವನ್ನು ಕೊರೆದಾಗ ನೀರು ಸ್ವಾಭಾವಿಕವಾಗಿ ಚಿಮ್ಮುವುದು. ಇವುಗಳನ್ನು ಆರ್ಟಿಸಿಯನ್ ಬಾವಿಗಳೆಂದು ಕರೆಯುವರು. ಇವುಗಳು ಆಸ್ಟ್ರೇಲಿಯಾದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.



ಆರ್ಟೆಸಿಯನ್ ಬಾವಿಗಳು

ಅಂತರ್ಜಲವು ಸಹ ಸವೆತ, ಸಾಗಾಣಿಕೆ ಮತ್ತು ಸಂಚಯನ ಕಾರ್ಯವನ್ನು ನಿರ್ವಹಿಸುವುದು. ಸುಣ್ಣಕಲ್ಲಿನ ಪ್ರದೇಶದಲ್ಲಿ ಅಂತರ್ಜಲಕಾರ್ಯವು ಪ್ರಧಾನವಾಗಿರುವುದು. ಅಂತರ್ಜಲಕಾರ್ಯದಿಂದ ನಿರ್ಮಿತವಾಗುವ ಭೂ ಸ್ವರೂಪಗಳೆಂದರೆ ಲ್ಯಾಪೀಸ್, ನುಂಗುಬಿಲ, ಅಂತರ್ ಗುಹೆ, ಆರೋಹಿ ಮತ್ತು ಅವರೋಹಿಶಂಕುಗಳು, ಸುಣ್ಣಕಲ್ಲಿನ ಸ್ತಂಭಗಳು ಮೊದಲಾದವು.



ಅಂತರ್ಜಲ ಚಟುವಟಿಕೆ

**ನಿಮಗೆ ತಿಳಿದಿರಲಿ – ಸುಣ್ಣಕಲ್ಲಿನ ಗುಹೆಗಳು.**

1. ಆಕಳ ಗವಿ (ಉಳವಿ) ಗುಹೆಗಳು – ಕರ್ನಾಟಕದ ಉತ್ತರಕನ್ನಡ ಜಿಲ್ಲೆ
2. ಬೇಲಂ ಮತ್ತು ಬೊಹ್ರಾ ಗುಹೆಗಳು –ಆಂಧ್ರಪ್ರದೇಶ.

ಅಂತರ್ಜಲ ಕಾರ್ಯದಿಂದ ನಿರ್ಮಿತವಾಗಿರುವ ಭೂಸ್ವರೂಪಗಳನ್ನು ಕಾರ್ಸ್ಟ್‌ಟೋಪೋಗ್ರಫಿ ಎಂದು ಕರೆಯುವರು.

## ಮಾರುತಗಳು

ಮಾರುತಗಳ ಕಾರ್ಯವು ಶುಷ್ಕ ಅಥವಾ ಮರುಭೂಮಿ ಪ್ರದೇಶಗಳಲ್ಲಿ ಸಾಮಾನ್ಯವಾಗಿದೆ. ಮರುಭೂಮಿಗಳಲ್ಲಿ ಅಡೆತಡೆಯಿಲ್ಲದೆ ಅತ್ಯಂತ ವೇಗವಾಗಿ ಬೀಸುವ ಗಾಳಿಯು, ಭೂಮೇಲ್ಮೈಯನ್ನು ಸವೆಸಿ, ಸಾಗಿಸಿ, ಅನಂತರ ಅವುಗಳನ್ನು ಸಂಚಯಿಸಿ ವಿವಿಧ ಬಗೆಯ ಭೂ ಸ್ವರೂಪಗಳನ್ನು ನಿರ್ಮಿಸುತ್ತವೆ.

ಮಾರುತದ ಕಾರ್ಯದಿಂದ ನಿರ್ಮಿತವಾಗುವ ಮುಖ್ಯ ಭೂಸ್ವರೂಪಗಳೆಂದರೆ ನಾಯಿಕೊಡೆ (ಅಣಬೆ) ಯಾಕಾರದ ಶಿಲೆ, ಶಿಲಾಪೀಠ, ಶಿಲಾದ್ವೀಪ, ಮರುಳು ದಿಣ್ಣೆಗಳು, ನೀಳಮರಳು ದಿಣ್ಣೆ. ಅಡ್ಡಮರಳು ದಿಣ್ಣೆ ಅರ್ಧ ಚಂದ್ರಾಕೃತಿಯ ಮರುಳು ದಿಣ್ಣೆ ಮತ್ತು ಲೋಯಸ್ ಮೈದಾನ ಮೊದಲಾದವು.



**ಅರ್ಧ ಚಂದ್ರಾಕೃತಿಯ ಮರುಳುದಿಣ್ಣೆ**

ಅರ್ಧಚಂದ್ರಾಕೃತಿಯ ಮರುಳು ದಿಣ್ಣೆಗಳು ಮರುಭೂಮಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಭೂ ಸ್ವರೂಪಗಳು. ಮರುಭೂಮಿಗಳ ಅಂಚಿನಲ್ಲಿ ನುಣುಪಾದ ಹಳದಿಬಣ್ಣದ ಮಣ್ಣಿನ ಕಣಗಳಿಂದ ಸಂಚಯನಗೊಂಡ ಪ್ರದೇಶವನ್ನು 'ಲೋಯಿಸ್' ಎಂದು ಕರೆಯುವರು. ಉದಾ: ಚೈನಾದ ಲೋಯಿಸ್ ಮೈದಾನ.

(ಗಾಳಿಯ ಕಾರ್ಯವನ್ನು ಗಾಳಿಯ ಕಾರ್ಯದ ಆವರ್ತನ-(ಇಯೋಲಿಯನ್ ಸೈಕಲ್)-ಎಂದು ಕರೆಯುವರು.)

**ಸಮುದ್ರದ ಅಲೆಗಳು:** ವಿವಿಧ ಭೂನಗ್ನೀಕರಣ ಕಾರಣ ಕೃರ್ತಗಳ ರೀತಿ ಸಮುದ್ರದ ಅಲೆಗಳು ಕೂಡ ಒಂದು ಪ್ರಮುಖ ಬಾಹ್ಯ ಶಕ್ತಿಯಾಗಿದೆ. ಸಮುದ್ರದ ಅಲೆಗಳು ಸಮುದ್ರದ ಮೇಲ್ಭಾಗದಲ್ಲಿ ಏರು ತಗ್ಗುಗಳನ್ನು ಹೊಂದಿರುವ ನೀರಿನ ಪ್ರಕಾರವಾಗಿದೆ. ಸಮುದ್ರದ ಅಲೆಗಳ ಕಾರ್ಯವು ಕರಾವಳಿಯಲ್ಲಿ ಪ್ರಮುಖವಾಗಿ ಕಂಡುಬರುವುದು. ಸಮುದ್ರದ ಅಲೆಗಳು ಉಂಟುಮಾಡುವ ಪ್ರಮುಖ ಭೂಸ್ವರೂಪಗಳೆಂದರೆ– ಶಿಲಾಪ್ರಪಾತ ಸಮುದ್ರಗುಹೆಗಳು, ಸಮುದ್ರಬಿಡಿಬಂಡೆ, ಸಮುದ್ರ ಕಮಾನು, ಭೂಶಿರ, ಮರಳುದಿಣ್ಣೆಗಳು, ಮರಳುದಂಡೆಗಳು, ಹಿನ್ನೀರಿನ ಸರೋವರಗಳು.



ಸಮುದ್ರದ ಅಲೆಗಳು

## ಅಭ್ಯಾಸಗಳು

**I ಬಿಟ್ಟಿರುವ ಸ್ಥಳಗಳನ್ನು ಭರ್ತಿಮಾಡಿರಿ.**

1 'ಭೂಖಂಡಗಳ' ಮೇಲ್ಪದರು ಎಂದು __________ ನ್ನು ಕರೆಯುತ್ತಾರೆ.

2 ತಗ್ಗಾದ, ವಿಸ್ತಾರವಾದ ಜ್ವಾಲಾಮುಖಿ ದ್ವಾರವನ್ನು __________ ಎನ್ನುವರು.

3 ಹೆಚ್ಚು ಹಾನಿಕಾರಕ ಭೂಕಂಪನ ಅಲೆಗಳೆಂದರೆ __________ .

4 ಆರೋಹಿ ಮತ್ತು ಅವರೋಹಿ ಶಂಕುಗಳು __________ ಗಳಲ್ಲಿ ಸಾಮಾನ್ಯವಾಗಿರುತ್ತವೆ.

5 ಮರಳು ದಂಡೆಗಳು __________ ಕಾರ್ಯದಿಂದ ನಿರ್ಮಿತವಾಗುತ್ತವೆ.

**II ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ಭೂಮಿಯ ಅಂತರಾಳದ ಮೂರು ಪ್ರಮುಖ ಪದರುಗಳನ್ನು ತಿಳಿಸಿ.

2 ಕಾರ್ಯಾಚರಣೆ ಮಾಡುವ ಅವಧಿಯ ಆಧಾರದ ಮೇಲೆ ಜ್ವಾಲಾಮುಖಿಯ ವಿಧಗಳನ್ನು ಹೆಸರಿಸಿ.

3 ಪ್ರಪಂಚದ ಪ್ರಮುಖ ಭೂಕಂಪ ವಲಯಗಳನ್ನು ತಿಳಿಸಿ.

4 ಶಿಥಿಲೀಕರಣ ಎಂದರೇನು ? ಶಿಥಿಲೀಕರಣದ ಮೂರು ಮುಖ್ಯ ವಿಧಗಳನ್ನು ಹೆಸರಿಸಿ.

5 ಭೂನಗ್ನೀಕರಣದ ಕರ್ತೃವಾಗಿ ನದಿಗಳು ನಿರ್ಮಿಸುವ ಭೂಸ್ವರೂಪಗಳನ್ನು ಹೆಸರಿಸಿ.

**III ಹೊಂದಿಸಿ ಬರೆಯಿರಿ.**

| | ಅ | | ಬ |
|---|---|---|---|
| 1 | ಸಿಮಾ | ಅ) | ಭೂಕಂಪ |
| 2 | ಮರಳುಗಲ್ಲು | ಆ) | ಹಳದಿಮಣ್ಣು |
| 3 | ಹೊರ ಕೇಂದ್ರ | ಇ) | ಸಾಗರೀಕ ವಲಯದ ಮೇಲ್ಪದರು |
| 4 | ಬಿಸಿನೀರಬುಗ್ಗೆ | ಈ) | ಕಣಶಿಲೆ |
| 5 | ಲೋಯಸ್ | ಉ) | ಅಂತರ್ಜಲ |

**IV ಈ ಕೆಳಗಿನವುಗಳನ್ನು ಅರ್ಥೈಸಿ.**

1. ಜಲಶಿಲೆಗಳು
2. ಪೆಸಿಫಿಕ್ ಅಗ್ನಿವೃತ್ತ
3. ಭೌತಿಕ ಶಿಥಿಲೀಕರಣ
4. ಶಿಲಾನಿಚಯಗಳು
5. ಇಂಗಾಲಾಧಿಕ್ಯ ಶಿಲೆಗಳು

6. ಸುನಾಮಿ

7. ಭೂಖಂಡ ಹಿಮನದಿ

8. ಬಿಸಿನೀರ ಚಿಲುಮೆ

**V ನೆನಪಿನಲ್ಲಿಡಬೇಕಾದ ಅಂಶಗಳು.**

1. ನೀಫೆ
2. ಚೂರ್ಣಾಧಿಕ್ಯ ಮತ್ತು ಮೃಣ್ಮಯಶಿಲೆಗಳು
3. ಭೂರಚನಾ ಶಕ್ತಿಗಳು
4. ಪರ್ವತ ಹಿಮನದಿ
5. ಗಾಳಿಕಾರ್ಯದ ಆವರ್ತನ
6. ಸಮುದ್ರ ತೀರಗಳು

**VI ಚಟುವಟಿಕೆಗಳು.**

1. ನಿಮ್ಮ ಸುತ್ತಮುತ್ತಲಿನ ಸ್ಥಳಗಳಲ್ಲಿ ಸಿಗುವ ವಿವಿಧ ಶಿಲೆಗಳನ್ನು ಸಂಗ್ರಹಿಸಿ, ಹೆಸರಿಸಿ.
2. ಸಮೀಪದ ಜಲಪಾತಗಳಿಗೆ ಬೇಟಿ ನೀಡಿ ಅವು ಹೇಗೆ ನಿರ್ಮಿತವಾಗಿವೆ ಎಂದು ತಿಳಿಯಿರಿ.

## ಅಧ್ಯಾಯ–3

# ವಾಯುಗೋಳ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ವಾಯುಗೋಳದ ಅರ್ಥ, ಪ್ರಾಮುಖ್ಯತೆ, ಸಂಯೋಜನೆ, ರಚನೆ ಬಗ್ಗೆ ಅರಿವು ಮೂಡಿಸಿಕೊಳ್ಳುವುದು.
- ಹವಾಮಾನದ ಘಟಕಾಂಶಗಳಾದ ಉಷ್ಣಾಂಶ, ಒತ್ತಡ, ಮಾರುತಗಳು, ತೇವಾಂಶ, ಮೋಡ, ಮಳೆ, ಇವುಗಳ ಕಾರ್ಯ, ವಿಧಗಳ ಬಗ್ಗೆ ತಿಳಿಯುವುದು.
- ಹವಾಮಾನ ಮತ್ತು ವಾಯುಗುಣದ ವ್ಯತ್ಯಾಸವನ್ನು ವಿಶ್ಲೇಷಿಸುವುದು.

| ನಮ್ಮನ್ನು ಭೂಮಿಯ ಸುತ್ತಲಿನ ವಾಯುವಿನ ಪದರವು ಹೇಗೆ ರಕ್ಷಿಸುತ್ತಿದೆ ಎಂಬುದು ತಿಳಿದಿದೆಯೇ! |
|---|

**ವಾಯುಗೋಳದ ಅರ್ಥ ಮತ್ತು ಪ್ರಾಮುಖ್ಯತೆ:** ಭೂಮಿಯನ್ನು ಸುತ್ತುವರಿದಿರುವ ಅನಿಲಗಳು, ಧೂಳಿನಕಣ ಮತ್ತು ನೀರಾವಿಯು ತೆಳುವಾದ ಪದರವನ್ನು ವಾಯುಗೋಳವೆಂದು ಕರೆಯುತ್ತೇವೆ. ಈ ಅನಿಲದ ಪದರವು ಜೀವಗೋಳವನ್ನು ಬಾಹ್ಯಾಕಾಶದಿಂದ ಪ್ರತ್ಯೇಕಿಸಿ ರಕ್ಷಣೆಯನ್ನು ನೀಡಿದೆ. ವಾಯುಗೋಳದ ದಪ್ಪ ಸುಮಾರು 1000 ಕಿ.ಮಿಗಳಿದ್ದು, ಇದು ಎಲ್ಲಾ ಬಗೆಯ ಜೀವಿಗಳಿಗೆ ಅತ್ಯವಶ್ಯವಾಗಿದೆ. ವಾಯುಗೋಳದ ಕೆಲವು ಅನಿಲಗಳು ಮಾನವ ಮತ್ತು ಇತರ ಜೀವಿಗಳ ಉಸಿರಾಟಕ್ಕೆ ಅತ್ಯವಶ್ಯವಾಗಿದೆ. ಸಸ್ಯಗಳು ಈ ಅನಿಲಗಳ ನೆರವಿನಿಂದ ಆಹಾರವನ್ನು ಉತ್ಪಾದಿಸುತ್ತವೆ. ವಾಯುಗೋಳವು ಅನಿಲದ ಹೊದಿಕೆಯಾಗಿದ್ದು ಸೂರ್ಯನ ಶಾಖವನ್ನು ಹಿಡಿದಿರಿಸಿಕೊಂಡು ಭೂಮಿಯನ್ನು ಬೆಚ್ಚಗಿರಿಸಿ, ಜೀವಿಸಲು ಸೂಕ್ತವಾಗಿರುವಂತೆ ಮಾಡಿದೆ.




**ವಾಯುಮಂಡಲ ಸ್ತರಗಳು**

**ವಾಯುಗೋಳದ ಸಂಯೋಜನೆ:**

ವಾಯುಗೋಳವು ವಿವಿಧ ಬಗೆಯ ಅನಿಲಗಳು, ಧೂಳಿನ ಕಣಗಳು ಮತ್ತು ನೀರಾವಿಯ ಮಿಶ್ರಣವಾಗಿದೆ. ವಾಯುಮಂಡಲದ ಮುಖ್ಯ ಅನಿಲಗಳೆಂದರೆ ಸಾರಜನಕ ಶೇ 78.08, ಆಮ್ಲಜನಕ ಶೇ.20.94, ಆರ್ಗಾನ್ ಶೇ 0.93, ಇಂಗಾಲದ ಡೈಆಕ್ಸೈಡ್ ಶೇ0.03, ಓಜೋನ್ ಶೇ 0.000005. ವಾಯುಮಂಡಲವು ಧೂಳಿನ ಕಣಗಳನ್ನು ಸಹ ಒಳಗೊಂಡಿದ್ದು, ಇವು ಜಲಾಂಶದ ಘನೀಕರಣ ಮತ್ತು ಮೋಡದ ನಿರ್ಮಾಣಕ್ಕೆ ಸಹಾಯಕವಾಗಿದೆ. ವಾಯುಮಂಡಲದಲ್ಲಿರುವ ನೀರಾವಿಯು ಮೋಡದ ನಿರ್ಮಾಣ ಹಾಗೂ ವೃಷ್ಟಿಗೆ ಕಾರಣವಾಗುವುದಲ್ಲದೆ ವಾಯುಮಂಡಲದ ಶಾಖ ಮತ್ತು ಶಕ್ತಿಯನ್ನು ಹಿಡಿದಿರಿಸಿಕೊಂಡು ಅದು ಒಂದು ಸ್ಥಳದ ಹವಾಮಾನದ ಮೇಲೆ ಪ್ರಭಾವವನ್ನು ಬೀರುವುದು.

**ವಾಯುಮಂಡಲದ ರಚನೆ:** ವಾಯುಮಂಡಲವನ್ನು ಅದರ ಹಲವಾರು ಲಕ್ಷಣಗಳನ್ನು ಆದರಿಸಿ ಐದು ಪದರುಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಪರಿವರ್ತನಾಮಂಡಲ, ಸಮೋಷ್ಣಮಂಡಲ, ಮಧ್ಯಂತರಮಂಡಲ, ಅಯಾನಮಂಡಲ ಮತ್ತು ಬಾಹ್ಯಮಂಡಲ.

**ಪರಿವರ್ತನಾಮಂಡಲ (Troposphere):** ಇದು ವಾಯುಮಂಡಲದ ಅತ್ಯಂತ ಕೆಳಪದರು. ಇದು ಸಮಭಾಜಕ ವೃತ್ತದ ಬಳಿ 18 ಕಿ.ಮೀ ಎತ್ತರದವರೆಗೆ ಹಾಗೂ ಧ್ರುವಪ್ರದೇಶದ ಬಳಿ 8ಕಿ.ಮೀ. ಎತ್ತರದ ವರೆಗೆ ಕಂಡುಬರುವುದು. ಈ ವಲಯದಲ್ಲಿಯೇ ಹವಾಮಾನದ ಉಷ್ಣಾಂಶ, ಒತ್ತಡ, ಮಾರುತಗಳು, ಮೋಡ, ಮಳೆ ಮೊದಲಾದ ಎಲ್ಲಾ ಅಂಶಗಳು ಕಂಡು ಬರುತ್ತವೆ. ಹವಾಮಾನದ ಎಲ್ಲಾ ಬದಲಾವಣೆಗಳು ಕಂಡು ಬರುವುದು ಈ ವಲಯದಲ್ಲಿ ಮಾತ್ರ. ಈ ವಲಯದಲ್ಲಿ ಎತ್ತರಕ್ಕೆ ಹೋದಂತೆ ಉಷ್ಣಾಂಶ ಮತ್ತು ಒತ್ತಡ ಪ್ರಮಾಣ ಕಡಿಮೆಯಾಗುತ್ತದೆ.

**ಸಮೋಷ್ಣಮಂಡಲ (Stratosphere):** ಇದು ವಾಯುಮಂಡಲದ ಎರಡನೆಯ ಪದರವಾಗಿದ್ದು, 50 ಕಿ.ಮೀ.ವರೆಗೆ ಹಬ್ಬಿದ್ದು ಪರಿವರ್ತನಾ ಮಂಡಲದ ಮೇಲಿರುವುದು. ಈ ಪದರದಲ್ಲಿ ಓಜೋನ್ ಅನಿಲವು ಅತ್ಯಂತ ಮುಖ್ಯವಾದುದು. ಇದು ಸೂರ್ಯನಿಂದ ಬರುವ ಅತಿ ನೇರಳೆ (ಅಲ್ಟ್ರಾವೈಲೆಟ್) ಕಿರಣಗಳನ್ನು ಹೀರಿಕೊಂಡು ಭೂಮಿಯ ಮೇಲಿನ ಎಲ್ಲಾ ಜೀವರಾಶಿಗಳನ್ನು ರಕ್ಷಿಸಿದೆ. ಈ ಪದರವು ಮೋಡ ಹಾಗೂ ಇತರೆ ಎಲ್ಲಾ ಬಗೆಯ ಹವಾಮಾನದ ಅಂಶಗಳಿಂದ ಮುಕ್ತವಾಗಿರುವುದು. ಇದರಿಂದ ಈ ಪದರಲ್ಲಿ ಜೆಟ್ ವಿಮಾನಗಳು ಹಾರಾಡಲು ಸೂಕ್ತವಾಗಿದೆ.

**ಮಧ್ಯಂತರ ಮಂಡಲ (Mesosphere):** ಇದು ಸಮೋಷ್ಣಮಂಡಲದ ಮೇಲಿದ್ದು, ಸುಮಾರು 80 ಕಿ.ಮೀ. ಎತ್ತರದವರೆಗೆ ವಿಸ್ತರಿಸಿದೆ. ಈ ವಲಯದಲ್ಲಿಯೂ ಎತ್ತರಕ್ಕೆ ಹೋದಂತೆ ಉಷ್ಣಾಂಶವು ಕಡಿಮೆಯಾಗುವುದು. ಈ ಪದರು ವಾಯುಮಂಡಲದ ಅತಿ ಶೀತ ಉಷ್ಣಾಂಶವನ್ನು ಹೊಂದಿದೆ.

**ಉಷ್ಣತಾಮಂಡಲ (Thermosphere):** ಮಧ್ಯಂತರ ಮಂಡಲದ ನಂತರ ಉಷ್ಣತಾಮಂಡಲ ಕಂಡುಬರುತ್ತದೆ. ಈ ಪದರದಲ್ಲಿ ಉಷ್ಣಾಂಶವು ತೀವ್ರವಾಗಿ ಹೆಚ್ಚಾಗುತ್ತದೆ. ಈ ಪದರದಲ್ಲಿನ ಅತ್ಯಧಿಕ ಉಷ್ಣಾಂಶದ ಪರಿಣಾಮವಾಗಿ ಅನಿಲದ ಅಣುಗಳು ಆಯಾನುಗಳಾಗಿ ಪರಿವರ್ತನೆ ಹೊಂದಿರುತ್ತವೆ. ಆದುದರಿಂದ ಇದನ್ನು 'ಆಯಾನುಮಂಡಲ'ವೆಂದು ಕರೆಯುವರು. ಈ ಆಯಾನುಗಳು ಭೂಮಿಯಿಂದ ಪ್ರಸಾರಗೊಂಡ ರೇಡಿಯೋ ತರಂಗಗಳನ್ನು ಪುನಃ ಭೂಮಿಯ ಕಡೆಗೆ ಪ್ರತಿಫಲಿಸುತ್ತವೆ.

**ಬಾಹ್ಯಮಂಡಲ (Exosphere) :** ಬಾಹ್ಯಮಂಡಲವು ವಾಯುಮಂಡಲದ ಅತ್ಯಂತ ಮೇಲಿನ ಪದರವಾಗಿದೆ. ಈ ಪದರಲ್ಲಿ ವಾಯುಮಂಡಲ ಘಟಕಾಂಶಗಳು ವಿರಳವಾಗಿರುತ್ತದೆ ಮತ್ತು ಒತ್ತಡ ಅತ್ಯಂತ ಕಡಿಮೆ ಇರುತ್ತದೆ.

### ಹವಾಮಾನದ ಘಟಕಾಂಶಗಳು (Elements of Weather)

ಹವಾಮಾನದ ಪರಿಸ್ಥಿತಿಯು ಹಲವಾರು ಅಂಶಗಳಿಂದ ಪ್ರಭಾವಿತವಾಗಿದ್ದು ಅವುಗಳೆಂದರೆ ಉಷ್ಣಾಂಶ, ಒತ್ತಡ, ಮಾರುತಗಳು, ತೇವಾಂಶ, ಮೋಡ, ಮಳೆ ಇತ್ಯಾದಿ.

ಒಂದು ಸ್ಥಳದಲ್ಲಿ ನಿಗದಿತ ಸಮಯದಲ್ಲಿ ಕಂಡುಬರುವ ವಾಯುಮಂಡಲದ ಪರಿಸ್ಥಿತಿಯೇ ಹವಾಮಾನ. ಇದಕ್ಕೆ ಪ್ರತಿಯಾಗಿ ಒಂದು ಪ್ರದೇಶದ ದೀರ್ಘಾವಧಿಯ ಹವಾಮಾನದ ಸರಾಸರಿಯನ್ನು ವಾಯುಗುಣವೆಂದು ಕರೆಯುವರು.

**ಉಷ್ಣಾಂಶ**

ಭೂಮಿಯು ಪಡೆಯುವ ಎಲ್ಲಾ ಶಕ್ತಿಗೂ ಸೂರ್ಯನೇ ಮೂಲ. ಭೂಮಿಯು ಸೂರ್ಯನಿಂದ ಪಡೆಯುವ ಶಾಖವನ್ನು **'ಸೂರ್ಯಜನ್ಯ ಶಾಖ' (Insolation)** ವೆಂದು ಕರೆಯುವರು. ಅಂದರೆ ಸೂರ್ಯನಿಂದ ಬರುವ 'ವಿಕಿರಣ'ಎಂದಾಗಿದೆ. ವಾಯು ಮಂಡಲದ ಉಷ್ಣಾಂಶವನ್ನು ಉಷ್ಣತಾಮಾಪಕ (Thermometer) ಉಪಕರಣದಿಂದ ಅಳೆಯಲಾಗುವುದು. ಸೆಂಟಿಗ್ರೇಡ್ ಅಥವಾ ಫ್ಯಾರನ್ ಹೀಟ್ ಉಷ್ಣತಾಮಾಪಕಗಳನ್ನು ಉಷ್ಣಾಂಶವನ್ನು ಅಳೆಯುಲು ಬಳಸುವರು. ಉಷ್ಣಾಂಶದ ಮೇಲೆ ಪ್ರಭಾವವನ್ನು ಬೀರುವ ಅಂಶಗಳೆಂದರೆ ಅಕ್ಷಾಂಶ, ಒಂದು ಸ್ಥಳದ ಎತ್ತರ, ಸಮುದ್ರದಿಂದ ಇರುವ ದೂರ, ಮಾರುತಗಳು, ಸಾಗರ ಪ್ರವಾಹಗಳು, ಮೋಡಗಳು, ಮಳೆ ಇತ್ಯಾದಿ.

**ಉಷ್ಣಾಂಶದ ಸಾಮಾನ್ಯ ಇಳಿಕೆಯ ಪ್ರಮಾಣ:** ಎತ್ತರಕ್ಕೆ ಹೋದಂತೆ ಅನಿಲಗಳ ಪ್ರಮಾಣ ಕಡಿಮೆಯಾಗುವುದರಿಂದ ಒತ್ತಡ ಕಡಿಮೆಯಾಗಿ ಉಷ್ಣಾಂಶವು ಕಡಿಮೆಯಾಗುತ್ತದೆ. ಇದನ್ನು ಉಷ್ಣಾಂಶದ ಸಾಮಾನ್ಯ ಇಳಿಕೆ ಪ್ರಮಾಣ ಎನ್ನುವರು. ಇದು ಪ್ರತಿಸಾವಿರ ಮೀಟರ್‌ಗಳ ಎತ್ತರಕ್ಕೆ (1.ಕಿ.ಮೀ) $6.4^0$ ಸೆಂ. ಅಥವಾ 165 ಮೀಟರ್‌ಗೆ $1^0$. ಸೆಂ. ಉಷ್ಣಾಂಶವು ಕಡಿಮೆಯಾಗುತ್ತದೆ.

**ಉಷ್ಣಾಂಶ ವಿಪರ್ಯಾಯ:** ಕೆಲವು ವಿಶೇಷ ಸನ್ನಿವೇಶಗಳಲ್ಲಿ ವಾಯುಮಂಡಲದಲ್ಲಿ ಎತ್ತರಕ್ಕೆ ಹೋದಂತೆ ಉಷ್ಣಾಂಶವು ಕಡಿಮೆಯಾಗುವ ಬದಲು ಹೆಚ್ಚಾಗುತ್ತಾ ಹೋಗುವುದು. ಇದನ್ನು 'ಉಷ್ಣಾಂಶ ವಿಪರ್ಯಯ' ಎನ್ನುವರು. ಇದು ಪರ್ವತಗಳ ಕಣಿವೆ ಪ್ರದೇಶಗಳಲ್ಲಿ ಕಂಡುಬರುವುದು. ಇದಕ್ಕೆ ಕಾರಣಗಳೆಂದರೆ ದೀರ್ಘಾವದಿಯ ರಾತ್ರಿ ಮೋಡರಹಿತ ಶುಭ್ರಆಕಾಶ, ಒಣಗಾಳಿ, ಮಾರುತರಹಿತ ಮತ್ತು ಹಿಮಾವೃತ ಪರ್ವತದ ಮೇಲ್ಭಾಗ ಇತ್ಯಾದಿ.

**ಉಷ್ಣಾಂಶದ ವಲಯಗಳು:** ಭೂ ಮೇಲ್ಮೈಯಲ್ಲಿ ಉಷ್ಣಾಂಶದ ಹಂಚಿಕೆಯು ಏಕ ರೀತಿಯಾಗಿಲ್ಲ. ಸೂರ್ಯಜನ್ಯಶಾಖದ ಆಧಾರದಿಂದ ಭೂಮಿಯನ್ನು ಮೂರು ಉಷ್ಣಾಂಶ ವಲಯಗಳಾಗಿ ವಿಂಗಡಿಸಬಹುದು. ಅವುಗಳೆಂದರೆ:




**ಉಷ್ಣಾಂಶ ವಲಯಗಳು**

**ಉಷ್ಣವಲಯ (Torrid Zone):** ಇದು ಹೆಚ್ಚು ಉಷ್ಣಾಂಶದ ವಲಯ. ಇದರಲ್ಲಿ ಸೌರಶಾಖ ಹೆಚ್ಚು. ಇದು $0^0$ ಅಕ್ಷಾಂಶ ಸಮಭಾಜಕ ವೃತ್ತದಿಂದ ಕರ್ಕಾಟಕ ಸಂಕ್ರಾಂತಿ ವೃತ್ತ ($23\frac{1}{2}^0$ ಉತ್ತರ) ಹಾಗೂ ಮಕರ ಸಂಕ್ರಾಂತಿ ವೃತ್ತದವರೆಗೆ ($23\frac{1}{2}^0$ ದಕ್ಷಿಣ) ವಿಸ್ತರಿಸಿದೆ. ಈ ವಲಯವು ಸೂರ್ಯನ ನೇರವಾದ ಕಿರಣಗಳನ್ನು ಪಡೆಯುವುದು.

**ಸಮಶೀತೋಷ್ಣವಲಯ (Temperate Zone):** ಈ ವಲಯದಲ್ಲಿ ಉಷ್ಣಾಂಶವು ಅತಿ ಹೆಚ್ಚು ಅಥವಾ ಅತಿಕಡಿಮೆಯಿರದೆ ಸಮತೋಲನವಾಗಿರುವುದು. ಇದು ಉತ್ತರಾರ್ಧಗೋಳದಲ್ಲಿ 23½° ಉತ್ತರದಿಂದ, 66½° ಉತ್ತರ (ಕರ್ಕಾಟಕ ಸಂಕ್ರಾಂತಿ ವೃತ್ತದಿಂದ ಆರ್ಕ್ಟಿಕ್ ವೃತ್ತ)ದವರೆಗೆ ಇರುವುದು. ಅದೇ ರೀತಿ ದಕ್ಷಿಣಾರ್ಧಗೋಳದಲ್ಲಿ 23½°ದಕ್ಷಿಣದಿಂದ 66½° ದಕ್ಷಿಣದವರೆಗೆ (ಮಕರ ಸಂಕ್ರಾಂತಿ ವೃತ್ತದಿಂದ ಅಂಟಾರ್ಕ್ಟಿಕ್ ವೃತ್ತ) ಇರುವುದು.

**ಶೀತವಲಯ (Frigid Zone):** ಇದು ಅತ್ಯಂತ ಶೀತಪ್ರದೇಶ. ಇದು 66½° (ಆರ್ಕ್ಟಿಕ್ ವೃತ್ತ) ಉತ್ತರದಿಂದ $90^0$ ಉತ್ತರ ಧ್ರುವರೆಗೆ ಹಾಗೂ ದಕ್ಷಿಣಾರ್ಧಗೋಳದಲ್ಲಿ 66½° ದಕ್ಷಿಣದಿಂದ (ಅಂಟಾರ್ಕ್ಟಿಕ್ ವೃತ್ತ) $90^0$ ದಕ್ಷಿಣ ಧ್ರುವದವರೆಗಿರುವುದು. ಈ ವಲಯದಲ್ಲಿ ಸೂರ್ಯನ ಕಿರಣಗಳು ಅತ್ಯಂತ ಓರೆಯಾಗಿ ಬೀಳುವುದರಿಂದ, ಉಷ್ಣಾಂಶ ಅತಿ ಕಡಿಮೆಯಿದೆ. ಇಲ್ಲಿ ಬೇಸಿಗೆಯಲ್ಲಿ ಉಷ್ಣಾಂಶ ಸ್ವಲ್ಪ ಹೆಚ್ಚಾಗುತ್ತದೆ ಮತ್ತು ಚಳಿಗಾಲದಲ್ಲಿ ಉಷ್ಣಾಂಶ ಕಡಿಮೆ ಇರುತ್ತದೆ.

**ಸಮೋಷ್ಣರೇಖೆ (Isotherm)**: ಒಂದೇ ಪ್ರಮಾಣದ ಉಷ್ಣಾಂಶವನ್ನು ಹೊಂದಿರುವ ಸ್ಥಳಗಳನ್ನು ಸೇರಿಸುವಂತೆ ಎಳೆಯಬಹುದಾದ ರೇಖೆಗಳೇ ಸಮೋಷ್ಣರೇಖೆಗಳು. ಇವುಗಳನ್ನು ಗೋಳ ಅಥವಾ ಭೂಪಟದ ಮೇಲೆ ಯಾವುದಾದರೊಂದು ಭಾಗದ ಉಷ್ಣಾಂಶದ ಹಂಚಿಕೆಯನ್ನು ತೋರಿಸಲು ಎಳೆಯಲಾಗುವುದು.

**ನಿಮಗಿದು ಗೊತ್ತೆ ?**

**ಅತಿಹೆಚ್ಚು ಹಾಗೂ ಅತಿ ಕಡಿಮೆ ಉಷ್ಣಾಂಶದ ಸ್ಥಳಗಳು**

1 ಆಫ್ರಿಕಾ ಖಂಡದ ಲಿಬಿಯಾ ದೇಶದಲ್ಲಿನ ಆಲ್‌ಅಜೀಜಿಯಾ ಪ್ರಪಂಚದಲ್ಲೇ ಅತಿಹೆಚ್ಚು ಉಷ್ಣಾಂಶವನ್ನು ದಾಖಲಿಸಿದೆ. (ಸರಾಸರಿ+58°ಸೆಂ) ಆದರೆ ರಷ್ಯಾದ ಸೈಬೀರಿಯಾ ಭಾಗದಲ್ಲಿರುವ ವರ್ಕೋಯನ್‌ಸ್ಕ್, ಭೂಭಾಗದಲ್ಲೇ (ಜನವಸತಿಯಿರುವ) ಅತಿಕಡಿಮೆ ಉಷ್ಣಾಂಶವನ್ನು ದಾಖಲಿಸಿದೆ. ( ಸರಾಸರಿ –24° ಸೆಂ).

2. ಭಾರತದಲ್ಲಿ ರಾಜಸ್ಥಾನದ ಗಂಗಾನಗರವು ಬೇಸಿಗೆಯಲ್ಲಿ ಅತ್ಯಂತ ಗರಿಷ್ಠ ಉಷ್ಣಾಂಶವನ್ನು ದಾಖಲಿಸಿದೆ.( ಸರಾಸರಿ +54° ಸೆಂ) ಮತ್ತು ಜಮ್ಮು ಕಾಶ್ಮೀರದ ಲೇಹ್ ಪ್ರದೇಶವು ಚಳಿಗಾಲದಲ್ಲಿ ಅತಿ ಕಡಿಮೆ ಉಷ್ಣಾಂಶ ದಾಖಲಿಸಿದೆ.(ಸರಾಸರಿ –10° ಸೆಂ).

3. ಅಂಟಾರ್ಕ್ಟಿಕ್‌ದಲ್ಲಿರುವ ವಸ್ಟೋಕ್ ಪ್ರದೇಶವನ್ನು ಪ್ರಪಂಚದ ಅತ್ಯಂತ ಶೀತ (ಸರಾಸರಿ–89° ಸೆಂ) ಪ್ರದೇಶವೆಂದು ಪರಿಗಣಿಸಿದೆ.

**ವಾಯುಮಂಡಲದ ಒತ್ತಡ**

ಗಾಳಿಯು ತೂಕವನ್ನು ಹೊಂದಿದ್ದು, ಭೂಮಿಯ ಮೇಲೆ ಒತ್ತಡವನ್ನುಂಟು ಮಾಡುವುದು. ಇದನ್ನೇ ವಾಯುಮಂಡಲದ ಒತ್ತಡ ಎನ್ನುವರು. ವಾಯುವಿನ ಒತ್ತಡವನ್ನು ಅಳೆಯಲು ಬಳಸುವ ಉಪಕರಣ ವಾಯುಭಾರಮಾಪಕ (Barometer). ಒತ್ತಡವನ್ನು ಮಿಲಿಬಾರ್ (mb) ಗಳಲ್ಲಿ ಅಳೆಯುವರು.

ಸಮುದ್ರಮಟ್ಟದಲ್ಲಿ ವಾಯುಮಂಡಲದ ಸರಾಸರಿ ಒತ್ತಡ 1013.25 ಮಿಲಿಬಾರ್‌ಗಳಿಷ್ಟಿರುತ್ತದೆ. ವಾಯುಮಂಡಲದ ಒತ್ತಡವು ಉಷ್ಣಾಂಶ, ಭೂಮಿಯ ದೈನಂದಿನ ಚಲನೆ, ಸಮುದ್ರ ಮಟ್ಟದಿಂದ ಎತ್ತರ, ನೀರಾವಿ ಮೊದಲಾವುಗಳಿಂದ ಪ್ರಭಾವಿತವಾಗುವುದು. ಇವುಗಳಲ್ಲಿ ಉಷ್ಣಾಂಶವು ಅತಿಮುಖ್ಯವಾದುದು. ಉಷ್ಣಾಂಶವು ಹೆಚ್ಚಾಗಿರುವ ಪ್ರದೇಶಗಳಲ್ಲಿ ಒತ್ತಡವು ಕಡಿಮೆ ಇರುವುದು. ಇದಕ್ಕೆ ಕಾರಣ ಹೆಚ್ಚು ಉಷ್ಣಾಂಶದಿಂದ ವಾಯು ವಿಕಾಸ ಹೊಂದಿ ಒತ್ತಡವು ಕಡಿಮೆಯಾಗುವುದು. ಇದಕ್ಕೆ ಪ್ರತಿಯಾಗಿ ಕಡಿಮೆ ಉಷ್ಣಾಂಶ ಇರುವ ಪ್ರದೇಶಗಳಲ್ಲಿ ವಾಯುವು ಸಂಕುಚಿತಗೊಂಡು ಒತ್ತಡವು ಅಧಿಕವಾಗುವುದು. ಹೀಗೆ ಉಷ್ಣಾಂಶ ಮತ್ತು ಒತ್ತಡಗಳು ಪರಸ್ಪರ ತದ್ವಿರುದ್ಧ ಸಂಬಂಧವನ್ನು ಹೊಂದಿವೆ. ವಾಯುಮಂಡಲದ ಒತ್ತಡವು ಭೂಮೇಲ್ಮೈನಿಂದ ಎತ್ತರಕ್ಕೆ ಹೋದಂತೆ ಕಡಿಮೆಯಾಗುವುದು. ಈ ಇಳಿಕೆಯ ಪ್ರಮಾಣವು ಪ್ರತಿ 300 ಮಿ.ಗಳಿಗೆ 34 ಮಿಲಿಬಾರ್‌ಗಳಷ್ಟಿರುವುದು.

**ಪ್ರಪಂಚದ ಮುಖ್ಯ ಒತ್ತಡ ಪಟ್ಟಿಗಳು**

ವಾಯುವಿನ ಒತ್ತಡವು ಪಟ್ಟಿಗಳ ರೂಪದಲ್ಲಿ ಹಂಚಿಕೆಯಾಗಿದ್ದು ಗೋಳದ ಮೇಲೆ ಒಟ್ಟು ಏಳು ಒತ್ತಡ ಪಟ್ಟಿಗಳಿವೆ. ಅವುಗಳೆಂದರೆ

1. ಸಮಭಾಜಕ ವೃತ್ತದ ಕಡಿಮೆ ಒತ್ತಡ ಪಟ್ಟಿ,
2. ಉತ್ತರ ಉಪಉಷ್ಣವಲಯದ ಅಧಿಕ ಒತ್ತಡ ಪಟ್ಟಿ
3. ದಕ್ಷಿಣ ಉಪ ಉಷ್ಣವಲಯದ ಅಧಿಕ ಒತ್ತಡ ಪಟ್ಟಿ
4. ಉತ್ತರ ಉಪಧ್ರುವೀಯ ಕಡಿಮೆ ಒತ್ತಡ ಪಟ್ಟಿ
5. ದಕ್ಷಿಣ ಉಪ ಧ್ರುವೀಯ ಕಡಿಮೆ ಒತ್ತಡ ಪಟ್ಟಿ.
6. ಉತ್ತರ ಧ್ರುವೀಯ ಅಧಿಕ ಒತ್ತಡ ಪಟ್ಟಿ.
7. ದಕ್ಷಿಣ ಧ್ರುವೀಯ ಅಧಿಕ ಒತ್ತಡ ಪಟ್ಟಿ.

**ಸಮಭಾಜಕ ವೃತ್ತದ ಕಡಿಮೆ ಒತ್ತಡ ಪಟ್ಟಿ:** ಇದು ಹೆಚ್ಚು ಉಷ್ಣಾಂಶದ ವಲಯವಾಗಿದ್ದು ಕಡಿಮೆ ಒತ್ತಡವನ್ನು ಹೊಂದಿದೆ. ಈ ಪಟ್ಟಿಯು ಸಮಭಾಜಕವೃತ್ತದಿಂದ $5^{0}$ ಉತ್ತರ ಮತ್ತು ದಕ್ಷಿಣ ಅಕ್ಷಾಂಶದವರೆಗೆ ಕಂಡು ಬರುವುದು. ಈ ಭಾಗವು ವರ್ಷವೆಲ್ಲಾ ಸೂರ್ಯನ ಲಂಬವಾದ ಕಿರಣಗಳನ್ನು ಪಡೆಯುವುದು. ಇದರಿಂದ ಗಾಳಿಯು ಹೆಚ್ಚು ಉಷ್ಣಾಂಶದಿಂದ ಕೂಡಿದ್ದು, ಬಿಸಿಯಾಗಿರುತ್ತದೆ ಹಾಗೂ ಅದರ ಚಲನೆ ಕಡಿಮೆಯಾಗಿರುತ್ತದೆ. ಈ ವಲಯವು ಪ್ರಶಾಂತವಾಗಿದ್ದು (calm) ಲಘುಮಾರುತಗಳಿರುವುದರಿಂದ ಇದನ್ನು ಶಾಂತವಲಯ (Doldrum) ಎಂದೂ ಕರೆಯುವರು. ಈ ಪ್ರದೇಶವನ್ನು ಅಂತರ ಉಷ್ಣ ಸಂಧಿವಲಯ (Inter Tropical Convergence Zone –ITCZ) ಎಂಬ ಹೆಸರಿನಲ್ಲೂ ಕರೆಯುವರು. ವಾಣಿಜ್ಯ ಮಾರುತಗಳು ಈ ವಲಯದಲ್ಲಿ ಬಂದು ಸಂಧಿಸುತ್ತವೆ.

**ಉಪ ಉಷ್ಣವಲಯದ ಅಧಿಕ ಒತ್ತಡ ಪಟ್ಟಿಗಳು :** ಈ ಪಟ್ಟಿಗಳು ಉತ್ತರ ಹಾಗೂ ದಕ್ಷಿಣಾ ಗೋಳಾರ್ಧಗಳೆರಡರಲ್ಲಿಯೂ $30^{0}$ ಯಿಂದ $35^{0}$ ಅಕ್ಷಾಂಶಗಳ ನಡುವೆ ಕಂಡು ಬರುತ್ತವೆ. ಇಲ್ಲಿ ಎರಡು ಉಪ–ಉಷ್ಣವಲಯದ ಅಧಿಕ ಒತ್ತಡ ಪಟ್ಟಿಗಳಿವೆ. ಅ) **ಉತ್ತರ ಉಪ–ಉಷ್ಣವಲಯದ ಅಧಿಕ ಒತ್ತಡ ಪಟ್ಟಿ:** ಈ ಪಟ್ಟಿಗಳು $30^{0}$ ಉ. ದಿಂದ $35^{0}$ ಉ. ಅಕ್ಷಾಂಶಗಳವರೆಗೆ ಕಂಡು ಬರುತ್ತವೆ. ಈ ವಲಯವನ್ನು ಅಶ್ವ ಅಕ್ಷಾಂಶಗಳೆಂದೂ ಸಹ ಕರೆಯುವರು. ಬ) **ದಕ್ಷಿಣ ಉಪ–ಉಷ್ಣವಲಯದ ಅಧಿಕ ಒತ್ತಡ ಪಟ್ಟಿ :** ಇದು $30^{0}$ ದಕ್ಷಿಣ ದಿಂದ ದಕ್ಷಿಣ $35^{0}$ ಅಕ್ಷಾಂಶಗಳವರೆಗೆ ಕಂಡುಬರುತ್ತವೆ.

**ಉಪ ಧ್ರುವೀಯ ಕಡಿಮೆ ಒತ್ತಡ ಪಟ್ಟಿಗಳು:** ಇವು $60^0$ ಯಿಂದ $65^0$ ಉತ್ತರ ಮತ್ತು ದಕ್ಷಿಣ ಅಕ್ಷಾಂಶಗಳ ನಡುವೆ ಕಂಡುಬರುತ್ತವೆ. ಭೂ ಗೋಳದ ಮೇಲೆ ಎರಡು ಉಪಧ್ರುವೀಯ ಕಡಿಮೆ ಒತ್ತಡ ಪಟ್ಟಿಗಳಿವೆ. ಅವುಗಳೆಂದರೆ **ಅ) ಉತ್ತರ ಉಪಧ್ರುವೀಯ ಕಡಿಮೆ ಒತ್ತಡ ಪಟ್ಟಿ,** ($60^0$ಉತ್ತರದಿಂದ $65^0$ ಉತ್ತರದವರೆಗೆ) **ಬ) ದಕ್ಷಿಣ ಉಪಧ್ರುವೀಯ ಕಡಿಮೆ ಒತ್ತಡ ಪಟ್ಟಿ.** ($60^0$ ದಕ್ಷಿಣದಿಂದ $65^0$ ದಕ್ಷಿಣದವರೆಗೆ) ಚಂಡ ಮಾರುತಗಳು ವಿಶೇಷವಾಗಿ ಚಳಿಗಾಲದಲ್ಲಿ ಕಂಡುಬರುತ್ತವೆ.



**ಪ್ರಪಂಚದ ಒತ್ತಡ ಪಟ್ಟಿಗಳು**

**ಧ್ರುವೀಯ ಅಧಿಕ ಒತ್ತಡ ಪಟ್ಟಿಗಳು:** ಈ ವಲಯವು ಎರಡೂ ಗೋಳಾರ್ಧಗಳಲ್ಲಿ $80^0$ ಯಿಂದ $90^0$ ಅಕ್ಷಾಂಶಗಳ ನಡುವೆ ಕಂಡುಬರುವುದು. ಇವು ಅತ್ಯಂತ ಶೀತವಾಗಿದ್ದು ಇದರಿಂದ ವರ್ಷವೆಲ್ಲಾ ಹೆಚ್ಚು ಒತ್ತಡದಿಂದ ಕೂಡಿರುತ್ತವೆ.

**ಸಮಭಾರ ರೇಖೆಗಳು (Isobars):** ಇವುಗಳನ್ನು ನಕ್ಷೆಯ ಮೇಲೆ ಒತ್ತಡದ ಹಂಚಿಕೆಯನ್ನು ತೋರಿಸಲು ಬಳಸುವರು. ಒಂದೇ ಪ್ರಮಾಣದ ಒತ್ತಡ ಹೊಂದಿರುವ ಸ್ಥಳಗಳನ್ನು ಸೇರಿಸುವಂತೆ ಎಳೆಯಬಹುದಾದ ರೇಖೆಗಳೇ ಸಮಭಾರರೇಖೆಗಳು.

## ಮಾರುತಗಳು

ಭೂಮಿಯ ಮೇಲ್ಮೈಗೆ ಸಮಾನಾಂತರವಾಗಿ ಚಲಿಸುವ ವಾಯುವನ್ನು 'ಮಾರುತ' ಗಳೆನ್ನುವರು. ಮಾರುತಗಳು ಭೂಮಿಯ ದೈನಂದಿನ ಚಲನೆ ಮತ್ತು ಒತ್ತಡದ ಹಂಚಿಕೆಯಲ್ಲಿ ವ್ಯತ್ಯಾಸಗಳಿಂದ ಉಂಟಾಗುತ್ತವೆ.

ವಾಯುವು ಯಾವ ದಿಕ್ಕಿನಿಂದ ಬೀಸುತ್ತದೆ ಎಂಬುದನ್ನು ತಿಳಿಯಲು 'ಪವನದಿಕ್ಸೂಚಿ' ಉಪಕರಣವನ್ನು ಬಳಸುವರು. ಇದೇ ರೀತಿಯಲ್ಲಿ ವಾಯುವಿನ ವೇಗವನ್ನು ಅಳೆಯಲು 'ಪವನವೇಗಮಾಪಕ' (Anemometer) ಉಪಕರಣವನ್ನು ಉಪಯೋಗಿಸುವರು.



**ಪವನ ದಿಕ್ಸೂಚಿ**


**ಪವನ ವೇಗ ಮಾಪಕ**

**ಮಾರುತಗಳ ವಿಧಗಳು:** ಮಾರುತಗಳನ್ನು ನಾಲ್ಕು ಪ್ರಮುಖ ವಿಧಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ನಿರಂತರ ಮಾರುತಗಳು, ನಿಯತಕಾಲಿಕ ಮಾರುತಗಳು, ಸ್ಥಳೀಯ ಮಾರುತಗಳು, ಆವರ್ತ ಮತ್ತು ಪ್ರತ್ಯಾವರ್ತ ಮಾರುತಗಳು.

**1. ನಿರಂತರ ಮಾರುತಗಳು (Planetary Winds) :** ಇವುಗಳನ್ನು 'ನಿತ್ಯ ಮಾರುತ' ಅಥವಾ ಭೂಮಂಡಲಿಯ ಮಾರುತಗಳೆಂದೂ ಸಹ ಕರೆಯುವರು. ಇವುಗಳ ವರ್ಷದ ಎಲ್ಲಾ ಕಾಲದಲ್ಲಿಯೂ ಬಹುತೇಕ ಒಂದೇ ದಿಕ್ಕಿನಿಂದ ಬೀಸುತ್ತವೆ. ಈ ಮಾರುತಗಳು ವಾಯುಗುಣ ಬದಲಾವಣೆ, ಮರು ಭೂಮಿಗಳ ನಿರ್ಮಾಣ, ನೌಕಾಯಾನದ ಮಾರ್ಗ ಮೊದಲಾದವುಗಳ ಮೇಲೆ ಹೆಚ್ಚು ಪ್ರಭಾವವನ್ನು ಬೀರುತ್ತವೆ. ನಿತ್ಯಮಾರುತಗಳಲ್ಲಿ ಮೂರು ವಿಧಗಳಿದ್ದು ಅವುಗಳೆಂದರೆ ವಾಣಿಜ್ಯ ಮಾರುತಗಳು, ಪ್ರತಿ ವಾಣಿಜ್ಯ ಮಾರುತಗಳು ಹಾಗೂ ಧ್ರುವೀಯ ಮಾರುತಗಳು.

● **ವಾಣಿಜ್ಯ ಮಾರುತಗಳು (Trade Winds) :** ಇವುಗಳು ಉಪ ಉಷ್ಣವಲಯದ ಅಧಿಕ ಒತ್ತಡ ಪ್ರದೇಶದಿಂದ ಸಮಭಾಜಕ ವೃತ್ತದ ಕಡಿಮೆ ಒತ್ತಡ ಪ್ರದೇಶದ ಕಡೆಗೆ ಬೀಸುತ್ತವೆ. ಉತ್ತರಗೋಳಾರ್ಧದಲ್ಲಿ ಇವು ಈಶಾನ್ಯದಿಂದ ನೈರುತ್ಯ ದಿಕ್ಕಿನ ಕಡೆಗೆ ಹಾಗೂ ದಕ್ಷಿಣಗೋಳಾರ್ಧದಲ್ಲಿ ಆಗ್ನೇಯದಿಂದ ವಾಯವ್ಯ ದಿಕ್ಕಿನ ಕಡೆಗೆ ಬೀಸುತ್ತವೆ. ಇವುಗಳನ್ನು ಕ್ರಮವಾಗಿ ಈಶಾನ್ಯ ವಾಣಿಜ್ಯ ಮಾರುತಗಳು ಹಾಗೂ ಆಗ್ನೇಯ ವಾಣಿಜ್ಯ ಮಾರುತಗಳೆಂದು ಕರೆಯುವರು.

● **ಪ್ರತಿ ವಾಣಿಜ್ಯ ಮಾರುತಗಳು (Anti trade Winds):** ಇವುಗಳನ್ನು ಪಶ್ಚಿಮದ ಮಾರುತಗಳೆಂತಲೂ ಕರೆಯುವರು. ಇವು ಉಪ ಉಷ್ಣವಲಯದ ಅಧಿಕ ಒತ್ತಡ ಪ್ರದೇಶದಿಂದ ಉಪಧ್ರುವೀಯ ಕಡಿಮೆ ಒತ್ತಡ ಪ್ರದೇಶದ ಕಡೆಗೆ ಬೀಸುತ್ತವೆ. ಇವುಗಳ ದಿಕ್ಕು ಉತ್ತರಗೋಳಾರ್ಧದಲ್ಲಿ ನೈರುತ್ಯದಿಂದ ಈಶಾನ್ಯದ ಕಡೆಗಿದ್ದು, ದಕ್ಷಿಣಗೋಳಾರ್ಧದಲ್ಲಿ ವಾಯುವ್ಯದಿಂದ ಆಗ್ನೇಯದ ಕಡೆಗಿರುವುದು. ಈ ಮಾರುತಗಳು ದಕ್ಷಿಣಗೋಳಾರ್ಧ ಸಾಗರಗಳ ಮೇಲೆ ಅತ್ಯಂತ ಪ್ರಭಲವಾಗಿ ಬೀಸುತ್ತವೆ. ಅವುಗಳನ್ನು $40^0$ ದಕ್ಷಿಣ ಅಕ್ಷಾಂಶಗಳಲ್ಲಿ **'ನಾಲ್ವತ್ತರ ಅಬ್ಬರಗಾಳಿ',** $50^0$ ದಕ್ಷಿಣ ಅಕ್ಷಾಂಶಗಳಲ್ಲಿ **'ಐವತ್ತರ ಉಗ್ರಗಾಳಿ'** ಹಾಗೂ $60^0$ ದಕ್ಷಿಣ ಅಕ್ಷಾಂಶಗಳಲ್ಲಿ **'ಅರವತ್ತರ ಅರಚುವ ಗಾಳಿ'**ಗಳೆಂದು ಕರೆಯುವರು.



ನಿರಂತರ ಮಾರುತಗಳು

● **ಧ್ರುವೀಯ ಮಾರುತಗಳು (Polar Winds):** ಇವುಗಳನ್ನು ಪೂರ್ವದ ಮಾರುತಗಳು ಎಂದು ಕರೆಯುವರು. ಈ ಮಾರುತಗಳು ಧ್ರುವೀಯ ಅಧಿಕ ಒತ್ತಡ ವಲಯದಿಂದ ಉಪಧ್ರುವೀಯ ಕಡಿಮೆ ಒತ್ತಡ ವಲಯದ ಕಡೆಗೆ ಬೀಸುತ್ತವೆ. ಇವುಗಳು ಉತ್ತರಗೋಳಾರ್ಧದಲ್ಲಿ ಈಶಾನ್ಯ ದಿಕ್ಕಿನಿಂದ ನೈರುತ್ಯದ ಕಡೆಗೆ ಹಾಗೂ ದಕ್ಷಿಣಗೋಳಾರ್ಧದಲ್ಲಿ ಆಗ್ನೇಯದಿಕ್ಕಿನಿಂದ ವಾಯುವ್ಯದ ಕಡೆಗೆ ಬೀಸುವುವು. ಇವುಗಳು ಶೀತವಾದ ಶುಷ್ಕ ಮಾರುತಗಳಾಗಿದ್ದು, ಧ್ರುವೀಯ ವಲಯದ ಹಿಮಾಚ್ಛಾದಿತ ಭಾಗಗಳಿಂದ ಬೀಸುತ್ತವೆ.

**2. ಋತುಮಾನ ಮಾರುತಗಳು (Seasonal Winds) :** ಇವುಗಳನ್ನು ನಿಯತಕಾಲಿಕ ಮಾರುತಗಳು, ಕ್ಲುಪ್ತ ಮಾರುತಗಳು ಎಂದೂ ಕರೆಯುವರು. ಇವುಗಳು ವರ್ಷದ ಬೇರೆ ಬೇರೆ ಋತುಗಳಲ್ಲಿ ತದ್ವಿರುದ್ಧ ದಿಕ್ಕಿನಿಂದ ಬೀಸುತ್ತವೆ. ಭಾರತದಲ್ಲಿ ಬೀಸುವ ಮಾನ್ಸೂನ್ ಮಾರುತಗಳು ನಿಯತಕಾಲಿಕ ಮಾರುತಗಳಿಗೆ

ಉತ್ತಮ ಉದಾಹರಣೆಯಾಗಿವೆ. ಭಾರತದಲ್ಲಿ ಬೇಸಿಗೆಯಲ್ಲಿ ನೈರುತ್ಯ ಮಾನ್ಸೂನ್ ಮಾರುತಗಳು ನೈರುತ್ಯದಿಕ್ಕಿನಿಂದ ಈಶಾನ್ಯದ ಕಡೆಗೆ ಬೀಸುತ್ತವೆ. ಇವುಗಳು ಜೂನ್ ತಿಂಗಳಿನಿಂದ ಸೆಪ್ಟೆಂಬರ್‌ವರೆಗೆ ಬೀಸುತ್ತವೆ. ನಂತರ ಈಶಾನ್ಯದ ಮಾನ್ಸೂನ್ ಮಾರುತಗಳು ಸೆಪ್ಟಂಬರ್ ಅಂತ್ಯದಿಂದ ಡಿಸೆಂಬರ್ ಮಧ್ಯದವರೆಗೆ ಈಶಾನ್ಯದಿಂದ ನೈರುತ್ಯದ ಕಡೆಗೆ ಬೀಸುವುವು.

**3. ಸ್ಥಳಿಯ ಮಾರುತಗಳು (Local Winds) :** ನಿರಂತರ ನಿಯತಕಾಲಿಕ ಮಾರುತಗಳು ಸ್ಥಳೀಯ ಉಷ್ಣಾಂಶ ಒತ್ತಡ, ತೇವಾಂಶದಲ್ಲಿ ವ್ಯತ್ಯಾಸಗಳ ಪರಿಣಾಮವಾಗಿ ಸ್ಥಳೀಯ ಮಾರುತಗಳುಂಟಾಗುತ್ತವೆ. ಇವುಗಳು ಪರ್ವತಶ್ರೇಣಿಗಳು, ಕಣಿವೆಗಳು ಮತ್ತು ಇತರೆ ಎತ್ತರದ ಸ್ಥಳಗಳನ್ನು ಹಾದುಹೋಗುವುದರಿಂದ ಬದಲಾವಣೆಗೊಂಡು ವಾಯುಪ್ರವಾಹಗಳುಂಟಾಗುತ್ತವೆ. ಪ್ರಮುಖ ಸ್ಥಳೀಯ ಮಾರುತಗಳಾವುವೆಂದರೆ, ಭೂಗಾಳಿ, ಸಮುದ್ರಗಾಳಿ, ಪರ್ವತಗಾಳಿ, ಕಣಿವೆಗಾಳಿ ಮತ್ತು ಇತರೆ ಕೆಲವು ಮಾರುತಗಳನ್ನು ಭಾರತದಲ್ಲಿ 'ಲೂ' ಎಂದು, ಯು.ಎಸ್.ಎ.ಯಲ್ಲಿ ಚಿನೂಕ್ ಅಥವಾ ಹಿಮಭಕ್ಷಕ ಎಂದು, ಆಲ್ಪ್ಸ್‌ಪರ್ವತಗಳಲ್ಲಿ ಫೋಹ್ನ್ ಎಂದು, ಫ್ರಾನ್ಸ್‌ನಲ್ಲಿ ಮಿಸ್ಟ್ರಲ್ ಎಂದು, ಸಹರಾ ಮರುಭೂಮಿಯಲ್ಲಿ ಸಿರಾಕ್ಕೊ ಎಂದು, ಆಸ್ಟ್ರೇಲಿಯದಲ್ಲಿ ಬ್ರಿಕ್ ಫೀಲ್ಡರ್ ಎಂದು, ಅಂಟಾರ್ಕ್ಟಿಕಾದಲ್ಲಿ ಬ್ಲಿಜರ್ಡ್ ಎಂದು ಕರೆಯುತ್ತಾರೆ.

**4. ಆವರ್ತ ಮತ್ತು ಪ್ರತ್ಯಾವರ್ತ ಮಾರುತಗಳು (Cyclones and Anti Cyclones):** ಇವುಗಳು ಅನಿಶ್ಚಿತವಾಗಿ ಬೀಸುತ್ತವೆ. ಸಾಮಾನ್ಯವಾಗಿ ಒತ್ತಡದ ಹಂಚಿಕೆಯಲ್ಲಿನ ಅತಿಹೆಚ್ಚು ವ್ಯತ್ಯಾಸದ ಕಾರಣದಿಂದ ಇವು ಬೀಸಲಾರಂಬಿಸುತ್ತವೆ. ಇವುಗಳು ಬೀಸುವ ಅವಧಿ ಅಲ್ಪಕಾಲಿಕವಾದರೂ ಕೆಲವೊಮ್ಮೆ ಇವು ಅತ್ಯಂತ ಅಪಾಯಕಾರಿ ಮತ್ತು ವಿನಾಶಕಾರಿಯಾದವು.

**ಎ)ಆವರ್ತ ಮಾರುತಗಳು:** ಇವುಗಳನ್ನು ಸಾಮಾನ್ಯವಾಗಿ 'ಚಂಡಮಾರುತ' ಗಳೆಂದೂ ಸಹ ಕರೆಯುವರು. ಕೆಲವು ಸನ್ನಿವೇಶಗಳಲ್ಲಿ ಅತ್ಯಂತ ಕಡಿಮೆ ಒತ್ತಡ ಕೇಂದ್ರದ ಸುತ್ತಲೂ ಹೆಚ್ಚು ಒತ್ತಡ ಪರಿಸ್ಥಿತಿಯಿರುವುದು. ಇದರಿಂದ ಮಾರುತಗಳು ಹೆಚ್ಚು ಒತ್ತಡ ವಲಯದಿಂದ ಕಡಿಮೆ ಒತ್ತಡ ಕೇಂದ್ರದ ಕಡೆಗೆ ವೃತ್ತಾಕಾರವಾಗಿ ಬೀಸುತ್ತವೆ. ಇವುಗಳೇ ಆವರ್ತ ಮಾರುತಗಳು. ಉತ್ತರಗೋಳಾರ್ಧದಲ್ಲಿ ಆವರ್ತಮಾರುತಗಳು ಕಡಿಮೆ ಒತ್ತಡ ಕೇಂದ್ರದ ಸುತ್ತಲೂ ಗಡಿಯಾರದ ಮುಳ್ಳಿನ ಚಲನೆಯ ದಿಕ್ಕಿಗೆ ವಿರುದ್ಧವಾಗಿ ಅಂದರೆ ಬಲದಿಂದ ಎಡಕ್ಕೆ ಬೀಸುತ್ತವೆ. ಇದಕ್ಕೆ ತದ್ವಿರುದ್ಧವಾಗಿ ದಕ್ಷಿಣಗೋಳಾರ್ಧದಲ್ಲಿ ಇವು ಗಡಿಯಾರದ ಮುಳ್ಳಿನ ಚಲನೆಗೆ ಅನುಗುಣವಾಗಿ ಅಂದರೆ ಎಡದಿಂದ ಬಲಕ್ಕೆ ಬೀಸುತ್ತದೆ. ಆವರ್ತ ಮಾರುತಗಳಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ:

- **ಉಷ್ಣವಲಯದ ಆವರ್ತ ಮಾರುತಗಳು:** ಇವುಗಳು ಉಷ್ಣವಲಯದಲ್ಲಿ ಮಾತ್ರ ಕಂಡುಬರುತ್ತವೆ. ಇವುಗಳು ಅತ್ಯಂತ ಪ್ರಬಲವಾಗಿದ್ದು ವಿಧ್ವಂಸಕಾರಿಯಾದವು.

- **ಸಮಶೀತೋಷ್ಣವಲಯದ ಆವರ್ತ ಮಾರುತಗಳು:** ಇವುಗಳು ಸಮಶೀತೋಷ್ಣವಲಯದಲ್ಲಿ ಕಂಡುಬರುತ್ತವೆ. ಉಷ್ಣವಲಯ ಆವರ್ತ ಮಾರುತಗಳಿಗೆ ಹೋಲಿಸಿದರೆ ಇವುಗಳು ಹೆಚ್ಚು ಪ್ರಬಲವಾದವುಗಳಲ್ಲ. ಇವುಗಳಿಂದ ಆಗುವ ಹಾನಿಯೂ ಸಹ ಕಡಿಮೆ.

ಆವರ್ತ ಮಾರುತಗಳನ್ನು ವಿವಿಧ ಪ್ರದೇಶಗಳಲ್ಲಿ ವಿವಿಧ ಹೆಸರುಗಳಿಂದ ಕರೆಯುವರು. ಉದಾ: ಚೀನಾ ಮತ್ತು ಜಪಾನಿನಲ್ಲಿ– ಟೈಫೂನ್, ಅಮೆರಿಕ ಮತ್ತು ಮೆಕ್ಸಿಕೊ –ಹರಿಕೇನ್ ಆಸ್ಟ್ರೇಲಿಯಾ–ವಿಲ್ಲಿ ವಿಲ್ಲೀಸ್, ಭಾರತ–ಸೈಕ್ಲೋನ್, ರಷ್ಯಾ –ವಿರ್ಲ್‌ಪೂಲ್ ಇತ್ತೀಚಿನ ಕೆಲವು ವರ್ಷಗಳಲ್ಲಿ ಭಾರತವು ಕೆಲವು ಪ್ರಭಲವಾದ ಅವರ್ತ ಮಾರುತಗಳನ್ನು ದಾಖಲಿಸಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬೋಲಾ, ನರ್ಗೀಸ್, ನಿಶಾ, ಐಲಾ, ಲೈಲಾ, ಜಿಜಿಲ, ಜಲ್ ಥೇಸ್ ಇತ್ಯಾದಿ.

**ಬಿ)ಪ್ರತ್ಯಾವರ್ತ ಮಾರುತಗಳು:** ಇವುಗಳಲ್ಲಿನ ಪರಿಸ್ಥಿತಿ ಆವರ್ತ ಮಾರುತಗಳಿಗೆ ತದ್ವಿರುದ್ಧ. ಪ್ರತ್ಯಾವರ್ತ ಮಾರುತಗಳು ತಮ್ಮ ಹೆಚ್ಚು ಒತ್ತಡ ಕೇಂದ್ರದಿಂದ ಕಡಿಮೆ ಒತ್ತಡದ ಸುತ್ತಲಿನ ಪ್ರದೇಶದ ಕಡೆಗೆ ಬೀಸುತ್ತವೆ. ಇದರಿಂದ ಸುತ್ತಮುತ್ತಲಿನ ಕಡೆಗೆ ಮಾರುತಗಳು ನಿಧಾನವಾಗಿ ಬೀಸುತ್ತವೆ. ಉತ್ತರಗೋಳಾರ್ಧದಲ್ಲಿ

ಪ್ರತ್ಯಾವರ್ತ ಮಾರುತಗಳ ದಿಕ್ಕು ಗಡಿಯಾರದ ಮುಳ್ಳಿನ ದಿಕ್ಕಿಗೆ ಅನುಗುಣವಾಗಿರುವುದು. ಇದಕ್ಕೆ ಪ್ರತಿಯಾಗಿ ದಕ್ಷಿಣಗೋಳಾರ್ಧದಲ್ಲಿ ಇವುಗಳು ಗಡಿಯಾರದ ಮುಳ್ಳಿನ ದಿಕ್ಕಿಗೆ ವಿರುದ್ಧವಾಗಿ ಬಲದಿಂದ ಎಡಕ್ಕೆ ಬೀಸುತ್ತವೆ.




**ಆವರ್ತ ಮತ್ತು ಪ್ರತ್ಯಾವರ್ತ ಮಾರುತಗಳು**



ವಾಯುವಿನಲ್ಲಿರುವ 'ನೀರಾವಿ' ಅಥವಾ ತೇವಾಂಶದ ಪ್ರಮಾಣವನ್ನು **'ಆರ್ದ್ರತೆ'** ಎನ್ನುವರು. ಆರ್ದ್ರತೆಯನ್ನು ಅಳೆಯಲು ಆರ್ದ್ರತಾಮಾಪಕವನ್ನು ಉಪಯೋಗಿಸುವರು. (Hygrometer or Psychrometer)

**ವಿಧಗಳು:** ವಾಯುಮಂಡಲದಲ್ಲಿರುವ ಆರ್ದ್ರತೆಯ ಪ್ರಮಾಣವನ್ನು ವಿವಿಧ ರೀತಿಯಲ್ಲಿ ತಿಳಿಸಲಾಗುವುದು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಸಮಗ್ರ ಆರ್ದ್ರತೆ, ಸಾಪೇಕ್ಷ ಆರ್ದ್ರತೆ ಮತ್ತು ನಿರ್ದಿಷ್ಟ ಆರ್ದ್ರತೆ.

- **ಸಮಗ್ರ ಆರ್ದ್ರತೆ (Absolute humidity):** ಒಂದು ನಿರ್ದಿಷ್ಟ ಪ್ರಮಾಣದ ಗಾಳಿಯಲ್ಲಿರುವ ಒಟ್ಟು ತೇವಾಂಶವನ್ನು ಸಮಗ್ರ ಆರ್ದ್ರತೆಯೆಂದು ಕರೆಯುವರು. ಈ ರೀತಿಯ ತೇವಾಂಶದ ಅಳತೆ ಹೆಚ್ಚು ಉಪಯುಕ್ತವಲ್ಲ. ಏಕೆಂದರೆ ಇದರಲ್ಲಿ ಉಷ್ಣಾಂಶವನ್ನು ಪರಿಗಣಿಸುವುದಿಲ್ಲ.

- **ಸಾಪೇಕ್ಷ ಆರ್ದ್ರತೆ (Relative Humidity):** ಇದು ವಾಯು ಹೊಂದಿರುವ ತೇವಾಂಶ ಮತ್ತು ಆ ನಿರ್ದಿಷ್ಟ ಉಷ್ಣಾಂಶದ ಮಟ್ಟದಲ್ಲಿ ವಾಯುವು ಹಿಡಿದಿರಿಸಿಕೊಳ್ಳಬಹುದಾದ ಗರಿಷ್ಠ ಪ್ರಮಾಣದ ತೇವಾಂಶ ಇವುಗಳ ಅನುಪಾತವೇ ಸಾಪೇಕ್ಷ ಆರ್ದ್ರತೆಯಾಗಿದೆ. ಇದನ್ನು ಶೇಕಡಾವಾರು ರೀತಿಯಲ್ಲಿ ತಿಳಿಸಲಾಗುವುದು.

$$\text{ಸಾಪೇಕ್ಷ ಆರ್ದ್ರತೆ} = \frac{\text{ವಾಯುವಿನಲ್ಲಿರುವ ವಾಸ್ತವ ತೇವಾಂಶ}}{\text{ನಿರ್ದಿಷ್ಟ ಉಷ್ಣಾಂಶದಲ್ಲಿ ವಾಯು ಹೊಂದಬಹುದಾದ ಗರಿಷ್ಠ ತೇವಾಂಶ}} \times 100$$

- **ನಿರ್ದಿಷ್ಟ ಆರ್ದ್ರತೆ (Specific Humidity):** ನಿರ್ದಿಷ್ಟ ಪ್ರಮಾಣದ ವಾಯುವಿನಲ್ಲಿ ಕಂಡುಬರುವ ವಾಸ್ತವವಾದ ನೀರಾವಿಯ ಮೊತ್ತವಾಗಿದೆ.

### ಮೋಡಗಳು (Clouds)

ವಾಯುಮಂಡಲದ ಉಷ್ಣಾಂಶವು ಕಡಿಮೆಯಾದಾಗ, ಅದರಲ್ಲಿನ ಜಲಾಂಶವು ಘನೀಕರಣಗೊಂಡು ನಿರ್ಮಾಣವಾಗುವ ಸಣ್ಣ ಸಣ್ಣ ನೀರಿನಹನಿಗಳು ಅಥವಾ ಹಿಮಕಣಗಳ ರಾಶಿಯನ್ನು 'ಮೋಡ' ಗಳೆನ್ನುವರು. ಇವು ಭೂಮಿಯ ಮೇಲ್ಮೈನಿಂದ ಎತ್ತರದಲ್ಲಿರುತ್ತವೆ.

**ಮೋಡಗಳ ವಿಧಗಳು :** ಮೋಡಗಳನ್ನು ಅವುಗಳ ಆಕಾರ, ಎತ್ತರ ಮತ್ತು ಇತರ ಲಕ್ಷಣಗಳ

ಆಧಾರದಿಂದ ಮೂರು ವಿಧಗಳಾಗಿ ವಿಂಗಡಿಸಬಹುದು. ಇವುಗಳೆಂದರೆ :

● **ಪದರು ಮೋಡಗಳು (Stratus Clouds):** ಇವುಗಳು ವಾಯುಮಂಡಲದಲ್ಲಿ ಅತ್ಯಂತ ಕೆಳಮಟ್ಟದಲ್ಲಿರುತ್ತವೆ. ಭೂಮಿಯ ಮೇಲ್ಮೈನಿಂದ 2.ಕಿ.ಮೀ. ಗಳಷ್ಟು ಎತ್ತರದವರೆಗೆ ಇವುಗಳು ಕಂಡು ಬರುತ್ತವೆ. ಇವು ತೆಳುವಾದ ಹಾಳೆ ಅಥವಾ ವಿಸ್ತಾರವಾದ ಪದರುಗಳಂತೆ ಕಾಣುತ್ತವೆ. ಪದರು ಮೋಡಗಳು ಉತ್ತಮ ಹವಾಮಾನಕ್ಕೆ ಸಹಕಾರಿಯಾಗಿದ್ದು ಅಲ್ಪ ಮಳೆಯನ್ನು ಸುರಿಸುತ್ತದೆ.

● **ರಾಶಿ ಮೋಡಗಳು (Cumulus Clouds):** ರಾಶಿ ಮೋಡಗಳು ಊರ್ಧ್ವಮುಖವಾಗಿ ಬೆಳೆದಿದ್ದು ಇದರ ಮೇಲ್ಮೈ ಗೋಪುರಾ, ಬಾಗಿರುವುದರಿಂದ ಹೂಕೋಸಿನ ರಚನೆಯನ್ನು ಹೋಲುತ್ತದೆ. ಇವುಗಳು ಮಳೆತರುವ ಮೋಡಗಳಾಗಿವೆ. ಈ ಮೋಡಗಳು ಉಣ್ಣೆಯ ಗುಡ್ಡೆಯಂತೆ ಕಂಡು ಬರುವುದರಿಂದ ಇವುಗಳನ್ನು 'ಉಣ್ಣೆಯ ಗುಡ್ಡೆ' ಎಂತಲೂ ಕರೆಯುವರು. ಇವುಗಳು ಬಿಳಿಯ ಬಣ್ಣದಿಂದ ಕಪ್ಪು ಬಣ್ಣದವರೆಗೂ ಕಂಡು ಬರುತ್ತವೆ. ಇವುಗಳು ಸಂಪೂರಿತಗೊಂಡಾಗ ಮಳೆಯನ್ನು ನೀಡುತ್ತವೆ.

● **ಹಿಮಕಣ ಮೋಡಗಳು (Cirrus Clouds):** ಇವುಗಳು ವಾಯುಮಂಡಲದಲ್ಲಿ ಅತಿ ಹೆಚ್ಚು ಎತ್ತರದಲ್ಲಿ ಅಂದರೆ 6 ಕಿ.ಮೀ.ಗಳಿಗಿಂತ ಎತ್ತರದಲ್ಲಿರುತ್ತವೆ. ಈ ಮೋಡಗಳು 'ಗುಂಗುರುಕೂದಲ'ನ್ನು ಹೋಲುತ್ತಿದ್ದು ರೆಕ್ಕೆ ಅಥವಾ ನಾರನ್ನು ಹೊಂದಿರುವಂತೆ ಕಾಣುತ್ತವೆ. ಇದು ಹಿತಕರವಾದ ಹವಾಮಾನ ಸ್ಥಿತಿಯನ್ನು ಸೂಚಿಸುತ್ತದೆ ಹಾಗೂ ಈ ಮೋಡಗಳಲ್ಲಿ ಪ್ರಕಾಶಮಾನವಾಗಿ ಸೂರ್ಯ ಬೆಳಗುತ್ತಾನೆ. ಗಾಳಿಯಲ್ಲಿ ಈ ಮೋಡಗಳು ಹಿಂಜಿದ ಅರಳೆಯಂತೆ ತೇಲುತ್ತವೆ. ಇವುಗಳ ಜನಪ್ರಿಯ ಹೆಸರು 'ಕುದುರೆಬಾಲ'.

● **ರಾಶಿವೃಷ್ಟಿ ಮೋಡಗಳು (Nimbus) :** ಈ ಮೋಡಗಳು ಮಳೆತರುವ ಮೋಡಗಳಾಗಿದ್ದು ಕೆಳಮಟ್ಟದಲ್ಲಿರುತ್ತವೆ. ಈ ಮೋಡಗಳು ಪದರು ಅಥವಾ ರಾಶಿಮೋಡಗಳ ಆಕಾರದಲ್ಲಿರುತ್ತವೆ. ಇವು ಹೆಚ್ಚು ಮಳೆ ಮತ್ತು ಹಿಮಮಳೆಯನ್ನು ಸುರಿಸುತ್ತವೆ. ವೃಷ್ಟಿಪದರು ಮೋಡಗಳು ದಪ್ಪವಾಗಿದ್ದು ಅಧಿಕ ಮಳೆತರುವ ಮೋಡಗಳಾಗಿವೆ.



ಮೋಡಗಳ ವಿಧಗಳು

**ಮಳೆ (Rain)**

ವಾಯುಮಂಡಲದಲ್ಲಿ ಜಲಾಂಶವು ಘನೀಕರಣಹೊಂದಿ ಭೂಮಿಯನ್ನು ತಲುಪುವ ನೀರಿನ ಹನಿಗಳನ್ನು 'ಮಳೆ' ಎಂದು ಕರೆಯುವರು. ಮಳೆಯ ಪ್ರಮಾಣವನ್ನು ಮಳೆಯ ಮಾಪಕದಿಂದ (Rain-guage) ಅಳೆಯುವರು. ಮಳೆಯ ಪ್ರಮಾಣವನ್ನು ಮೀ.ಮೀ. ಅಥವಾ ಅಂಗುಲಗಳಲ್ಲಿ ತಿಳಿಸುವರು.

**ಮಳೆಯ ವಿಧಗಳು:** ಮಳೆಯು ಮೂರು ರೀತಿಯಲ್ಲಿ ಉಂಟಾಗುವುದು, ಅವುಗಳೆಂದರೆ ಪರಿಸರಣ ಮಳೆ, ಪರ್ವತ ಮಳೆ ಮತ್ತು ಆವರ್ತ ಮಳೆ.

**ಪರಿಸರಣ ಮಳೆ: (Con- Vectional Rainfall)** ವಾಯು ಮೇಲ್ಮುಖವಾಗಿ ಪ್ರಚಲನ ಪ್ರವಾಹಗಳ ರೂಪದಲ್ಲಿ ಮೇಲೆರುವುದರಿಂದ ಉಂಟಾಗುವ ಮಳೆಯನ್ನು 'ಪರಿಸರಣಮಳೆ' ಎಂದು ಕರೆಯುವರು. ಉಷ್ಣಾಂಶವು ಹೆಚ್ಚಾಗಿರುವ ಸನ್ನೀವೇಶಗಳಲ್ಲಿ ವಾಯು ಬಿಸಿಯಾಗಿ ಮೇಲ್ಮುಖವಾಗಿ ಚಲಿಸುವುದು. ಅನಂತರ ಸಾಕಷ್ಟು ಎತ್ತರವನ್ನು ತಲುಪಿ ತಂಪಾಗಿ ಅದರಲ್ಲಿರುವ ಜಲಾಂಶವು ಹನಿಗಳಾಗಿ ವಿಸರ್ಜನೆಗೊಳ್ಳುವ ಮೂಲಕ ಮಳೆ ಬೀಳುವುದು. ಇದೇ ಪರಿಸರಣ ಮಳೆ. ಈ ರೀತಿ ಮಳೆಯು ಸಮಭಾಜಕ ವೃತ್ತ ವಲಯದಲ್ಲಿ ಹಾಗೂ ಉಷ್ಣವಲಯದ ಭೂ ಭಾಗಗಳಲ್ಲಿ ಬೇಸಿಗೆಯಲ್ಲಿ ಸಾಮಾನ್ಯ. ಸಮಭಾಜಕ ವೃತ್ತ ಪ್ರದೇಶಗಳಲ್ಲಿ ಇದನ್ನು 'ಅಪರಾಹ್ನ ಮಳೆ', ಎನ್ನುವರು. ಇದು ಹೆಚ್ಚಾಗಿ ಗುಡುಗು ಮಿಂಚುಗಳಿಂದ ಕೂಡಿದ್ದು ಮಧ್ಯಾಹ್ನದ ನಂತರ ಉಂಟಾಗುತ್ತದೆ.




**ಪರಿಸರಣ ಮಳೆ**

**ಪರ್ವತ ಮಳೆ (Orographic Rainfall):** ಇದನ್ನು ಆರೋಹ ಮಳೆ ಹಾಗೂ ಭೂಸ್ವರೂಪ ಮಳೆಯೆಂದೂ ಸಹ ಕರೆಯುವರು. ತೇವಾಂಶವನ್ನು ಹೊಂದಿರುವ ವಾಯುವು ಅಡ್ಡಲಾಗಿರುವ ಪರ್ವತಗಳಿಂದ ತಡೆಯಲ್ಪಟ್ಟಾಗ ಅದು ಮೇಲೆರುವುದು. ಎತ್ತರಕ್ಕೆ ಏರಿದಂತೆ ಗಾಳಿಯು ತಂಪಾಗಿ ಅದರಲ್ಲಿರುವ ಜಲಾಂಶವು ಘನಿಕರೀಸಿ ಮಳೆ ಬೀಳುವುದು. ಹೀಗೆ ಪರ್ವತಗಳಿಂದ ಉಂಟಾಗುವ ಮಳೆಯೇ ಪರ್ವತ ಮಳೆ ಅಥವಾ ಆರೋಹ ಮಳೆ. ಮಳೆ ಮಾರುತಗಳಿಗೆ ಎದುರಾಗಿರುವ ಪರ್ವತ ಭಾಗವು ಹೆಚ್ಚು ಮಳೆಪಡೆಯುವುದು, ನಂತರ ಗಾಳಿಗೆ ಮರೆಯಾಗಿರುವ ಪರ್ವತದ ಮತ್ತೊಂದು




**ಪರ್ವತ ಮಳೆ**

ಭಾಗದಲ್ಲಿ ಗಾಳಿಯು ಕೆಳಗಿಳಿಯುವುದು. ಇದರಿಂದ ಪರ್ವತದ ಈ ಭಾಗದಲ್ಲಿ ಮಳೆ ಕಡಿಮೆ. ಇದನ್ನೇ ಮಳೆ ನೆರಳಿನ ಪ್ರದೇಶ (Rainshadow Region) ಎಂದು ಕರೆಯುವರು. ಉದಾ: ಮಂಗಳೂರು–ಗಾಳಿ ಎದುರಾಗಿರುವ ಭಾಗ, ಹಾಸನ– ಗಾಳಿಗೆ ಮರೆಯಾಗಿರುವ ಮಳೆನರಳಿನ ಪ್ರದೇಶ.

**ಆವರ್ತಮಳೆ (Cyclonic Rainfall):** ಉಷ್ಣವಲಯದ ಆವರ್ತ ಮಾರುತಗಳಲ್ಲಿ ಗಾಳಿಯು ವೃತ್ತಕಾರವಾಗಿ ಮೇಲೆರುವುದು. ಇದರಿಂದ ಗಾಳಿಯಲ್ಲಿರುವ ತೇವಾಂಶವು ಘನೀಭವಿಸಿ ಧಾರಾಕಾರವಾಗಿ ಮಳೆ ಸುರಿಯುವುದು. ಇದಕ್ಕೆ ಬದಲಾಗಿ ಸಮಶೀತೋಷ್ಣ ವಲಯದ ಆವರ್ತ ಮಾರುತಗಳಲ್ಲಿ ಹಗುರವಾದ ಉಷ್ಣ ವಾಯುರಾಶಿಯು ಭಾರವಾದ ಶೀತವಾಯು ರಾಶಿಯ ಮೇಲೆರುವುದು. ಉಷ್ಣವಾಯುರಾಶಿ ಸಾಕಷ್ಟು ಮೇಲೇರಿ ಜಲಾಂಶವು ಘನೀಭವಿಸಿ ಮಳೆ ಸುರಿಯುವುದು. ಉಷ್ಣ ಮತ್ತು ಶೀತವಾಯು ರಾಶಿಗಳ ನಡುವಿನ ವಲಯವನ್ನು **'ವಾಯುಮುಖ'** (Front) ಎನ್ನುವರು. ಇದರಿಂದ ಸಮಶೀತೋಷ್ಣ ವಲಯದ ಆವರ್ತ ಮಾರುತಗಳ ಮಳೆಯನ್ನು 'ವಾಯು ಮುಖ ಮಳೆಯೆಂದು ಸಹ ಕರೆಯುವರು.

**ಮಳೆಯ ಹಂಚಿಕೆ :** ಭೂಮಿಯ ಮೇಲಿನ ಮಳೆಯ ಹಂಚಿಕೆಯು ಒಂದು ಪ್ರದೇಶದ ಸ್ಥಾನ ಮತ್ತು ವಾಯುಗುಣ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಪ್ರಪಂಚದಲ್ಲಿ ಅಧಿಕಮಳೆ ಪಡೆಯುವ ಬಹುಮುಖ್ಯವಾದ ಪ್ರದೇಶಗಳೆಂದರೆ ಸಮಭಾಜಕವೃತ್ತ ಪ್ರದೇಶ, ಉಪ ಉಷ್ಣವಲಯದ ಪೂರ್ವದ ಅಂಚಿನಭಾಗ, ಪಶ್ಚಿಮದ ಅಂಚಿನ $40^0$ ಮತ್ತು $60^0$ ಉತ್ತರ ಮತ್ತು ದಕ್ಷಿಣ ಅಕ್ಷಾಂಶಗಳ ಮಧ್ಯದ ಪ್ರದೇಶಗಳು ಹಾಗೂ ವಿರಳವಾಗಿ ಮಳೆ ಪಡೆಯುವ ಪ್ರದೇಶಗಳೆಂದರೆ, ದ್ರುವ ಪ್ರದೇಶಗಳು, ಉಪ ಉಷ್ಣವಲಯದ ಪಶ್ಚಿಮಭಾಗ ಹಾಗೂ ಉಷ್ಣವಲಯ ಮತ್ತು ಸಮಶೀತೋಷ್ಣವಲಯದ ಮರುಭೂಮಿಗಳು.



**ನಿಮಗಿದು ಗೊತ್ತಿದೆಯೇ?**

1. ಭಾರತದ ಮೇಘಾಲಯ ರಾಜ್ಯದ ಮೌಸಿನ್ ರಾಂ ಒಂದು ವರ್ಷದಲ್ಲಿ 1140 ಸೆಂ.ಮೀ. ಗಳಷ್ಟು ಮಳೆಯನ್ನು ದಾಖಲಿಸಿದೆ. ಇದು ಭೂಮಿಯ ಅತ್ಯಂತ ತೇವಯುತ ಸ್ಥಳ.

2. ಕರ್ನಾಟಕದ ಆಗುಂಬೆಯನ್ನು 'ದಕ್ಷಿಣ ಭಾರತದ ಮೌಸಿನ್‌ರಾಂ' ಎನ್ನುವರು.

3. ಭಾರತದ ರಾಜಸ್ಥಾನದ ರೂಯ್ಲಿ ವರ್ಷದಲ್ಲಿ ಕೇವಲ 8 ಸೆಂ.ಮೀ ಮಾತ್ರ ಮಳೆ ಪಡೆಯುವುದು.

4. ಚಿತ್ರದುರ್ಗ ಜಿಲ್ಲೆಯ 'ನಾಯಕನಹಟ್ಟಿ' ಯು ಕರ್ನಾಟಕದ ಅತ್ಯಂತ ಒಣಪ್ರದೇಶವಾಗಿದೆ.

5. ಭೂಮಿಯ ಮೇಲೆ ಕಳೆದ 200 ವರ್ಷಗಳಿಂದ ಮಳೆ ಬಾರದಿರುವ ಪ್ರದೇಶವೆಂದರೆ ಚಿಲಿ ದೇಶದ ಅಟಕಾಮ ಮರುಭೂಮಿ.

**ಹವಾಮಾನ ಮತ್ತು ವಾಯುಗುಣ (Weather and Climate):**

ಒಂದು ಸ್ಥಳದ ಅಲ್ಪಾವಧಿಯ ವಾಯುಮಂಡಲದ ಪರಿಸ್ಥಿತಿಯನ್ನು ಹವಾವಾನ ಎನ್ನುವರು. ಉದಾ: ಮೋಡಯುಕ್ತ ಪ್ರಖರ ಬಿಸಿಲು, ಶುಭ್ರಹವಾಮಾನ. ಹವಾಮಾನದ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು 'ವಾತಾವರಣ ಶಾಸ್ತ್ರ' (**Meteorology**) ಎನ್ನುವರು.

ಒಂದು ಪ್ರದೇಶದ ದೀರ್ಘಾವಧಿಯ ಹವಾಮಾನದ ಸರಾಸರಿಯನ್ನು ವಾಯುಗುಣವೆನ್ನುವರು. ಉದಾ: ಸಮಭಾಜಕ ವೃತ್ತದ ವಾಯುಗುಣ, ತಂಡ್ರಾ ವಾಯುಗುಣ, ಮರುಭೂಮಿ ವಾಯುಗುಣ, ಮೆಡಿಟರೇನಿಯನ್ ವಾಯುಗುಣ ಮೊದಲಾದವು. ವಾಯುಗುಣದ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು 'ವಾಯುಗುಣಶಾಸ್ತ್ರ' ಎನ್ನುವರು.

ಒಂದು ಪ್ರದೇಶದ ವಾಯುಗುಣದ ಮೇಲೆ ಪ್ರಭಾವ ಬೀರುವ ಅಂಶಗಳೆಂದರೆ ಅಕ್ಷಾಂಶ, ಸಮುದ್ರ ಮಟ್ಟದಿಂದ ಇರುವ ಎತ್ತರ, ಮಾರುತಗಳು, ಸಮುದ್ರದಿಂದ ಇರುವ ದೂರ, ಭೂಮಿ ಮತ್ತು ಜಲರಾಶಿಗಳ ಹಂಚಿಕೆ, ಸಾಗರ ಪ್ರವಾಹಗಳು ಇತ್ಯಾದಿ.

## ಅಭ್ಯಾಸಗಳು

**I ಬಿಟ್ಟಿರುವ ಸ್ಥಳವನ್ನು ಭರ್ತಿ ಮಾಡಿರಿ.**

1 ವಾಯುಮಂಡಲದ ಎರಡು ಪ್ರಮುಖ ಅನಿಲಗಳೆಂದರೆ ________ಮತ್ತು__________ .

2 ವಾಯುಮಂಡಲದ ಅತ್ಯಂತ ಕೆಳಸ್ತರ __________ ಆಗಿದೆ.

3 ಸಮುದ್ರ ಮಟ್ಟದಲ್ಲಿ ವಾಯುಮಂಡಲದ ಸರಾಸರಿ ಒತ್ತಡವು __________ಆಗಿದೆ.

4 ಪಶ್ಚಿಮ ಮಾರುತಗಳನ್ನು __________ಎಂದೂ ಕರೆಯುತ್ತಾರೆ.

5 ಹವಾಮಾನದ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರ ________ ಆಗಿದೆ.

**II ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ವಾಯುಗೋಳ ಎಂದರೇನು ?

2 ವಾಯುಗೋಳದ ಪ್ರಮುಖ ಪದರುಗಳನ್ನು ಹೆಸರಿಸಿ.

3 ಓಜೋನ್ ಪದರದ ಪ್ರಾಮುಖ್ಯತೆಯೇನು?

4 ಶಾಂತವಲಯ ಎಂದರೇನು? ಅದು ಎಲ್ಲಿ ಕಂಡುಬರುತ್ತದೆ.

5 ನಿರಂತರ ಮಾರುತಗಳ ವಿಧಗಳನ್ನು ಹೆಸರಿಸಿ.

6 ಸ್ಥಳೀಯ ಮಾರುತಗಳೆಂದರೇನು ? ಯಾವುದಾದರೂ ಎರಡು ಉದಾಹರಣೆ ಕೊಡಿ?

7 ಮೋಡಗಳ ವಿಧಗಳನ್ನು ತಿಳಿಸಿ

8 ಹವಾಗುಣ ಮತ್ತು ವಾಯುಗುಣಕ್ಕಿರುವ ವ್ಯತ್ಯಾಸಗಳೇನು?

**III ಈ ಕೆಳಗಿನವುಗಳನ್ನು ಅರ್ಥೈಸಿ.**

1. ಆಯಾನವಲಯ

2. ಸಾಮಾನ್ಯ ಇಳಿಕೆಯದರ

3. ಶೀತವಲಯ

4. ಅಶ್ವಅಕ್ಷಾಂಶ

5. ಆರೋಹಮಳೆ (ಪರ್ವತಮಳೆ)

6. ವಾಯುಗುಣ ಶಾಸ್ತ್ರ

**IV ನೆನಪಿನಲ್ಲಿಡಬೇಕಾದ ಅಂಶಗಳು.**

1. ಸೂರ್ಯಜನ್ಯಶಾಖ
2. ಉಷ್ಣಾಂಶದ ವಿಪರ್ಯಾಯ
3. ಪವನವೇಗಮಾಪಕ
4. ನಾಲ್ವತ್ತರ ಅಬ್ಬರಗಾಳಿ
5. ವೃಷ್ಟಿಮೋಡಗಳು
6. ವಾತಾವರಣ ಶಾಸ್ತ್ರ.

**V ಚಟುವಟಿಕೆಗಳು.**

1. ಅಕ್ಷಾಂಶಗಳ ಆಧಾರದ ಮೇಲೆ ವಿವಿಧ ಉಷ್ಣಾಂಶವಲಯಗಳ ಚಿತ್ರ ಬರೆಯಿರಿ.
2. ಪ್ರಪಂಚದ ನಿರಂತರ ಮಾರುತಗಳ ಚಿತ್ರ ಬರೆದು ಗುರುತಿಸಿರಿ.





ಸ್ವತಂತ್ರ ಭಾರತದ ಗಣತಂತ್ರದ ಉದ್ದೇಶ ಎಲ್ಲರಿಗೂ ಸಮಾನತೆ, ಸ್ವಾತಂತ್ರ್ಯ, ನ್ಯಾಯ ಮತ್ತು ಸೋದರತ್ವವನ್ನು ಒದಗಿಸುವುದಾಗಿದೆ.

**ಡಾ|| ಬಿ. ಆರ್. ಅಂಬೇಡ್ಕರ್**

## ಅಧ್ಯಾಯ–4

# ಜಲಗೋಳ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ವಿವಿಧ ಜಲರಾಶಿಗಳ ಪರಿಚಯ ಮಾಡಿಕೊಳ್ಳುವುದು.
- ಸಾಗರ ತಳದ ಭೂಸ್ವರೂಪಗಳನ್ನು ತಿಳಿದುಕೊಳ್ಳುವುದು.
- ಸಾಗರ ಪ್ರವಾಹಗಳು ಮತ್ತು ಅವುಗಳ ವಿಧಗಳು ಹಾಗೂ ಸಾಗರಗಳ ಸಂರಕ್ಷಣೆ ಬಗ್ಗೆ ತಿಳಿಯುವುದು.
- ಭಾರತದ ನಕ್ಷೆಯಲ್ಲಿ ಸಮುದ್ರ, ಸಾಗರ, ಖಾರಿ, ಕೊಲ್ಲಿ ಜಲಸಂಧಿಗಳನ್ನು ಗುರುತಿಸುವುದು.

**ನೀರು :** ಜಲಚರಗಳ ಮತ್ತು ಕರಾವಳಿ ವಾಯುಗುಣದ ಮೂಲ



**ಜಲರಾಶಿಗಳ ಹಂಚಿಕೆ**

ಭೂಮಿಯನ್ನು ಸಾಮಾನ್ಯವಾಗಿ 'ನೀಲಿಗ್ರಹ' ಅಥವಾ 'ಜಲಾವೃತ ಗ್ರಹ' ವೆಂದೂ ಕರೆಯುವರು. ಇದಕ್ಕೆ ಕಾರಣ ಭೂಮೇಲ್ಮೈನ 70.78% ರಷ್ಟು ಭಾಗ ಅಂದರೆ 361 ದಶಲಕ್ಷ ಕಿ.ಮೀ ಪ್ರದೇಶವು ನೀರಿನಿಂದ ಆವರಿಸಿದೆ. ಪ್ರಪಂಚದ ಅತಿ ದೊಡ್ಡ ಜಲರಾಶಿಗಳೆಂದರೆ ಪೆಸಿಫಿಕ್ ಸಾಗರ, ಅಟ್ಲಾಂಟಿಕ್ ಸಾಗರ ಹಿಂದೂ ಮಹಾಸಾಗರ ಮತ್ತು ಉತ್ತರಧ್ರುವಸಾಗರ.

**ಸಾಗರ (Ocean) :** ಇವು ಆಳವಾದ ಮತ್ತು ವಿಸ್ತಾರವಾದ ಜಲರಾಶಿಗಳಾಗಿದ್ದು, ಭೂಖಂಡಗಳ ನಡುವೆ ಹಂಚಿಕೆಯಾಗಿವೆ. ಉದಾ: ಏಷ್ಯಾ, ಆಫ್ರಿಕಾ ಮತ್ತು ಆಸ್ಟ್ರೇಲಿಯಾಗಳ ನಡುವೆ ಇರುವ ಹಿಂದೂಮಹಾಸಾಗರ, ಉತ್ತರ ಅಮೇರಿಕ ಮತ್ತು ಯುರೋಪಿನ ನಡುವೆ ಇರುವ ಅಟ್ಲಾಂಟಿಕ ಸಾಗರ.




**ಸಮುದ್ರ (Sea):** ಇವು ಸಾಗರದ ಭಾಗಗಳಾಗಿದ್ದು, ಭೂಖಂಡಗಳಲ್ಲಿ ಒಳ ಚಾಚಿಕೊಂಡಿರುತ್ತವೆ. ಸಮುದ್ರವು ಸಾಗರಗಳ ವಿಸ್ತಾರಕ್ಕೆ ಹೋಲಿಸಿದರೆ ಚಿಕ್ಕದು. ಉದಾ ಅರಬ್ಬಿ ಸಮುದ್ರ, ಕ್ಯಾಸ್ಪಿಯನ್ ಸಮುದ್ರ, ಕೆಂಪು ಸಮುದ್ರ.

**ಖಾರಿ (Gulf)** ಇದು ಸಾಗರ ಅಥವಾ ಸಮುದ್ರದ ಕಿರಿದಾದ ನೀಳಭಾಗವಾಗಿದ್ದು ಭೂಭಾಗದೊಳಗೆ ಚಾಚಿರುವುದು. ಇವುಗಳು ಸಮುದ್ರಕ್ಕಿಂತ ಚಿಕ್ಕದಾಗಿದ್ದು ಗಾತ್ರ ಆಕಾರ ಮತ್ತು ಆಳದಲ್ಲಿ ಒಂದರಿಂದ ಮತ್ತೊಂದು ವ್ಯತ್ಯಾಸದಿಂದ ಕೂಡಿರುತ್ತವೆ. ಉದಾ : ಮನ್ನಾರ್‌ಖಾರಿ, ಪರ್ಷಿಯನ್‌ಖಾರಿ, ಮೆಕ್ಸಿಕೋಖಾರಿ.

**ಕೊಲ್ಲಿ (Bay):** ಪ್ರಾಯಶಃ ಭೂಭಾಗದಿಂದ ಸುತ್ತುವರಿಯಲ್ಪಟ್ಟ ಅರ್ಧವೃತ್ತಾಕಾರದ ಸಮುದ್ರಭಾಗವಾಗಿದ್ದು ಒಂದು ಕೊಲ್ಲಿಗೂ ಮತ್ತೊಂದು ಕೊಲ್ಲಿಗೂ ಆಳ, ವಿಸ್ತಾರ ಮತ್ತು ಗಾತ್ರದಲ್ಲಿ ವ್ಯತ್ಯಾಸಗಳಿರುತ್ತವೆ. ಉದಾ: ಬಂಗಾಳ ಕೊಲ್ಲಿ, ಬಿಸ್ಕೆಕೊಲ್ಲಿ, ಫಂಡಿಕೊಲ್ಲಿ, ಹಡ್ಸನ್‌ಕೊಲ್ಲಿ.

**ಜಲಸಂಧಿ (Strait):** ಎರಡು ವಿಶಾಲವಾದ ಸಮುದ್ರಗಳನ್ನು ಸಂಪರ್ಕಿಸುವ ಎರಡು ಭೂಭಾಗಗಳ ಮಧ್ಯದ ಕಿರಿದಾದ ಜಲಭಾಗವನ್ನು ಜಲಸಂಧಿ ಎನ್ನುವರು. ಉದಾ: ಪಾಕ್ ಜಲಸಂಧಿ, ಜಿಬ್ರಾಲ್ಟರ್ ಜಲಸಂಧಿ, ಬೇರಿಂಗ್ ಜಲಸಂಧಿ.

**ಭೂಸಂಧಿ (Isthmus):** ಇದನ್ನು 'ಭೂಕಂಠ' ವೆಂದೂ ಕರೆಯುವರು. ಇದು ಜಲಸಂಧಿಯ ವಿವರಣೆಗೆ ವಿರುದ್ಧವಾದುದು. ಇದರಲ್ಲಿ ಒಂದು ಕಿರಿದಾದ ಭೂ ಭಾಗವು ಎರಡು ದೊಡ್ಡ ಭೂರಾಶಿಗಳನ್ನು ಸಂಪರ್ಕಿಸುವುದು. ಭೂಸಂಧಿಗಳು ಸಾಗರ ಕಾಲುವೆಗಳನ್ನು ನಿರ್ಮಾಣಮಾಡಲು ಬಹುಮುಖ್ಯವಾದ ಸ್ಥಾನಗಳಾಗಿವೆ. ಉದಾ: ಏಶಿಯಾ ಮತ್ತು ಆಫ್ರಿಕಾ ಖಂಡಗಳ ನಡುವಿನ ಸೂಯೆಜ್ ಕಾಲುವೆ, ದಕ್ಷಿಣ ಮತ್ತು ಉತ್ತರ ಅಮೆರಿಕಾ ಖಂಡಗಳ ನಡುವಿನ ಪನಾಮ ಕಾಲುವೆ.



**ಸಾಗರ ತಳದ ಭೂ ಸ್ವರೂಪಗಳು (Relief of the Ocean Floor):**

ಭೂಭಾಗದಲ್ಲಿ ವಿವಿಧ ಬಗೆಯ ಭೂಸ್ವರೂಪಗಳು ಕಂಡುಬರುವಂತೆಯೇ ಸಾಗರ ತಳದಲ್ಲಿಯೂ ಹಲವಾರು ಬಗೆಯ ಭೂ ಸ್ವರೂಪಗಳಿವೆ. ಸಾಗರಗಳ ಮಹತ್ವವನ್ನು ತಿಳಿಯಬೇಕಾದರೆ ಸಾಗರ ತಳದ ಬಗ್ಗೆ ಪ್ರಮುಖವಾಗಿ ಭೂ ಸ್ವರೂಪಗಳ ಅಧ್ಯಯನ ಮಾಡಬೇಕು. ಭೂ ಸ್ವರೂಪಗಳ ಗುಣ ಲಕ್ಷಣಗಳನ್ನು ಆಧರಿಸಿ ಸಾಗರ ತಳವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ : ಖಂಡಾವರಣ ಪ್ರದೇಶ, ಖಂಡಾವರಣ ಇಳಿಜಾರು, ಆಳಸಾಗರ ಮೈದಾನ ಮತ್ತು ಸಾಗರ ತಗ್ಗುಗಳು.



ಸಾಗರ ಪ್ರದೇಶ

**1. ಖಂಡಾವರಣ ಪ್ರದೇಶ: (Continental Shelf):** ಸಾಗರ ಅಥವಾ ಸಮುದ್ರದ ಅಂಚಿನ ಹೆಚ್ಚು ಆಳವಿಲ್ಲದ ಭಾಗವನ್ನೇ ಖಂಡಾವರಣ ಪ್ರದೇಶವೆನ್ನುವರು. ಇದರ ಒಂದು ಕಡೆಗೆ ಸಮುದ್ರತೀರವಿದ್ದರೆ ಮತ್ತೊಂದು ಕಡೆ ಖಂಡಾವರಣ ಇಳಿಜಾರು ಇರುವುದು. ಈ ವಲಯದ ಸರಾಸರಿ ಆಳ 100 ಫ್ಯಾಥಮ್ ಗಳು (1 ಫ್ಯಾಥಮ್ =6 ಅಡಿ). ತೀರದಿಂದ ಸಮುದ್ರ ಕಡೆಗೆ ಬಂದಂತೆ ಆಳವು ಹೆಚ್ಚಾಗುವುದು. ಖಂಡಾವರಣ ಪ್ರದೇಶವು ಮೀನುಗಾರಿಕೆ, ಜಲಚರ ಕೃಷಿ, ನೌಕಾಯಾನ ಹಾಗೂ ಕಚ್ಚಾತೈಲಗಳ ಉತ್ಪಾದನೆಗೆ ಪ್ರಾಮುಖ್ಯತೆ ಪಡೆದಿದೆ.

**2. ಖಂಡಾವರಣ ಇಳಿಜಾರು (Continental Slope):** ಇದು ಸಾಗರತಳದ ಎರಡನೇ ಭಾಗವಾಗಿದ್ದು, ಕಡಿದಾದ ಇಳಿಜಾರಿನಿಂದ ಕೂಡಿದೆ. ಇದು ಖಂಡಾವರಣ ಪ್ರದೇಶ ಹಾಗೂ ಆಳಸಾಗರ ಮೈದಾನಗಳನ್ನು ಸಂಪರ್ಕಿಸುತ್ತದೆ. ಈ ವಲಯದಲ್ಲಿಯೇ ಸಾಗರದ ಕಂದರಗಳು (Submarine Canyons) ಕಂಡು ಬರುತ್ತವೆ.

**3. ಆಳಸಾಗರದ ಮೈದಾನ (Deep Sea Plain):** ಸಾಗರಗಳ ತಳದಲ್ಲಿ ವಿಸ್ತಾರವಾದ ಮೈದಾನ ವಿರುವುದು. ಇದನ್ನು ಆಳಸಾಗರ ಮೈದಾನ ಅಥವಾ 'ಅಬಿಸಲ್ ಮೈದಾನ' ವೆನ್ನುವರು. ಸಾಗರಗಳ ಭೂಸ್ವರೂಪ ವಿಭಾಗಗಳಲ್ಲೇ ಇದು ಅತಿ ವಿಸ್ತಾರವಾದುದು. ಈ ವಲಯದಲ್ಲಿಯೇ ಗುಡ್ಡಗಳಂತಿರುವ ಸಮುದ್ರ ಪರ್ವತಗಳು (Sea mounts) ಹಾಗೂ ಚಪ್ಪಟೆಯಾಗಿರುವ ಗುಡ್ಡಾಕಾರದ 'ಗುಯೋಟ್ಸ್' ಗಳು(guyots) ಕಂಡು ಬರುತ್ತವೆ.

**4. ಸಾಗರ ತಗ್ಗು ಮತ್ತು ಪ್ರಪಾತ (Ocean Deeps and Trenches):** ಸಾಗರ ತಗ್ಗುಗಳನ್ನು ಸಾಗರ ಪ್ರಪಾತಗಳೆಂದು ಕರೆಯುವರು. ಇವು ಸಾಗರಗಳಲ್ಲಿ ಅತ್ಯಂತ ಆಳವಾದ ಭಾಗಗಳು. ಫಿಲಿಫೈನ್ಸ್ ದ್ವೀಪಗಳ ಬಳಿಯಿರುವ ಚಾಲೆಂಜರ್ ತಗ್ಗು' 11033 ಮೀ. ಆಳವಾಗಿದ್ದು ಇದು ಪ್ರಪಂಚದಲ್ಲಿ ಅತಿ ಆಳವಾಗಿರುವ ಸ್ಥಳವಾಗಿದೆ. ಪೆಸಿಪಿಕ್ ಮಹಾಸಾಗರದ ಟೊಂಗ ಪ್ರಪಾತ, ಕೂರೈಲ್ ಪ್ರಪಾತ ಹಲವಾರು ಪ್ರಪಾತಗಳಾಗಿವೆ.

**ಸಾಗರದ ನೀರಿನ ಉಷ್ಣಾಂಶ ಮತ್ತು ಲವಣತೆ (Temperature and Salinity of Ocean Water)**

**ಉಷ್ಣಾಂಶ:** ಸಮುದ್ರ ಅಥವಾ ಸಾಗರದ ನೀರಿನ ಉಷ್ಣಾಂಶವು ವಿವಿಧ ಅಕ್ಷಾಂಶ ಹಾಗೂ ವಿವಿಧ ಆಳಗಳಲ್ಲಿ ಭಿನ್ನವಾಗಿರುವುದು. ಸಮಭಾಜಕವೃತ್ತದ ಸಮೀಪ ಉಷ್ಣವಲಯದ ಸಾಗರದ ನೀರು ಆರ್ಕ್ಟಿಕ ಮತ್ತು ಅಂಟಾರ್ಟಿಕ ವೃತ್ತಗಳಲ್ಲಿನ ನೀರಿಗಿಂತ ಹೆಚ್ಚು ಉಷ್ಣಾಂಶವನ್ನು ಹೊಂದಿದೆ. ಇದೇ ರೀತಿಯಲ್ಲಿ ಸಾಗರದ ನೀರಿನಲ್ಲಿ ಆಳಕ್ಕೆ ಹೋದಂತೆ ಉಷ್ಣಾಂಶವು ಕಡಿಮೆಯಾಗುವುದು. ಇದಕ್ಕೆ ಕಾರಣ ಸೂರ್ಯನ ಕಿರಣಗಳು ನೀರಿನಲ್ಲಿ 200 ಮೀ.ಗಳವರೆಗೆ ಮಾತ್ರ ಪ್ರವೇಶಿಸುತ್ತವೆ. ಈ ವಲಯದಲ್ಲಿಯೇ ಅನೇಕ ಬಗೆಯ ಜೀವಿಗಳು ಕಂಡುಬರುತ್ತವೆ.

**ಲವಣತೆ:** ಸಾಗರ ಅಥವಾ ಸಮುದ್ರದ ನೀರಿನಲ್ಲಿ ಕರಗಿರುವ ಉಪ್ಪಿನಾಂಶಗಳ ಪ್ರಮಾಣಗಳನ್ನು 'ಲವಣತೆ' ಎನ್ನುವರು. ನೀರಿನಲ್ಲಿ ಲವಣಾಂಶವು ಹೆಚ್ಚು ಕಂಡುಬರುವುದರಿಂದಲೇ ಸಮುದ್ರ ಹಾಗೂ ಸಾಗರದ ನೀರು ಉಪ್ಪಾಗಿರುವುದು. ಸಾಗರದ ನೀರಿನ ಲವಣತೆ $35/^{000}$ (ಅಂದರೆ 1000 ಭಾಗದಲ್ಲಿ 35 ಭಾಗ ಎಂದರ್ಥ) ಸಾಗರದ ನೀರು ಆವಿಯಾಗಿ ಅದರಲ್ಲಿರುವ ಲವಣಗಳು ಅಲ್ಲಿಯೇ ಉಳಿದಿರುವುದರಿಂದ ನೀರು ನಿರಂತರವಾಗಿ ಉಪ್ಪಾಗಿ ಪರಿಣಮಿಸುವುದು. ಲವಣತೆಯು ಉಷ್ಣವಲಯದಲ್ಲಿ ಹೆಚ್ಚಾಗಿದ್ದು, ಧ್ರುವ ಮತ್ತು ಸಮಭಾಜಕವೃತ್ತ ಪ್ರದೇಶಗಳಲ್ಲಿ ಕಡಿಮೆಯಿರುವುದು. ಅಧಿಕ ಶಾಖ ಬೀಳುವುದರಿಂದ ಸಮಭಾಜಕವೃತ್ತ ಪ್ರದೇಶದಲ್ಲಿ ಅಧಿಕ ಭಾಷ್ಪೀಭವನ ಮತ್ತು ಅಧಿಕಮಳೆಯಿಂದ ಲವಣತೆ ಕಡಿಮೆ ಪ್ರಮಾಣದಲ್ಲಿರುತ್ತದೆ.

**ಸಮುದ್ರದ ನೀರು ಏಕೆ ಉಪ್ಪಾಗಿರುವುದು?**

ಭೂಭಾಗಗಳಿಂದ ಹರಿದು ಸಮುದ್ರ ಅಥವಾ ಸಾಗರವನ್ನು ಸೇರುವ ನದಿಗಳ ನೀರು ಹಲವಾರು ಬಗೆಯ ಲವಣಗಳನ್ನು ಕರಿಗಿಸಿ ದ್ರಾವಣದ ರೂಪದಲ್ಲಿ ತನ್ನೊಡನೆ ತರುವುದು. ಸಾಗರ-ಸಮುದ್ರದ ನೀರು ಉಷ್ಣಾಂಶದಿಂದ ಆವಿಯಾಗಿ ವಾಯುಮಂಡಲವನ್ನು ಸೇರುವುದು. ಆದರೆ ನೀರಿನಲ್ಲಿದ್ದ ಲವಣವು ಸಮುದ್ರದಲ್ಲಿಯೇ ಉಳಿಯುತ್ತಾ ಹೋಗುವುದು. ಈ ಪ್ರಕ್ರಿಯೆ ದೀರ್ಘಕಾಲದಿಂದಲೂ ಮುಂದುವರಿದಿರುವುದರಿಂದ ಸಾಗರ, ಸಮುದ್ರಗಳಲ್ಲಿ ಲವಣಗಳು ಸಂಗ್ರಹವಾಗಿದ್ದು ಸಮುದ್ರನೀರು ಉಪ್ಪಾಗಿದೆ.

**ಪ್ರಪಂಚದಲ್ಲಿ ಅತಿ ಹೆಚ್ಚು ಲವಣತೆ ಹೊಂದಿರುವ ಕೆಲವು ಜಲಭಾಗಗಳು .**

1. ಟರ್ಕಿಯ ವ್ಯಾನ್‌ಸರೋವರ-330/ºººº
2. ಮೃತ ಸಮುದ್ರ ; (ಜೋರ್ಡಾನ್)-300/ºººº
3. ಸಾಂಬಾರ್ ಸರೋವರ, (ಭಾರತ)-265/ºººº
4. ಕೆಂಪು ಸಮುದ್ರ (ಏಷ್ಯಾ ಮತ್ತು ಆಫ್ರಿಕಾ)-240/ºººº

**ಸಾಗರ ಪ್ರವಾಹಗಳು (Ocean Currents)**

ಸಾಗರದ ನೀರು ಮೂರು ಪ್ರಮುಖ ಚಲನೆಗಳನ್ನು ಒಳಗೊಂಡಿದೆ. ಅವುಗಳೆಂದರೆ ಅಲೆಗಳು, ಪ್ರವಾಹಗಳು ಮತ್ತು ಉಬ್ಬರ ವಿಳಿತಗಳು. ನಿಶ್ಚಿತ ದಿಕ್ಕಿನಲ್ಲಿ ನಿರಂತರವಾಗಿ ಹರಿಯುವ ಸಾಗರದ ಮೇಲ್ಮೈ ನೀರನ್ನು 'ಸಾಗರ ಪ್ರವಾಹ' ಗಳೆಂದು ಕರೆಯುವರು. ಸಾಗರ ಪ್ರವಾಹಗಳಲ್ಲಿ ಎರಡು ವಿಧಗಳಿವೆ.

**ಉಷ್ಣ ಸಾಗರ ಪ್ರವಾಹಗಳು:** ಇವುಗಳು ಸಮಭಾಜಕ ವೃತ್ತ ಪ್ರದೇಶಗಳಲ್ಲಿ ಪ್ರಾರಂಭವಾಗಿ ಉಪ ಧ್ರುವೀಯ ಪ್ರದೇಶಗಳ ಕಡೆಗೆ ಹರಿಯುತ್ತವೆ.

**ಶೀತಸಾಗರ ಪ್ರವಾಹಗಳು:** ಇವುಗಳು ದ್ರುವಪ್ರದೇಶದಲ್ಲಿ ಪ್ರಾರಂಭವಾಗಿ ಸಮಭಾಜಕ ವೃತ್ತದ ಕಡೆಗೆ ಹರಿಯುತ್ತವೆ.

ಸಾಗರ ಪ್ರವಾಹಗಳ ಮೇಲೆ ಪ್ರಭಾವವನ್ನು ಬೀರುವ ಅಂಶಗಳೆಂದರೆ ಭೂಮಿಯ ದೈನಂದಿನ ಚಲನೆ, ಉಷ್ಣಾಂಶ, ಮಾರುತಗಳು, ಲವಣತೆ, ಭೂಭಾಗಗಳ ಆಕಾರ.

**ಪೆಸಿಫಿಕ್ ಸಾಗರದ ಪ್ರವಾಹಗಳು**

**ಉತ್ತರ ಪೆಸಿಫಿಕ್ ಸಾಗರದ ಪ್ರವಾಹಗಳು.**

| **ಉಷ್ಣಸಾಗರ ಪ್ರವಾಹಗಳು** | **ಶೀತಸಾಗರ ಪ್ರವಾಹಗಳು** |
|---|---|
| ಉತ್ತರ ಸಮಭಾಜಕ ವೃತ್ತ ಪ್ರವಾಹ | ಓಯಾಶಿವೋ ಪ್ರವಾಹ |
| ಕುರೋಶಿವೋ ಪ್ರವಾಹ | ಕ್ಯಾಲಿಫೋರ್ನಿಯಾ ಪ್ರವಾಹ |

**ದಕ್ಷಿಣ ಫೆಸಿಫಿಕ್ ಸಾಗರ ಪ್ರವಾಹಗಳು**

**ಉಷ್ಣಸಾಗರ ಪ್ರವಾಹಗಳು**

ದಕ್ಷಿಣ ಸಮಭಾಜಕ ವೃತ್ತ ಪ್ರವಾಹ

ಪೂರ್ವ ಆಸ್ಟ್ರೇಲಿಯನ್ ಪ್ರವಾಹ ಪೂ

**ಶೀತಸಾಗರ ಪ್ರವಾಹಗಳು**

ಪೆರು ಅಥವಾ ಹಂಬೋಲ್ಟ್ ಪ್ರವಾಹ

ಪಶ್ಚಿಮ ಮಾರುತಗಳ ಪ್ರವಾಹ

**ಅಟ್ಲಾಂಟಿಕ್ ಸಾಗರ ಪ್ರವಾಹಗಳು**

**ಉತ್ತರ ಅಟ್ಲಾಂಟಿಕ್ ಸಾಗರ ಪ್ರವಾಹಗಳು**

**ಉಷ್ಣಸಾಗರ ಪ್ರವಾಹಗಳು**

ಉತ್ತರ ಸಮಭಾಜಕ ವೃತ್ತ ಪ್ರವಾಹ

ಗಲ್ಫ್ ಸ್ಟ್ರೀಂ ಪ್ರವಾಹ

ಉತ್ತರ ಅಟ್ಲಾಂಟಿಕ್ ಪ್ರವಾಹ

**ಶೀತಸಾಗರ ಪ್ರವಾಹಗಳು**

ಲಾಬ್ರಡಾರ್ ಪ್ರವಾಹ

ನಾರ್ವೇಜಿಯನ್ ಪ್ರವಾಹ

ಕ್ಯಾನರಿ ಪ್ರವಾಹ



**ದಕ್ಷಿಣ ಅಟ್ಲಾಂಟಿಕ್ ಸಾಗರ ಪ್ರವಾಹಗಳು.**

**ಉಷ್ಣಸಾಗರ ಪ್ರವಾಹ**

ದಕ್ಷಿಣ ಸಮಭಾಜಕ ವೃತ್ತ ಪ್ರವಾಹ

ಬ್ರೆಜಿಲ್ ಪ್ರವಾಹ

**ಶೀತಸಾಗರ ಪ್ರವಾಹ**

ಪಾಕ್‌ಲ್ಯಾಂಡ್ ಪ್ರವಾಹ

ಬೆಂಗ್ವಿಲಾ ಪ್ರವಾಹ

**ಹಿಂದೂ ಮಹಾಸಾಗರದ ಪ್ರವಾಹಗಳು :** ಉತ್ತರ ಹಿಂದೂ ಮಹಾಸಾಗರದಲ್ಲಿ ಪ್ರವಾಹಗಳು ಋತುಮಾನಕ್ಕನುಗುಣವಾಗಿ ದಿಕ್ಕನ್ನು ಬದಲಾಯಿಸುತ್ತವೆ. ಈ ಬದಲಾವಣೆ ಮಾನ್ಸೂನ್ ಮಾರುತಗಳ ದಿಕ್ಕಿಗೆ ಅನುಗುಣವಾಗಿರುವುದು. ಬೇಸಿಗೆಯಲ್ಲಿ ಇವು ನೈರುತ್ಯದಿಂದ ಈಶಾನ್ಯದ ಕಡೆಗೆ ಹಾಗೂ ಶರತ್ ಕಾಲದಲ್ಲಿ ಈಶಾನ್ಯದಿಕ್ಕಿನಿಂದ ನೈರುತ್ಯದ ಕಡೆಗೆ ಪ್ರವಹಿಸುತ್ತವೆ.

**ದಕ್ಷಿಣ ಹಿಂದೂ ಮಹಾ ಸಾಗರದ ಮುಖ್ಯ ಪ್ರವಾಹಗಳೆಂದರೆ:** ಮೊಝಾಂಬಿಕ್, ಮಡಗಾಸ್ಕರ್, ಅಗುಲ್ಹಾಸ್ ಇವು ಉಷ್ಣಪ್ರವಾಹಗಳು ಮತ್ತು ಪಶ್ಚಿಮ ಆಸ್ಟ್ರೇಲಿಯಾಪ್ರವಾಹ ಶೀತಪ್ರವಾಹವಾಗಿದೆ.




ಪ್ರಪಂಚದ ಪ್ರಮುಖ ಸಾಗರ ಪ್ರವಾಹಗಳು



**ನಿಮಗಿದು ತಿಳಿದಿರಲಿ:**

**ಪ್ರಮುಖ ಮೀನುಗಾರಿಕಾ ಪ್ರದೇಶಗಳು**

1. ಹೊನ್ಷು, ಹೊಕೈಡೋ ಮೀನುಗಾರಿಕೆ ಪ್ರದೇಶಗಳು – ಕುರೇಶಿವೊ ಉಷ್ಣಪ್ರವಾಹ ಮತ್ತು ಬಯೋಶಿವೊ ಶೀತ ಪ್ರವಾಹಗಳು ಸಂಧಿಸುವ ಪ್ರದೇಶ. (ಜಪಾನ್)
2. ಗ್ರಾಂಡ್ ಬ್ಯಾಂಕ್ – ಗಲ್ಫ್ ಸ್ಟ್ರೀಂ ಉಷ್ಣಪ್ರವಾಹ ಮತ್ತು ಲ್ಯಾಬ್ರಡಾರ್ ಶೀತ ಪ್ರವಾಹಗಳು ಸಂಧಿಸುವ ಪ್ರದೇಶ. (ನ್ಯೂಫೌಂಡ್ ಲ್ಯಾಂಡ್)
3. ಡಾಗ್ಗರ್‌ಬ್ಯಾಂಕ್– ಉತ್ತರಸಮುದ್ರವಲಯ (ಯುರೋಪ್)

**ಉಬ್ಬರ ವಿಳಿತಗಳು:** ಸಮುದ್ರ ಅಥವಾ ಸಾಗರದ ನೀರಿನ ಮಟ್ಟವು ನಿಯಮಿತವಾಗಿ ಹೆಚ್ಚಾಗುವುದು ಹಾಗೂ ಇಳಿಯುವುದನ್ನೇ 'ಉಬ್ಬರ ವಿಳಿತ' ವೆಂದು ಕರೆಯುವರು. ಉಬ್ಬರವಿಳಿತಗಳಿಗೆ ಮುಖ್ಯಕಾರಣಗಳೆಂದರೆ. ಚಂದ್ರನ ಗುರುತ್ವಾಕರ್ಷಣಾ ಶಕ್ತಿ, ಸೂರ್ಯನ ಗುರುತ್ವಾಕರ್ಷಣಾ ಶಕ್ತಿ, ಭೂಮಿಯ ದೈನಂದಿನ ಚಲನೆ ಮತ್ತು ಭೂಮಿಯ ಕೇಂದ್ರಾಪಗಮನ ಶಕ್ತಿ.

ವಿಧಗಳು : ಉಬ್ಬರ ವಿಳಿತಗಳಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ ಅವುಗಳೆಂದರೆ ಅ) **ಏರುಬ್ಬರ (High Tide) :** ಸಮುದ್ರ ಅಥವಾ ಸಾಗರದ ನೀರು ಒಮ್ಮೆ ಏರುವುದರಿಂದ ಉಂಟಾಗುತ್ತದೆ. ಇದನ್ನು ಏರುಬ್ಬರ ಅಥವಾ ಪ್ರವಾಹದ ಉಬ್ಬರವೆನ್ನುವರು. ಆ) **ಇಳಿಉಬ್ಬರ (Low Tide) :** ಒಮ್ಮೆ ಏರುಬ್ಬರದ ಪ್ರಮಾಣದಷ್ಟೇ

ನೀರಿನ ಮಟ್ಟ ಕೆಳಗೆ ಇಳಿಯುವುದು, ಇದನ್ನೇ ಇಳಿಉಬ್ಬರ (Ebtide) ಎಂದು ಕರೆಯುವರು. ಸಾಗರ ಅಥವಾ ಸಮುದ್ರಗಳಲ್ಲಿ ಏರುಬ್ಬರ ಮತ್ತು ಇಳಿಉಬ್ಬರಗಳುಂಟಾಗುತ್ತವೆ. ಒಂದು ಏರುಬ್ಬರ ಮತ್ತು ಒಂದು ಇಳಿಯುಬ್ಬರಗಳ ನಡುವೆ 6 ಗಂಟೆ 13 ನಿಮಿಷಗಳಷ್ಟು ಸಮಯವಿರುತ್ತದೆ. ಒಂದು ಅಧಿಕ ಉಬ್ಬರದಿಂದ ಮತ್ತೊಂದು ಅಧಿಕ ಉಬ್ಬರಗಳ ನಡುವೆ 12 ಗಂಟೆ 26 ನಿಮಿಷ ವೇಳೆಯ ಅಂತರವಿರುತ್ತದೆ. 24 ಗಂಟೆ, 52 ನಿಮಿಷಗಳ ಅವಧಿಯಲ್ಲಿ 2 ಏರುಬ್ಬರ ಮತ್ತು 2 ಇಳಿಯುಬ್ಬರಗಳುಂಟಾಗುತ್ತವೆ.

ಸೂರ್ಯ ಮತ್ತು ಚಂದ್ರರ ಸ್ಥಾನದ ಆಧಾರದ ಮೇಲೆ ಉಬ್ಬರವಿಳಿತಗಳನ್ನು ಎರಡು ವಿಧಗಳಾಗಿ ವಿಂಗಡಿಸಲಾಗಿದೆ ಅವುಗಳೆಂದರೆ :–

**ಗರಿಷ್ಠ ಅಥವಾ ಅಧಿಕ ಉಬ್ಬರ** (Spring Tide): ಗರಿಷ್ಠ ಪ್ರಮಾಣದ ಉಬ್ಬರವು ಭೂಮಿ, ಚಂದ್ರ, ಸೂರ್ಯ ಇವುಗಳು ಒಂದೇ ಸರಳ ರೇಖೆಯಲ್ಲಿರುವ ಅಮಾವಾಸ್ಯೆ ಅಥವಾ ಹುಣ್ಣಿಮೆ ದಿನಗಳಲ್ಲಿ ಉಂಟಾಗುತ್ತದೆ. ಸೂರ್ಯ ಮತ್ತು ಚಂದ್ರ ಇವರೆಡರ ಒಟ್ಟು ಗುರುತ್ವಶಕ್ತಿಯಿಂದ ಗರಿಷ್ಠ ಉಬ್ಬರಗಳು ಗರಿಷ್ಠವಾಗಿರುವಂತೆ ಇಳಿ ಉಬ್ಬರಗಳ ಪ್ರಮಾಣವೂ ಸಹ ಗರಿಷ್ಠವಾಗಿರುವುದು.

**ಕನಿಷ್ಠ ಉಬ್ಬರ** (Neep Tide) : ಕನಿಷ್ಠ ಉಬ್ಬರಗಳು ವೃದ್ಧಿಚಂದ್ರ ಮತ್ತು ಅರ್ಧಾದಿಕ್ಯ ಚಂದ್ರನ ದಿನಗಳಲ್ಲಿ ಕಂಡುಬರುತ್ತವೆ. ಕನಿಷ್ಠ ಉಬ್ಬರಗಳ ಸಮಯದಲ್ಲಿ ಭೂಮಿ ಮತ್ತು ಸೂರ್ಯ ಒಂದೇ ಸರಳರೇಖೆಯಲ್ಲಿದ್ದು ಮತ್ತು ಚಂದ್ರನು ಭೂಮಿಗೆ ಲಂಬವಾಗಿರುತ್ತಾನೆ. ಈ ರೀತಿಯ ಉಬ್ಬರಗಳಲ್ಲಿ ಏರುಬ್ಬರ ಹೆಚ್ಚಾಗುವುದಿಲ್ಲ ಮತ್ತು ಇಳಿಯಬ್ಬರವೂ ಕಡಿಮೆಯಾಗುವುದಿಲ್ಲ.




**ಗರಿಷ್ಠ ಮತ್ತು ಕನಿಷ್ಠ ಉಬ್ಬರ ವಿಳಿತಗಳು**

**ಉಪಯೋಗಗಳು:** ಉಬ್ಬರವಿಳಿತಗಳು ಮನುಷ್ಯನಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಉಪಯುಕ್ತವಾಗಿವೆ ಅವುಗಳೆಂದರೆ : 1. ದೊಡ್ಡ ನೌಕಾಯಾನಕ್ಕೆ ಉಪಯುಕ್ತವಾಗಿದೆ, 2. ಬಂದರು ಮತ್ತು ಹಡಗು ನಿಲ್ದಾಣಗಳನ್ನು ನಿರ್ಮಿಸಲು ಸಹಕಾರಿಯಾಗುತ್ತವೆ, 3. ಉಬ್ಬರವಿಳಿತಗಳಿಂದ ಬರುವ ನೀರು ಬಂದರುಗಳ ತೀರವನ್ನು ನಿಯಮಿತವಾಗಿ ಸ್ವಚ್ಛಗೊಳಿಸುತ್ತವೆ, 4. ಉಪ್ಪನ್ನು ಉತ್ಪಾದಿಸಲು ಸಹಕಾರಿಯಾಗಿದೆ, 5. ಮೀನುಗಾರಿಕೆಗೆ ಅನುಕೂಲವಾಗುತ್ತದೆ ಮತ್ತು ಉಬ್ಬರಗಳಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲು ಸಾಧ್ಯ.

**ಸಾಗರಗಳ ಸಂರಕ್ಷಣೆ :** ಸಾಗರಗಳ ಸಂರಕ್ಷಣೆ ಇತ್ತೀಚಿನ ವರ್ಷಗಳಲ್ಲಿ ಅತಿ ಮುಖ್ಯವಾಗಿದೆ. ಸಾಗರಗಳು ಮನುಷ್ಯನಿಗೆ ವಿವಿಧ ರೀತಿಯಲ್ಲಿ ಸಹಕಾರಿಯಾಗಿರುವುದಲ್ಲದೆ ಅವುಗಳಲ್ಲಿ ಅಸಂಖ್ಯಾತ ಬಗೆಯ ಜೀವಿಗಳು ಜೀವಿಸುತ್ತವೆ. ಸಾಗರಗಳು ಸಹ ಇಂದು ಮಾಲಿನ್ಯದಿಂದ ಹೊರತಾಗಿಲ್ಲ. ಇದರಿಂದಾಗಿ ಮುಂದೆಯೂ ಸಹ ಸಾಗರಗಳು ಇದೇ ರೀತಿಯಲ್ಲಿ ಉಳಿಯುವುದು ಸಾಧ್ಯವಿಲ್ಲ. ಆದ್ದರಿಂದ ಸಾಗರಗಳನ್ನು ಸಂರಕ್ಷಿಸುವುದು ಅಗತ್ಯ. ಸಾಗರಗಳ ಸಂರಕ್ಷಣೆಗಾಗಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕಿದೆ.

1. ಸಾಗರಗಳ ಮೂಲಕ ಹಡಗುಗಳಲ್ಲಿ ಕಚ್ಚಾ ತೈಲವನ್ನು ಸಾಗಿಸುವ ಬದಲು ಕೊಳವೆ ಮಾರ್ಗಗಳ ಮೂಲಕ ಸಾಗಿಸುವುದು.
2. ಅಣು ಇಂಧನ ತಾಜ್ಯವಸ್ತುಗಳನ್ನು ಸಾಗರಗಳಿಗೆ ಹಾಕುವುದನ್ನು ನಿಯಂತ್ರಿಸುವುದು.
3. ತೀರವಲಯದಲ್ಲಿರುವ ತೈಲ–ರಾಸಾಯನಿಕ ಕೈಗಾರಿಕೆಗಳು ಮಾಲಿನ್ಯ ಉಂಟುಮಾಡದಂತೆ ತೀವ್ರ ಕ್ರಮಕೈಗೊಳ್ಳುವುದು.
4. ಯಾವುದೇ ರೀತಿಯ ತ್ಯಾಜ್ಯ ವಸ್ತುಗಳನ್ನು ಬಂದರು ಹಾಗೂ ಹಡಗು ತಾಣಗಳಲ್ಲಿ ಎಸೆಯುವುದನ್ನು ನಿಯಂತ್ರಿಸುವುದು
5. ತೀರಗಳಲ್ಲಿ ಅದಿರುಗಳ ಸಂಗ್ರಹಣೆ, ಗಣಿಗಾರಿಕೆ ಮೊದಲಾದವುಗಳನ್ನು ನಿಯಂತ್ರಿಸುವುದು.
6. ಕರಾವಳಿಯ ಮರಳು ದಂಡೆಗಳನ್ನು (ಬೀಚ್) ವಿವಿಧ ರೀತಿಯಲ್ಲಿ ಹಾಳುಗೆಡವುತ್ತಿದ್ದು, ಅವುಗಳನ್ನು ಸಂರಕ್ಷಿಸುವುದು ಅಗತ್ಯವಾಗಿದೆ.



## ಅಭ್ಯಾಸಗಳು

**I ಬಿಟ್ಟಿರುವ ಸ್ಥಳವನ್ನು ಭರ್ತಿಮಾಡಿರಿ.**

1 ಖಂಡಾವರಣ ಪ್ರದೇಶದ ಸರಾಸರಿ ಆಳವು ______________ ಆಗಿದೆ.

2 ಒಂದು ಪ್ಯಾದಮ್ ______________ ಅಡಿಗಳಿಗೆ ಸಮವಾಗಿರುತ್ತದೆ.

3 ಪೆಸಿಫಿಕ್ ಸಾಗರದ ಅತ್ಯಂತ ಆಳವಾದ ಸ್ಥಳ ______________ ಆಗಿದೆ.

4 ಸಾಗರಗಳ ಸರಾಸರಿ ಲವಣತೆಯ ಪ್ರಮಾಣ ______________ ರಷ್ಟಿದೆ.

5 ಹುಣ್ಣಿಮೆಯ ದಿನಗಳಲ್ಲಿ ಕಂಡುಬರುವ ಉಬ್ಬರಗಳು ______________ .

**II ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ಜಲಗೋಳ ಎಂದರೇನು ?

2 ಸಾಗರತಳದ ಭೂ ಸ್ವರೂಪದ ನಾಲ್ಕು ಪ್ರಮುಖ ಭಾಗಗಳನ್ನು ತಿಳಿಸಿ.

3 ಸಾಗರ ಪ್ರವಾಹಗಳಿಗೂ ಮತ್ತು ಉಬ್ಬರವಿಳಿತಗಳಿಗೂ ಇರುವ ವ್ಯತ್ಯಾಸಗಳನ್ನು ತಿಳಿಸಿರಿ.

4 ಗರಿಷ್ಠ ಉಬ್ಬರ ಮತ್ತು ಕನಿಷ್ಠ ಉಬ್ಬರಗಳ ನಡುವಿನ ವ್ಯತ್ಯಾಸಗಳನ್ನು ತಿಳಿಸಿ.

5 ಸಾಗರಗಳನ್ನು ನಾವು ಹೇಗೆ ಸಂರಕ್ಷಿಸಬೇಕು?

**III ಹೊಂದಿಸಿ ಬರೆಯಿರಿ.**

| | ಅ | | ಬ |
|---|---|---|---|
| 1 | ಪ್ಯಾದಮ್ | ಅ) | ಆಳಸಾಗರ ಮೈದಾನ |
| 2 | ಓಯೋಶಿವೊ | ಆ) | ಅಮೆರಿಕದ ಪೂರ್ವಕರಾವಳಿ(USA) |
| 3 | ಗಲ್ಫ್ ಸ್ಟ್ರೀಂ | ಇ) | ಶೀತ ಪ್ರವಾಹ |
| 4 | ಸಮುದ್ರ ಪರ್ವತಗಳು | ಈ) | ಹಿಂದೂಮಹಾಸಾಗರ ಪ್ರವಾಹ |
| 5 | ಅಗುಲ್ಹಾಸ್ ಪ್ರವಾಹ | ಉ) | ಸಾಗರದ ಆಳ |

**IV ಕೆಳಗಿನವುಗಳನ್ನು ಅರ್ಥೈಸಿ.**

1. ಖಂಡಾವರಣ ಇಳಿಜಾರು 2. ಲವಣತೆ 3. ಉಷ್ಣ ಮತ್ತು ಶೀತ ಸಾಗರ ಪ್ರವಾಹಗಳು
4. ಅಧಿಕ ಭರತ ಮತ್ತು ಕನಿಷ್ಠಭರತ 5. ಬೆಂಗ್ವುಲಾಪ್ರವಾಹ 6. ಉಬ್ಬರವಿಳಿತಗಳು

**V ನೆನಪಿನಲ್ಲಿಡಬೇಕಾದ ಅಂಶಗಳು.**

1. ಖಾರಿ 2. ಲವಣತೆ 3. ಉಷ್ಣಪ್ರವಾಹಗಳು 4. ಕ್ಯುರೋಶಿವೊ ಪ್ರವಾಹ 5. ಪ್ರವಾಹದ ಉಬ್ಬರಗಳು
6. ಉಬ್ಬರವಿಳಿತ ಶಕ್ತಿ.

**VI ಚಟುವಟಿಕೆ.**

1. ಅಟ್ಲಾಂಟಿಕ್ ಮಹಾಸಾಗರದಲ್ಲಿನ ಉಷ್ಣೋದಕ ಮತ್ತು ಶೀತೋದಕ ಪ್ರವಾಹಗಳನ್ನು ಪಟ್ಟಿ ಮಾಡಿರಿ.

## ಅಧ್ಯಾಯ–5

# ಜೀವಗೋಳ (BIOSPHERE)

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಜೈವಿಕ ಪರಿಸರ ಸಮತೋಲನದ ಅರ್ಥ ಮತ್ತು ಪ್ರಾಮುಖ್ಯತೆ ತಿಳಿಯುವುದು.
- ಪರಿಸರ, ಪರಿಸರ ಮಾಲಿನ್ಯದ ವಿಧಗಳು, ಪರಿಣಾಮಗಳು ಹಾಗೂ ಪರಿಸರ ಮಾಲಿನ್ಯವನ್ನು ತಡೆಗಟ್ಟುವ ಕ್ರಮಗಳ ಬಗ್ಗೆ ವಿವರಿಸುವುದು.

ಭೂಮಿಯು ನಮಗೆ ಏನನ್ನು ಕೊಟ್ಟಿದೆ? ಅದಕ್ಕೆ ಪ್ರತಿಯಾಗಿ ನಾವು ಏನನ್ನು ನೀಡಿದ್ದೇವೆ ? ಎಂಬುದು ನಿಮಗೆ ಗೊತ್ತಿದೆಯೋ. ?

**ಅರ್ಥ :** ನಮಗೆ ತಿಳಿದಿರುವಂತೆ ವಿವಿಧ ಬಗೆಯ ಜೀವಿಗಳನ್ನು ಒಳಗೊಂಡಿರುವ ಏಕೈಕ ಗ್ರಹ 'ನಮ್ಮ ಭೂಮಿ'. ಜೀವಗೋಳವು ಭೂಮಿಯ ನಾಲ್ಕನೆ ಆಯಾಮವಾಗಿದ್ದು ಎಲ್ಲಾರೀತಿಯ ಜೀವಿಗಳನ್ನು ಒಳಗೊಂಡಿದೆ.

**ಜೀವಿ ಪರಿಸರ ಶಾಸ್ತ್ರ (Ecology) :** ಜೀವ ಪರಿಸರ ಶಾಸ್ತ್ರವು ಜೀವಿಗಳು ಮತ್ತು ಅವುಗಳ ಭೌತಿಕ, ರಾಸಾಯನಿಕ ಮತ್ತು ಜೈವಿಕ ಪರಿಸರಗಳ ನಡುವಿನ ಸಂಬಂಧವನ್ನು ವಿವರಿಸುವ ವಿಜ್ಞಾನವಾಗಿದೆ. ಜೀವಿಗಳು ಮತ್ತು ಪ್ರಾಕೃತಿಕ ಪರಿಸರ ಹಾಗೂ ವಿವಿಧ ಪ್ರಕಾರದ ಪ್ರಾಣಿಗಳ ನಡುವೆ ಸೌಹಾರ್ದಯುತವಾದ ಹಾಗೂ ಸಮತೋಲನವಾದ ಸಂಬಂಧ ನೈಸರ್ಗಿಕವಾಗಿ ಕಂಡು ಬರುವುದು. ಇದನ್ನೇ ಜೈವಿಕ ಪರಿಸರ ಸಮತೋಲನ ಎನ್ನುವರು.

ಪ್ರಾಣಿವರ್ಗ ಮತ್ತು ಸಸ್ಯವರ್ಗಗಳು ತಮ್ಮ ಸುತ್ತಲಿನ ಸಜೀವ ಹಾಗೂ ನಿರ್ಜೀವ ಭಾಗಗಳ ನಡುವಿನ ಪರಸ್ಪರ ಸಂಬಂಧವನ್ನು 'ಜೀವಿಪರಿಸರವ್ಯವಸ್ಥೆ' ಎನ್ನುವರು. ಅಂದರೆ ಜೀವ ಪರಿಸ್ಥಿತಿಯ ಸಮಸ್ತ ಘಟಕಗಳೂ ಸೇರಿ ಹೊಂದಾಣಿಕೆಯಿಂದಿರುವುದನ್ನು ವಿವರಿಸುತ್ತದೆ.

ಜೀವಗೋಳದಲ್ಲಿ ಜೀವಿ ಪರಿಸರ ವ್ಯವಸ್ಥೆ ಅಥವಾ ಜೀವಿಪರಿಸರ ಸಮತೋಲನವಿಲ್ಲದಿದ್ದರೆ ಸಸ್ಯಗಳು, ಪ್ರಾಣಿಗಳು ಮತ್ತು ಅತಿ ಸೂಕ್ಷ್ಮಜೀವಿಗಳ ಸಮೂಹಗಳ ಅಸ್ತಿತ್ವವನ್ನು ಕಲ್ಪಿಸಲು ಅಸಾಧ್ಯ. ಪ್ರತಿಯೊಂದು ಜೀವಿಯೂ ಪ್ರಕೃತಿಯಲ್ಲಿ ಹೊಂದಾಣಿಕೆ ಮಾಡಿಕೊಂಡು ಜೀವಿಸುತ್ತವೆ.

**ಪರಿಸರ (Environment) :** ಎಲ್ಲಾ ಜೀವಿಗಳು, ಜೈವಿಕ ವಸ್ತುಗಳು ವಾಸಿಸುವ ಸುತ್ತಲಿನ ಸನ್ನಿವೇಶವನ್ನು ಪರಿಸರ ಎನ್ನುವರು. ಜೀವವಾಸಿಗಳ ಅಸ್ತಿತ್ವ ಹಾಗೂ ಬೆಳವಣಿಗೆಗೆ ಅನುಕೂಲಕರವಾದ ಪರಿಸ್ಥಿತಿಯನ್ನು ಪರಿಸರ ನಿರ್ಮಾಣಮಾಡುತ್ತದೆ. ಪರಿಸರದಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ ಪ್ರಾಕೃತಿಕ ಅಥವಾ ಭೌಗೋಳಿಕ ಪರಿಸರ ಮತ್ತು ಸಾಂಸ್ಕೃತಿಕ ಅಥವಾ ಮಾನವ ನಿರ್ಮಿತ ಪರಿಸರ.

**ಪರಿಸರ ಮಾಲಿನ್ಯ:** ನಮ್ಮ ಸುತ್ತಮುತ್ತಲಿನಲ್ಲಾಗುವ ಅನಪೇಕ್ಷಣೀಯ ಬದಲಾವಣೆಯೇ 'ಪರಿಸರಮಾಲಿನ್ಯ'. ಇದು ಮಾನವನೂ ಸೇರಿದಂತೆ ಜೀವಿಗಳ ಮೇಲೆ ಹಾನಿಕಾರಕ ಪರಿಣಾಮಗಳನ್ನುಂಟು ಮಾಡುವುದು. ಹಾಗೂ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಜೀವಮಂಡಲದ ಘಟಕಗಳನ್ನು ಬದಲಾಯಿಸುತ್ತದೆ.

ಇಂದು ಪರಿಸರ ಮಾಲಿನ್ಯವು ಜೀವಪರಿಸರವು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳಲ್ಲೊಂದಾಗಿದೆ. ಇದಕ್ಕೆ ಕಾರಣವಾದ ಅಂಶಗಳೆಂದರೆ ಅಧಿಕ ಜನಸಂಖ್ಯೆ, ಕೈಗಾರಿಕೀಕರಣ, ನಗರೀಕರಣ, ಸಂಪನ್ಮೂಲಗಳ ದುರ್ಬಳಕೆ, ಅತಿಯಾಗಿ ವಾಹನಗಳನ್ನು ಬಳಸುವುದು ಇತ್ಯಾದಿ. ಇವುಗಳು ಸಸ್ಯವರ್ಗ, ಪ್ರಾಣಿವರ್ಗ ಮತ್ತು ಮಾನವ ಜೀವಿಗಳ ಜೀವನಕ್ರಮದಲ್ಲಾಗುವ ಬದಲಾವಣೆಯ ಮೇಲೆ ಪ್ರಭಾವ ಬೀರುತ್ತವೆ.

ಮಾಲಿನ್ಯವನ್ನುಂಟು ಮಾಡುವ ವಸ್ತುಗಳಿಗೆ ಮಾಲಿನ್ಯಕಾರಕಗಳೆನ್ನುವರು. ಅವುಗಳಲ್ಲಿ ಸ್ವಾಭಾವಿಕ ಮತ್ತು ಮಾನವ ನಿರ್ಮಿತ ಮಾಲಿನ್ಯಕಾರಕಗಳೆಂದು ಎರಡು ವಿಧಗಳಿವೆ. ಸ್ವಾಭಾವಿಕ ಮಾಲಿನ್ಯಕಾರಕಗಳಿಗಿಂತ ಮಾನವ ನಿರ್ಮಿತ ಮಾಲಿನ್ಯಕಾರಕಗಳು ಹೆಚ್ಚು ಅಪಾಯಕಾರಿ ಹಾಗೂ ಹಾನಿಕಾರಕಗಳಾಗಿವೆ. ಹೊಗೆ, ವಿಷಾನಿಲ, ದೂಳು, ಚರಂಡಿನೀರು, ಕಸಕಡ್ಡಿಗಳು ಇತ್ಯಾದಿಗಳು ಗೋಚರ ಮಾಲಿನ್ಯಕಾರಕಗಳಾಗಿವೆ. ಅಗೋಚರ ಮಾಲಿನ್ಯಕಾರಕಗಳಾವುವೆಂದರೆ ಆಹಾರ, ಮಣ್ಣು ಮತ್ತು ನೀರಿನಲ್ಲಿ ಮಿಶ್ರಣವಾದ ವಿಷಯುಕ್ತ ರಾಸಾಯನಿಕ ವಸ್ತುಗಳು ಮತ್ತು ಬ್ಯಾಕ್ಟೀರಿಯಾಗಳು.

**ಮಾಲಿನ್ಯದ ವಿಧಗಳು :** ಪರಿಸರ ಮಾಲಿನ್ಯದಲ್ಲಿ ಹಲವಾರು ವಿಧಗಳಿದ್ದು ಮಾಲಿನ್ಯಕಾರಕಗಳು ಮತ್ತು ಮಾಲಿನ್ಯದ ಸ್ವರೂಪದ ಆಧಾರದ ಮೇಲೆ ವಿಂಗಡಿಸಲಾಗಿದ್ದು ಅವುಗಳೆಂದರೆ– ವಾಯುಮಾಲಿನ್ಯ, ಜಲಮಾಲಿನ್ಯ, ಮಣ್ಣಿನ ಮಾಲಿನ್ಯ ಮತ್ತು ಶಬ್ದಮಾಲಿನ್ಯ.



**1. ವಾಯುಮಾಲಿನ್ಯ :** ವಾಯುಮಾಲಿನ್ಯವನ್ನು ವಿಶ್ವ ಆರೋಗ್ಯ ಸಂಸ್ಥೆಯು (W.H.O) ಹೀಗೆ ಅರ್ಥೈಸಿದೆ "ಮಾನವನ ವಿವಿಧ ಚಟುವಟಿಕೆಗಳಿಂದ ಸಾಂಧ್ರೀಕರಣಗೊಂಡ ಪದಾರ್ಥಗಳು ವಾಯುವಿನಲ್ಲಿ ಸೇರಿ ಮಾನವನ ಆರೋಗ್ಯ, ವನಸ್ಪತಿ ಮತ್ತು ಆಸ್ತಿ ಪಾಸ್ತಿಗಳ ಮೇಲೆ ಪರಿಣಾಮ ಬೀರಿ ಹಾನಿಯುಂಟುಮಾಡುವುದೇ ವಾಯುಮಾಲಿನ್ಯವಾಗಿದೆ". ವಾಯುಮಾಲಿನ್ಯಕಾರಕದ ಪ್ರಮುಖ ಮೂಲಗಳೆಂದರೆ a) **ಪ್ರಾಕೃತಿಕ ಮೂಲಗಳು:** ಜ್ವಾಲಾಮುಖಿಗಳು, ಕಾಡ್ಗಿಚ್ಚು, ಬಾಹ್ಯಾಕಾಶ ದೂಳು ಇತ್ಯಾದಿ. b) **ಮಾನವನಿರ್ಮಿತ ಮೂಲಗಳು :** ಕೈಗಾರಿಕೆಗಳಿಂದ, ಗೃಹಬಳಕೆಯಿಂದ, ವಾಹನಗಳಿಂದ, ಗಣಿಗಾರಿಕೆ, ಅಣುಶಕ್ತಿ ಘಟಕಗಳಿಂದ, ಅಣುಸ್ಫೋಟನೆ ಇತ್ಯಾದಿಗಳಿಂದ ಬರುವ ಅನಿಲಗಳು.

**ಬಹುಮುಖ್ಯವಾದ ಮಾಲಿನ್ಯಕಾರಕಗಳೆಂದರೆ:** ಇಂಗಾಲದ ಡೈಆಕ್ಸೈಡ್, ಇಂಗಾಲದ ಮಾನಾಕ್ಸೈಡ್, ಗಂಧಕದ ಡೈಆಕ್ಸೈಡ್, ಸಾರಜನಕದ ಆಕ್ಸೈಡ್‌ಗಳು, ಕ್ಲೋರೊಫ್ಲೋರೋ ಕಾರ್ಬನ್‌ಗಳು (CFC) ಹೈಡ್ರೋಕಾರ್ಬನ್‌ಗಳು ಇದರಿಂದಾಗುವ ಪ್ರಮುಖ ಪರಿಣಾಮಗಳಾವುವೆಂದರೆ, ಹವಾಮಾನ ಮತ್ತು ವಾಯುಗುಣ ಪರಿಸ್ಥಿತಿ ವ್ಯತ್ಯಾಸ, ಓಝೋನ್ ಕ್ಷೀಣತೆ, ಹಸಿರು ಮನೆ ಪರಿಣಾಮ, ಭೂಮಂಡಲ ಬಿಸಿಯಾಗುವಿಕೆ, ಮಾನವನ ಆರೋಗ್ಯದ ಮೇಲೆ ಪರಿಣಾಮ ಉಸಿರಾಟ ವ್ಯವಸ್ಥೆಯಲ್ಲಿ ತೊಂದರೆ, ಸಸ್ಯಗಳು ಹಾಗೂ ಪ್ರಾಣಿವರ್ಗಗಳ ಜೀವನದ ಮೇಲೆ ಪರಿಣಾಮ ಮೊದಲಾದವುಗಳು.

**ವಾಯುಮಾಲಿನ್ಯವನ್ನು ನಿಯಂತ್ರಿಸುವ ಕ್ರಮಗಳೆಂದರೆ–** ಮಾಲಿನ್ಯಕಾರಕ ಅನಿಲಗಳನ್ನು ನಿಯಂತ್ರಿಸುವುದು, ವಾಹನಗಳಿಂದ ಬರುವ ಹೊಗೆಯನ್ನು ನಿಯಂತ್ರಿಸುವುದು, ಹೆಚ್ಚು ಮರಗಳನ್ನು ಬೆಳೆಸುವುದು. ಅಸಾಂಪ್ರದಾಯಿಕ ಶಕ್ತಿ ಸಂಪನ್ಮೂಲಗಳನ್ನು ಬಳಸುವುದು, ಜನರಲ್ಲಿ ಅರಿವುಮೂಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳುವುದು, ಕಾನೂನಿಂದ ನಿಯಂತ್ರಿಸುವುದು, ಸಾಕ್ಷರತೆ ಮತ್ತು ಶಿಕ್ಷಣ.

**2. ಜಲಮಾಲಿನ್ಯ :** ಜಲಮಾಲಿನ್ಯವೆಂದರೆ ಮಾನವ ಮತ್ತು ಜಲಚರಗಳ ಜೀವನೋಪಾಯದ ಮೇಲೆ ಅನರ್ಥ ಪರಿಣಾಮವನ್ನುಂಟು ಮಾಡುವಷ್ಟು ನೀರಿನ ಭೌತಿಕ, ರಾಸಾಯನಿಕ ಮತ್ತು ಜೈವಿಕ ಗುಣಲಕ್ಷಣಗಳ ಬದಲಾವಣೆ.

**ಜಲಮಾಲಿನ್ಯದ ಪ್ರಮುಖ ಮೂಲಗಳಾವುವೆಂದರೆ,** ನೈಸರ್ಗಿಕ ಮೂಲಗಳಲ್ಲಿ ಮಣ್ಣಿನ ಸವೆತ, ಭೂಕುಸಿತಗಳು ಜ್ವಾಲಾಮುಖಿ ಸ್ಫೋಟನೆ, ಸಸ್ಯಗಳು ಮತ್ತು ಪ್ರಾಣಿಗಳು ಕ್ಷಯಿಸುವ ಮತ್ತು ಕೊಳೆಯುವ ಕಾರ್ಯಗಳು ಸೇರುತ್ತವೆ. ಮಾನವ ನಿರ್ಮಿತ ಮೂಲಗಳಲ್ಲಿ ಕೈಗಾರಿಕೆಗಳ ತ್ಯಾಜ್ಯವಸ್ತುಗಳು ನಗರಗಳ ತ್ಯಾಜ್ಯವಸ್ತುಗಳು, ಗೃಹತಾಜ್ಯವಸ್ತುಗಳು, ಕೃಷಿತ್ಯಾಜ್ಯವಸ್ತುಗಳು, ತೈಲಸೋರುವಿಕೆ, ಅಣುತ್ಯಾಜ್ಯ, ತೈಲಬಾವಿಗಳನ್ನು ಸಾಗರವಲಯದಲ್ಲಿ ಕೊರೆಯುವುದು, ಶಾಖ ವಿದ್ಯುತ್ ಕೇಂದ್ರಗಳ ತ್ಯಾಜ್ಯವಸ್ತುಗಳು ಇತ್ಯಾದಿಗಳು ಜಲಮಾಲಿನ್ಯವನ್ನುಂಟು ಮಾಡುತ್ತವೆ. ಜಲಮಾಲಿನ್ಯದ ಅನೇಕ ವಿಧಗಳಿದ್ದು ಅವುಗಳೆಂದರೆ – ಸಮುದ್ರ ಮತ್ತು ಸಾಗರ ಮಾಲಿನ್ಯ, ಅಂತರ್ಜಲ ಮಾಲಿನ್ಯ, ನದಿ ನೀರಿನ ಮಾಲಿನ್ಯ, ಸರೋವರ ನೀರಿನ ಮಾಲಿನ್ಯ. ಎಂದು ಗುರುತಿಸಬಹುದಾಗಿದೆ.

**ಜಲಮಾಲಿನ್ಯದಿಂದಾಗುವ ಪರಿಣಾಮಗಳೆಂದರೆ** – ನೀರಿನಿಂದ ಉಂಟಾಗುವ ಕಾಯಿಲೆಗಳು ಮತ್ತು ಸಾಂಕ್ರಾಮಿಕ ರೋಗಗಳಾದ ಕಾಲರಾ, ಟೈಫಾಯಿಡ್, ಕ್ಷಯ, ಕಾಮಾಲೆ, ಆಮಶಂಕೆ, ಅತಿಸಾರ ಜಲಚರಗಳ ಸಾವಿಗೆ ಕಾರಣವಾಗುತ್ತದೆ. ಮಲಿನಗೊಂಡ ನೀರನ್ನು ನೀರಾವರಿಗೆ ಬಳಸಿದರೆ ವ್ಯವಸಾಯದ ಬೆಳೆಗಳಿಗೆ ಹಾನಿಯುಂಟು ಮಾಡುತ್ತದೆ.

**ಜಲಮಾಲಿನ್ಯ ನಿಯಂತ್ರಣ ಕ್ರಮಗಳೆಂದರೆ** – ಕೈಗಾರಿಕಾ ತ್ಯಾಜ್ಯವಸ್ತುಗಳನ್ನು ಸಂಸ್ಕರಿಸುವುದು, ಕುಡಿಯುವ ನೀರಿನ ಮೂಲಗಳನ್ನು ಸ್ವಚ್ಛಗೊಳಿಸುವುದು, ಚರಂಡಿ ನೀರನ್ನು ಸಂಸ್ಕರಿಸುವುದು, ಕಸದ ರಾಶಿಗಳನ್ನು ಜಲರಾಶಿಗಳಲ್ಲಿ ಹಾಕುವುದನ್ನು ಜನರು ನಿಲ್ಲಿಸಬೇಕು.

**3. ಮಣ್ಣಿನಮಾಲಿನ್ಯ** – ಸ್ವಾಭಾವಿಕ ಅಥವಾ ಮಾನವ ನಿರ್ಮಿತ ಮೂಲಗಳಿಂದ ಮಣ್ಣಿನ ಫಲವತ್ತತೆ, ಗುಣಮಟ್ಟ ಹಾಳಾಗುವುದನ್ನು ಮಣ್ಣಿನ ಮಾಲಿನ್ಯವೆನ್ನುವರು. ಮಣ್ಣಿನ ಸವೆತದ ತೀವ್ರತೆ ಸಸ್ಯಪೋಷಕ ಆಹಾರದ ಕುಸಿತ, ಮಣ್ಣಿನಲ್ಲಿರುವ ಅತಿಸೂಕ್ಷ್ಮ ಜೀವಾಣುಗಳು ಕಡಿಮೆಯಾಗುವುದು ಇತ್ಯಾದಿ. ಮಣ್ಣೀನ ಮಾಲಿನ್ಯದ ಮೂಲಗಳಾವುವೆಂದರೆ – ಕೈಗಾರಿಕೆ ಮತ್ತು ಗಣಿಗಾರಿಕೆ ತ್ಯಾಜ್ಯವಸ್ತುಗಳು, ಗೃಹಬಳಕೆ ಮತ್ತು ನಗರ ತ್ಯಾಜ್ಯವಸ್ತುಗಳು, ಕೃಷಿ ತ್ಯಾಜ್ಯವಸ್ತುಗಳು, ಅಣುತ್ಯಾಜ್ಯವಸ್ತುಗಳು.

**ಮಣ್ಣಿನ ಮಾಲಿನ್ಯದ ಪರಿಣಾಮಗಳು** : ಮಣ್ಣಿನ ಫಲವತ್ತತೆ ಕ್ಷೀಣಿಸುವುದು, ಫಲವತ್ತಾದ ಭೂಮಿ ಪಾಳುಭೂಮಿಯಾಗುತ್ತದೆ, ಮಣ್ಣಿನಲ್ಲಿರುವ ಸೂಕ್ಷ್ಮ ಜೀವಿಗಳು ನಾಶವಾಗುತ್ತವೆ.

**ಮಣ್ಣಿನ ಮಾಲಿನ್ಯದ ನಿಯಂತ್ರಣ ಕ್ರಮಗಳು** : ರಸಗೊಬ್ಬರಗಳು, ಕೀಟನಾಶಕಗಳು, ಕಳೆನಾಶಕಗಳು ಮುಂತಾದವುಗಳನ್ನು ವಿವೇಕತೆಯಿಂದ ಬಳಸುವುದು ಮತ್ತು ನಿಯಂತ್ರಿಸುವುದು, ಕೈಗಾರಿಕೆ ಮತ್ತು ನಗರ ತ್ಯಾಜ್ಯವಸ್ತುಗಳನ್ನು ಸಂಸ್ಕರಿಸಿ ನಂತರ ವ್ಯವಸಾಯಕ್ಕೆ ಬಳಸುವುದು, ಸಮರ್ಪಕವಾಗಿ ಭೂಬಳಕೆ ಹಾಗೂ ಬೆಳೆಗಳ ಕ್ರಮವನ್ನು ಅನುಸರಿಸುವುದು, ಮಣ್ಣಿನ ಸವೆತ ನಿಯಂತ್ರಿಸುವುದು, ಗಿಡಮರಗಳನ್ನು ಬೆಳಸುವುದು, ಮಣ್ಣಿನ ಸರಿಯಾದ ಬಳಕೆ ಮತ್ತು ಮಣ್ಣಿನ ನಿರ್ವಹಣೆಯ ಬಗ್ಗೆ ಅರಿವುಂಟುಮಾಡುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

**4. ಶಬ್ದಮಾಲಿನ್ಯ :** ಪ್ರತಿಕೂಲಕರ ಪರಿಣಾಮ ಬೀರುವ ಅನಗತ್ಯವಾದ ಶಬ್ದವು ವಾಯುಮಂಡಲದಲ್ಲಿ ಹರಡಿ ಆರೋಗ್ಯಕ್ಕೆ ಹಾನಿಯುಂಟುಮಾಡುವುದನ್ನು ಶಬ್ದಮಾಲಿನ್ಯ ಎನ್ನುವರು.

**ಶಬ್ದಮಾಲಿನ್ಯದ ಮೂಲಗಳಾವುವೆಂದರೆ :** ನೈಸರ್ಗಿಕ ಮೂಲಗಳು– ಗುಡುಗು, ಸಿಡಿಲು, ಮಿಂಚು, ಅತ್ಯಧಿಕಮಳೆ, ಆಲಿಕಲ್ಲು ಮಳೆ, ಜಲಪಾತಗಳು, ಸಮುದ್ರದ ಅಲೆಗಳು. ಮಾನವ ನಿರ್ಮಿತ ಮೂಲಗಳು – ಕೈಗಾರಿಕೆಗಳ ಶಬ್ದ, ವಾಹನಗಳ ಶಬ್ದ, ವಿಮಾನಗಳ ಶಬ್ದ, ಗಣಿಗಾರಿಕೆ, ನಗರಪ್ರದೇಶಗಳ ಶಬ್ದ.

**ಶಬ್ದಮಾಲಿನ್ಯದ ಪರಿಣಾಮಗಳೆಂದರೆ :** ತಾತ್ಕಾಲಿಕ ಅಥವಾ ಶಾಶ್ವತವಾಗಿ ಕಿವಿ ಕೇಳಿಸದಿರುವುದು. ತಲೆನೋವು, ಆಯಾಸ, ಹೃದಯ ಸಂಬಂಧಿ ಕಾಯಿಲೆಗಳು. ಮಾನಸಿಕ ಅಸ್ವಸ್ಥತೆ, ದೈಹಿಕ ಬದಲಾವಣೆ. ನಿದ್ರಾಭಂಗ.

**ಶಬ್ದಮಾಲಿನ್ಯವನ್ನು ತಡೆಗಟ್ಟುವ ಕ್ರಮಗಳು :** ವಾಸಸ್ಥಳದಿಂದ ದೂರದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸುವುದು, ಕಾರ್ಖಾನೆಗಳಲ್ಲಿ ಶಬ್ದ ನಿರೋಧಕ ಗೋಡೆಗಳನ್ನು ನಿರ್ಮಿಸುವುದು, ಅನಗತ್ಯವಾಗಿ, ಸೈರನ್, ಹಾರನ್, ಮತ್ತು ಶಬ್ದಮಾಡುವ ಉಪಕರಣಗಳನ್ನು ಬಳಸುವುದನ್ನು ನಿಲ್ಲಿಸುವುದು, ವಿಮಾನ ನಿಲ್ದಾಣಗಳನ್ನು ನಗರವಲಯದಿಂದ ದೂರ ನಿರ್ಮಿಸುವುದು, ಕೈಗಾರಿಕಾ ಕಾರ್ಮಿಕರುಗಳಿಗೆ ಶಬ್ದ ನಿಯಂತ್ರಕಗಳನ್ನು ಒದಗಿಸುವುದು, ಶಬ್ದವುಂಟುಮಾಡುವ ವಾಹನಗಳನ್ನು ಪರಿಶೀಲಿಸಿ ಕ್ರಮಕೈಗೊಳ್ಳುವುದು.

**ಜಾಗತಿಕ ತಾಪಮಾನ (Global Warming) :** ಭೂಮಿಯ ಉಷ್ಣಾಂಶವು ದಿನಗಳು ಕಳೆದಂತೆ ನಿಧಾನವಾಗಿ ಹೆಚ್ಚುತ್ತಿದೆ. ಇತ್ತೀಚಿನ ಕೆಲವು ವರ್ಷಗಳಿಂದ ವಾಯುಮಂಡಲದ ಉಷ್ಣಾಂಶವು ಸ್ವಲ್ಪ ಪ್ರಮಾಣದಲ್ಲಿ ಹೆಚ್ಚಾಗಿದೆ. ಇದನ್ನೇ 'ವಿಶ್ವ ಉಷ್ಣಾಂಶ ಹೆಚ್ಚಳ' ವೆಂದು ಕರೆಯುವರು. ಈ ಹೆಚ್ಚಳಕ್ಕೆ ಹಸಿರು ಮನೆಯ ಪರಿಣಾಮ ಕಾರಣವಾಗಿದ್ದು ಇದರಿಂದ ವಾಯುಗುಣದ ವಲಯಗಳು ಬದಲಾವಣೆ ಹೊಂದುತ್ತಿವೆ, ಹಿಮನದಿಗಳು ಕರುಗುತ್ತಿವೆ ಮತ್ತು ಸಮುದ್ರದ ನೀರಿನ ಮಟ್ಟವು ಹೆಚ್ಚುತ್ತಿದೆ. ಉದಾಹರಣೆಗೆ ಹಿಮಾಲಯ ಹಾಗೂ ಅಂಟಾರ್ಕ್ಟಿಕಗಳಲ್ಲಿ ಈಗಾಗಲೇ ಹಿಮರಾಶಿಯು ಕರುಗುತ್ತಿದೆ.

**ಹಸಿರು ಮನೆಯ ಪರಿಣಾಮ (Green House Effect):** ಭೂಮಿಯು ಸೂರ್ಯನಿಂದ ಶಕ್ತಿಯನ್ನು ವಿಕಿರಣದ ರೂಪದಲ್ಲಿ ಪಡೆಯುವುದು. ಇದೇ ರೀತಿಯಲ್ಲಿ ಭೂಮಿಯಿಂದಲೂ ಶಕ್ತಿಯು ಹೊರಬೀಳುವುದು. ಈ ಕ್ರಿಯಗಳಿಂದಾಗಿಯೇ ಭೂಮಿಯು ಪಡೆಯುವ ಹಾಗೂ ಬಿಡುಗಡೆಮಾಡುವ ಶಕ್ತಿಯ ನಡುವೆ ಸಮತೋಲನವಿರುವುದು. ಇತ್ತೀಚಿಗೆ ಜೀವಾವಶೇಷ ಇಂಧನಗಳ ಬಳಕೆಯಿಂದ ಹಸಿರುಮನೆ ಅನಿಲಗಳ ಬಿಡುಗಡೆಯೂ ಸಹ ನಿರಂತರವಾಗಿ ಹೆಚ್ಚುತ್ತಿದೆ. ಇಂಗಾಲದ ಡೈ ಆಕ್ಸೈಡ್ ಮತ್ತು ಇತರೆ ಹಸಿರು ಮನೆ ಅನಿಲಗಳು ಭೂಮಿಯಿಂದ ಬಿಡುಗಡೆಯಾಗುವ ಉಷ್ಣಾಂಶವನ್ನು ಹೀರಿ ಸಂಗ್ರಹಿಸುವುದರಿಂದ ವಾಯುಮಂಡಲ ಉಷ್ಣಾಂಶವು ಹೆಚ್ಚುವುದು. ಇದನ್ನೇ 'ಹಸಿರು ಮನೆಯ ಪರಿಣಾಮ' ವೆಂದು ಕರೆಯುವರು.

**ಓಜೋನ್ ಪದರ ಕ್ಷೀಣತೆ: (Ozone Depletion):** ವಾಯುಮಂಡಲದ ಸಮೋಷ್ಣ ವಲಯದಲ್ಲಿ ತೆಳುವಾದ ಓಜೋನ್ ಅನಿಲದ ಪದರವಿರುವುದು. ಇದು ಸೂರ್ಯನಿಂದ ಪ್ರಸರಿಸುವ ಅತ್ಯಂತ ಅಪಾಯಕಾರಿಯಾದ ಅಲ್ಟ್ರಾವೈಲೆಟ್ (UV) ಕಿರಣಗಳನ್ನು ಹೀರಿಕೊಂಡು ಭೂಮಿಯ ಮೇಲಿನ ಎಲ್ಲಾ ಬಗೆಯ ಜೀವರಾಶಿಗಳನ್ನು ರಕ್ಷಿಸಿದೆ. ಇತ್ತೀಚಿನ ವರ್ಷಗಳಲ್ಲಿ ಏರ್‌ಕಂಡಿಷನರ್, ರೆಫ್ರಿಜಿರೇಟರ್, ಸ್ಪ್ರೇಯರ್, ಸುಗಂಧದ್ರವ್ಯಗಳ ಬಳಕೆ ಮೊದಲಾದುವುಗಳ ಅಪಾರ ಬಳಕೆಯಿಂದ ಕ್ಲೋರೋ ಫ್ಲೋರೋ ಕಾರ್ಬನ್ (C.F.C) ಗಳು ಹೆಚ್ಚಾಗಿ ಬಿಡುಗಡೆಗೊಂಡು ವಾಯುಮಂಡಲದ ಓಜೋನ್ ಪದರವನ್ನು ನಾಶಪಡಿಸುತ್ತಿವೆ. ಈಗಾಗಲೇ ಅಂಟಾರ್ಕ್ಟಿಕಾದ ವಾಯುಮಂಡಲದಲ್ಲಿ ಓಜೋನ್ ಪದರವು ನಾಶವಾಗಿರುವುದನ್ನು ಕಂಡು ಹಿಡಿಯಲಾಗಿದೆ. ಈ ರೀತಿ ಓಜೋನ್ ತೆಳುವಾಗುವಿಕೆಯು ಓಜೋನ್ ರಂಧ್ರ ಉಂಟುಮಾಡುತ್ತಿದ್ದು ಇವನ್ನು ತಡೆಗಟ್ಟುವುದು ಮುಂದಿನ ಜನಾಂಗಗಳು ಭೂಮಿಯ ಮೇಲೆ ನಿರಾಂತಕವಾಗಿ ಬದುಕಲು ಅತ್ಯಾವಶ್ಯಕವಾಗಿದೆ.

**ಆಮ್ಲೀಯ ಮಳೆ: (Acid Rain):** ಮಳೆಯ ನೀರಿನಲ್ಲಿ ಸಲ್ಫೂರಿಕ್ ಆಮ್ಲ ಮತ್ತು ಇಂಗಾಲದ ಮಾನಾಕ್ಸೈಡ್ ಮೊದಲಾದ ಆಮ್ಲಗಳು ಹೆಚ್ಚಾಗಿರುವುದನ್ನೇ 'ಆಮ್ಲೀಯ ಮಳೆ' ಎಂದು ಕರೆಯಲಾಗಿದೆ. ಈ ರೀತಿಯ ಮಳೆ ಅತ್ಯಂತ ವಿಷಕಾರಿಯಾಗಿದ್ದು, ಜಲಚರಗಳ ನಾಶಕ್ಕೆ ಕಾರಣವಾಗುವುದು. ಅಲ್ಲದೆ ಆಮ್ಲೀಯ ಮಳೆಯಿಂದ ಅರಣ್ಯಗಳು, ವ್ಯವಸಾಯದ ಬೆಳೆಗಳು, ಕಟ್ಟಡಗಳು, ಸ್ಮಾರಕ ಮೊದಲಾದವುಗಳು ಹಾಳಾಗುತ್ತವೆ.

ಆಮ್ಲೀಯ ಮಳೆಯನ್ನು 'ಲೇಕ್‌ಕಿಲ್ಲರ್' ಎಂದು ಕರೆಯುತ್ತಾರೆ. ಪೋಲೆಂಡ್, ಜೆಕ್‌ಗಣರಾಜ್ಯ ಮತ್ತು ಆಗ್ನೇಯ ಜರ್ಮನಿಯ ಭಾಗಗಳು ಪ್ರಪಂಚದಲ್ಲೇ ಅತಿ ಹೆಚ್ಚು ಆಮ್ಲೀಯ ಮಳೆಯ ಪರಿಣಾಮಕ್ಕೆ ಒಳಪಟ್ಟಿರುವ ಪ್ರದೇಶಗಳಾಗಿರುವುದರಿಂದ ಇವುಗಳನ್ನು ಕಪ್ಪು ತ್ರಿಕೋಣ ಎನ್ನುವರು.

**ಜೀವ ವೈವಿಧ್ಯತೆ:** ಒಂದು ಭೂ ಭಾಗದಲ್ಲಿ ಕಂಡುಬರುವ ಎಲ್ಲಾ ಬಗೆಯ ಸಸ್ಯಗಳು ಹಾಗೂ ಪ್ರಾಣಿ ಪ್ರಭೇಧಗಳನ್ನು ಅಲ್ಲಿಯ 'ಜೀವ ವೈವಿಧ್ಯತೆ' ಯೆಂದು ಕರೆಯುವರು. ಜೀವಿ ಪ್ರಭೇಧಗಳ ಸಂಖ್ಯೆಯು ಜೀವ ವೈವಿಧ್ಯತೆಯನ್ನು ಪ್ರತಿಬಿಂಬಿಸುವುದು. ಜೀವವೈವಿಧ್ಯತೆ ಅತ್ಯಂತ ಪ್ರಮುಖವಾದುದು. ಏಕೆಂದರೆ ಇದು ಪರಿಸರದ ಗುಣಮಟ್ಟವನ್ನು ಕಾಯ್ದುಕೊಳ್ಳಲು ಮಾತ್ರವಲ್ಲದೆ ಮಾನವನ ಉಳಿವಿಗೂ ಸಹ ಅಗತ್ಯವಾಗಿದೆ.

ಅತ್ಯಂತ ಅಪರೂಪವಾಗಿರುವ ಸಸ್ಯ ಹಾಗೂ ಪ್ರಾಣಿ ಪ್ರಭೇಧಗಳನ್ನು ಕಾಪಾಡಲು ಜೀವ ವೈವಿಧ್ಯತೆಯ ಸಂರಕ್ಷಣೆ ಅಗತ್ಯ. ಈ ಜೀವಿಗೆ ಅಗತ್ಯವಾದ ಒಳ್ಳೆಯ ಪರಿಸರದ ಹಿನ್ನೆಲೆಯನ್ನು ದೊರಕಿಸಿಕೊಡುವುದು ಅವುಗಳ ಸಂರಕ್ಷಣೆಯ ಮುಖ್ಯ ವಿಧಾನವಾಗಿದೆ.

ಭೂಮಿಯು ಸೌರವ್ಯೂಹದಲ್ಲಿನ ಏಕೈಕಜೀವಿಗಳನ್ನೊಳಗೊಂಡಿರುವ ಗ್ರಹ. ಮಾನವನ ವಿವಿಧ ಚಟುವಟಿಕೆಗಳಿಂದ ಭೂಮಿಯ ಮೇಲೆ ಅನೇಕ ರೀತಿಯ ಬದಲಾವಣೆಗಳು, ತೊಂದರೆಗಳು, ಹಾನಿಕಾರಕ ಅಂಶಗಳು ಕಂಡುಬರುತ್ತಿದ್ದು ಭೂಮಿಯ ಭವಿಷ್ಯವೇ ಡೋಲಾಯಮಾನವಾಗಿದೆ.

ನಮ್ಮ ಭೂಮಿಯನ್ನು 'ರಕ್ಷಿಸಿ' ಹಾಗೂ 'ಮಾತೃಗ್ರಹ'ವನ್ನು ಉಳಿಸಿಕೊಳ್ಳಲು ಜನರಿಗೆ ಶಿಕ್ಷಣನೀಡುವುದು, ಪರಿಸರದ ಬಗ್ಗೆ ಅರಿವುನ್ನುಂಟುಮಾಡುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು, ಸಂಪನ್ಮೂಲಗಳನ್ನು ಸರಿಯಾಗಿ ಬಳಸುವುದು, ಮಾಲಿನ್ಯ ನಿಯಂತ್ರಿಸುವುದರ ಬಗ್ಗೆ ಅರಿವು ನೀಡುವ ಶಿಕ್ಷಣ, ಉಪನ್ಯಾಸ, ಆಶುಭಾಷಣ ಸ್ಪರ್ಧೆ, ಚಲನಚಿತ್ರಗಳ ಸಮ್ಮೇಳನಗಳನ್ನು ಆಗಾಗ್ಗೆ ನಡೆಸುವುದರ ಮೂಲಕ ಜಾಗೃತಿ ಮೂಡಿಸಿ ನಮ್ಮ ಮಾತೃಭೂಮಿಯನ್ನು ಸಂರಕ್ಷಿಸುವುದು ಅಗತ್ಯವಾಗಿದೆ.



'ಭೂಮಿಯನ್ನು ರಕ್ಷಿಸಿ' 'ಮಾತೃಗ್ರಹವನ್ನು ರಕ್ಷಿಸಿ'

## ಅಭ್ಯಾಸಗಳು

**I ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1 ಜೀವಗೋಳವೆಂದರೇನು ?

2 'ಜೀವಿ ಪರಿಸರ ಶಾಸ್ತ್ರ' ವನ್ನು ವ್ಯಾಖ್ಯಾನಿಸಿ.

3 ಪರಿಸರ ಮಾಲಿನ್ಯದ ವಿಧಗಳನ್ನು ಹೆಸರಿಸಿ.

4 ಜಲಮಾಲಿನ್ಯವನ್ನು ನಿಯಂತ್ರಿಸಲು ಕೈಗೊಂಡಿರುವ ಕ್ರಮಗಳಾವುವು?

5 ಜೀವಿ ವೈವಿಧ್ಯತೆ ಎಂದರೇನು ?

**II ಈ ಕೆಳಗಿನವುಗಳನ್ನು ಅರ್ಥೈಸಿ.**

1. ಜೀವಗೋಳ
2. ಪರಿಸರ ಅಸಮತೋಲನ
3. ಜಾಗತಿಕ ತಾಪಮಾನ
4. ಹಸಿರುಮನೆ ಪರಿಣಾಮ
5. ಓಜೋನ್ ತೆಳುವಾಗುವಿಕೆ
6. ಆಮ್ಲಮಳೆ

**III ನೆನಪಿನಲ್ಲಿಡಬೇಕಾದ ಅಂಶಗಳು.**

1. ಮಾಲಿನ್ಯ
2. ಪರಿಸರ ದಿನಾಚರಣೆ
3. ವಾಯುಗುಣ ಬದಲಾವಣೆ
4. ಕ್ಲೋರೋಫ್ಲೋರೋ ಕಾರ್ಬನ್ **(C F C)**
5. ಭೂ ಸಮಯ ಅಥವಾ ಭೂ ದಿನಾಚರಣೆ
6. ಭೂಮಿಯನ್ನು ರಕ್ಷಿಸಿ.

**IV ಚಟುವಟಿಕೆ.**

1. ವಿಶ್ವ ಉಷ್ಣಾಂಶದ ಹೆಚ್ಚಳದಿಂದಾಗುವ ಪರಿಣಾಮದ ಬಗ್ಗೆ ಮಾಹಿತಿ ಸಂಗ್ರಹಿಸಿ ಮತ್ತು ನಿಯಂತ್ರಿಸಲು ಕೈಗೊಳ್ಳಬೇಕಾಗದ ಕ್ರಮಗಳನ್ನು ಪ್ರಚುರ ಪಡಿಸಿರಿ.

# ಅರ್ಥಶಾಸ್ತ್ರ

## ಅಧ್ಯಾಯ-1

## ಅರ್ಥಶಾಸ್ತ್ರದ ಅರ್ಥ ಮತ್ತು ಮಹತ್ವ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಅರ್ಥಶಾಸ್ತ್ರದ ವ್ಯಾಪ್ತಿಯಲ್ಲಿ ಅನುಬೋಗಿಗಳು, ಮಾರಾಟಗಾರರು, ಸೇವಾ ಪೂರೈಕೆದಾರರು, ಉತ್ಪಾದಕರು, ಶ್ರಮಿಕರು, ಇವರುಗಳ ಪಾತ್ರವನ್ನು ಅರ್ಥೈಸಿಕೊಳ್ಳುವುದು.
- ಅರ್ಥಶಾಸ್ತ್ರದ ಅಧ್ಯಯನದ ಮಹತ್ವವನ್ನು ಅರಿಯುವುದು.
- ಆರ್ಥಿಕ ಚಟುವಟಿಕೆಗಳು, ಉತ್ಪಾದನೆ ಮತ್ತು ಉತ್ಪಾದನಾಂಗಗಳನ್ನು ಪರಿಚಯಿಸಿಕೊಳ್ಳುವುದು.

**ಅರ್ಥಶಾಸ್ತ್ರದ ಅರ್ಥ :**

ನಾವು ಪ್ರತಿದಿನ ಹಲವಾರು ರೀತಿಯ ಸರಕುಗಳನ್ನು ಮತ್ತು ಸೇವೆಗಳನ್ನು ಬಳಸುತ್ತೇವೆ. ಆ ಮೂಲಕ ನಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳುತ್ತೇವೆ. ಊಟ ಮಾಡುತ್ತೇವೆ, ಬಟ್ಟೆ ತೊಡುತ್ತೇವೆ, ಪೆನ್ನು, ಪುಸ್ತಕ, ಬೈಸಿಕಲ್ಲು, ಟಿ.ವಿ, ಮೊಬೈಲು ಮುಂತಾದ ನಾನಾ ಬಗೆಯ ಸರಕುಗಳನ್ನು ಬಳಸುತ್ತೇವೆ. ಓದು-ಬರಹ ಕಲಿಯಲು ಶಿಕ್ಷಕರ ಸೇವೆಯನ್ನು, ಅನಾರೋಗ್ಯಕ್ಕೆ ತುತ್ತಾದಾಗ ವೈದ್ಯರ ಸೇವೆಯನ್ನು ಬಳಸಿಕೊಳ್ಳುತ್ತೇವೆ. ಇದೇ ರೀತಿಯಲ್ಲಿ ನಮ್ಮ ಸುತ್ತಮುತ್ತಲಿನ ಎಲ್ಲ ಜನರೂ ಈ ಬಗೆಯ ಸರಕುಗಳನ್ನು, ಸೇವೆಗಳನ್ನು ಬಳಸುತ್ತಾರೆ. ಇವರೆಲ್ಲರನ್ನು ಅನುಭೋಗಿಗಳು ಎಂದು ಕರೆಯಲಾಗುತ್ತದೆ.

ನಾವು ಬಳಸುವ ಬಹುತೇಕ ಸರಕುಗಳು ನಮಗೆ ಪುಕ್ಕಟೆ ದೊರೆಯುವುದಿಲ್ಲ. ಇವುಗಳನ್ನು ಹಣಕೊಟ್ಟು ಕೊಂಡು ತರಬೇಕಾಗುತ್ತದೆ. ಅನುಭೋಗಿಗಳಿಗೆ ಬೇಕಾದ ಸರಕುಗಳನ್ನು ಉತ್ಪಾದಕರಿಂದ ಪಡೆದು ಮಾರಾಟ ಮಾಡುವವರನ್ನು ಮಾರಾಟಗಾರರು ಎನ್ನುತ್ತಾರೆ.

ಕೃಷಿಕರು ಆಹಾರ ಧಾನ್ಯಗಳನ್ನು, ಹಣ್ಣು-ತರಕಾರಿಗಳನ್ನು ಬೆಳೆಯುತ್ತಾರೆ. ಚಮ್ಮಾರ ನಮಗೆ ಬೇಕಾದ ಚಪ್ಪಲಿಗಳನ್ನು ತಯಾರಿಸಿ ಕೊಡುತ್ತಾನೆ. ಚಿನಿವಾರ ಚಿನ್ನಾಭರಣಗಳನ್ನು ತಯಾರಿಸುತ್ತಾನೆ. ಟೈಲರ್ ನಮಗೆ ಬಟ್ಟೆ ಹೊಲಿದುಕೊಡುತ್ತಾನೆ. ಕಾರ್ಖಾನೆಗಳ ಮಾಲಿಕರು ನಾನಾ ಬಗೆಯ ಸರಕುಗಳನ್ನು ತಯಾರಿಸುತ್ತಾರೆ. ಇವರೆಲ್ಲರನ್ನೂ ಉತ್ಪಾದಕರು ಎನ್ನುತ್ತೇವೆ.

ಹೊಲಗದ್ದೆಗಳಲ್ಲಿ ಕೃಷಿ ಕಾರ್ಮಿಕರು, ಕಾರ್ಖಾನೆಗಳಲ್ಲಿ ಕಾರ್ಮಿಕರು, ಹೋಟೆಲ್, ವ್ಯಾಪಾರ-ವ್ಯವಹಾರ, ಮಾಹಿತಿತಂತ್ರಜ್ಞಾನದ ಕಂಪನಿಗಳು ಮುಂತಾದ ಕಡೆಗಳಲ್ಲಿ ನಾನಾ ಬಗೆಯ ಉದ್ಯೋಗಗಳಲ್ಲಿ ಜನರು ಕೂಲಿಗಾಗಿ ದುಡಿಯುತ್ತಾರೆ. ಇವರೆಲ್ಲರನ್ನು ಶ್ರಮಿಕರು ಎಂದು ಕರೆಯಲಾಗುತ್ತದೆ.

ಬಸ್ಸು, ಲಾರಿ, ರೈಲು, ದೋಣಿ, ಹಡಗು, ವಿಮಾನ ಮುಂತಾದ ಸಾರಿಗೆ ವಾಹನಗಳನ್ನು ಜನರು ಹಾಗೂ ಸರಕುಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಲು ಬಳಸುತ್ತೇವೆ. ವಿದ್ಯುತ್ ಕಂಪನಿಯವರು ಜನರಿಗೆ ವಿದ್ಯುತ್ ಒದಗಿಸುತ್ತಾರೆ. ದೂರವಾಣಿ ಕಂಪನಿಯವರು ದೂರವಾಣಿ, ಮೊಬೈಲ್ ಮತ್ತು ಅಂತರ್ಜಾಲ ಸೇವೆಗಳನ್ನು ಒದಗಿಸುತ್ತಾರೆ. ಇದಕ್ಕಾಗಿ ಇವರಿಗೆ ಹಣ ಕೊಡಬೇಕಾಗುತ್ತದೆ. ಈ ರೀತಿಯ ಸೇವೆಗಳನ್ನು ಒದಗಿಸುವವರನ್ನು ಸೇವಾ ಪೂರೈಕೆದಾರರು ಎನ್ನುತ್ತೇವೆ.

ಮೇಲಿನ ಎಲ್ಲ ಸಂದರ್ಭಗಳನ್ನು ಗಮನಿಸಿ. ಅನುಭೋಗಿಗಳು ತಮಗೆ ಬೇಕಾದ ಸರಕುಗಳು ಮತ್ತು ಸೇವೆಗಳನ್ನು ಹಣಕೊಟ್ಟು ಪಡೆದುಕೊಳ್ಳುತ್ತಾರೆ. ಮಾರಾಟಗಾರರು, ಉತ್ಪಾದಕರು, ಶ್ರಮಿಕರು ಮತ್ತು ಸೇವಾ ಪೂರೈಕೆದಾರರು ಲಾಭದಾಯಕ ವ್ಯವಹಾರಗಳನ್ನು ಮಾಡುತ್ತಾರೆ. ಹೀಗೆ ಮಾನವನು ಹಣ ಗಳಿಸಲು ಮತ್ತು ಹಣ ಬಳಸಲು ಮಾಡುವ ಎಲ್ಲ ಚಟುವಟಿಕೆಗಳು ಆರ್ಥಿಕ ಚಟುವಟಿಕೆಗಳೆನಿಸಿವೆ. ಮಾನವನ ದಿನ ನಿತ್ಯದ ಆರ್ಥಿಕ ಚಟುವಟಿಕೆಗಳನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರವೇ ಅರ್ಥಶಾಸ್ತ್ರ.

ಭಾರತೀಯರು ಪ್ರಾಚೀನ ಕಾಲದಿಂದಲೂ ಮಾನವನ ಆರ್ಥಿಕ ಚಟುವಟಿಕೆಗಳ ಅಧ್ಯಯನಕ್ಕೆ ಸಾಕಷ್ಟು ಮಹತ್ವ ನೀಡಿದ್ದರು. ಮನುಸ್ಮೃತಿಯಲ್ಲಿ ಕೃಷಿ, ಕೈಗಾರಿಕೆ, ತೆರಿಗೆ, ಕಂದಾಯ ಮುಂತಾದ ಆರ್ಥಿಕ ಅಂಶಗಳ ಬಗ್ಗೆ ವಿವರವಾದ ಮಾಹಿತಿಗಳು ಸಿಗುತ್ತವೆ. ಮೌರ್ಯರ ಕಾಲದಲ್ಲಿದ್ದ ಕೌಟಿಲ್ಯನು ಅರ್ಥಶಾಸ್ತ್ರ ಎಂಬ ಪುಸ್ತಕವನ್ನು ರಚಿಸಿದ್ದಾನೆ. ಇದು ರಾಜ್ಯಾಡಳಿತದ ವಿವರಗಳ ಜೊತೆಗೆ ಹಣಕಾಸು ನಿರ್ವಹಣೆ ಹಾಗೂ ಸಾರ್ವಜನಿಕ ಅರ್ಥವ್ಯವಸ್ಥೆಯ ಬಗ್ಗೆ ವಿವರವಾದ ಮಾಹಿತಿ ಒದಗಿಸುತ್ತದೆ.

ಅರ್ಥಶಾಸ್ತ್ರ ಎಂಬ ಪದವನ್ನು ಇಂಗ್ಲಿಷ್ ಭಾಷೆಯ ಎಕನಾಮಿಕ್ಸ್ ಎಂಬ ಪದಕ್ಕೆ ಸಮಾನಾರ್ಥಕ ಶಬ್ದವಾಗಿ ಬಳಸಲಾಗುತ್ತಿದೆ. ಎಕನಾಮಿಕ್ಸ್ ಪದವು ಗ್ರೀಕ್ ಭಾಷೆಯ ಓಕೊಸ್ ಮತ್ತು ನೊಮೊಸ್ ಎಂಬ ಎರಡು ಪದಗಳಿಂದಾಗಿದೆ. ಗ್ರೀಕ್ ಭಾಷೆಯಲ್ಲಿ ಓಕೊಸ್ ಎಂದರೆ ಗೃಹ ಎಂತಲೂ, ನೊಮೊಸ್ ಎಂದರೆ ನಿರ್ವಹಣೆ ಎಂತಲೂ ಅರ್ಥವಿದೆ. ಆದುದರಿಂದ ಸಂಪನ್ಮೂಲಗಳನ್ನು ಅತ್ಯುತ್ತಮವಾಗಿ ಬಳಸಿಕೊಂಡು, ಕುಟುಂಬದ ಎಲ್ಲ ಸದಸ್ಯರು ಸುಖ–ನೆಮ್ಮದಿಯಿಂದ ಬದುಕುವಂತೆ ನಿರ್ವಹಿಸುವುದು ಎಂದು ಅರ್ಥ. ಕಾಲಕ್ರಮೇಣ ಅರ್ಥಶಾಸ್ತ್ರದ ವ್ಯಾಪ್ತಿ ವಿಸ್ತರಣೆಗೊಂಡು ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದವರೆಗೆ ವ್ಯಾಪಿಸಿದೆ.

ಅರ್ಥಶಾಸ್ತ್ರದ ಅಧ್ಯಯನದ ವಿಷಯವು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿದೆ. 18 ನೇ ಶತಮಾನದಲ್ಲಿದ್ದ ಅರ್ಥಶಾಸ್ತ್ರದ ಪಿತಾಮಹರೆನಿಸಿರುವ ಆಡಂಸ್ಮಿತ್‌ರವರು 'ಅರ್ಥಶಾಸ್ತ್ರವು ಸಂಪತ್ತನ್ನು ಕುರಿತು ಅಧ್ಯಯನ ಮಾಡುತ್ತದೆ' ಎಂದು ಹೇಳಿದ್ದಾರೆ.

**ಅರ್ಥಶಾಸ್ತ್ರದ ಅಧ್ಯಯನದ ಮಹತ್ವ**

ಮಾನವನ ಬಹುತೇಕ ಚಟುವಟಿಕೆಗಳ ಹಿಂದೆ ಆರ್ಥಿಕ ಅಂಶ ಅಡಗಿರುತ್ತದೆ. ಅರ್ಥಶಾಸ್ತ್ರ ನಮ್ಮ ಬದುಕಿಗೆ ಹಲವು ರೀತಿಯಲ್ಲಿ ಸಹಕಾರಿಯಾಗಿದೆ. ಪ್ರತಿಯೊಬ್ಬ ನಾಗರಿಕನಿಗೆ ಅರ್ಥಶಾಸ್ತ್ರದ ಜ್ಞಾನ ಇರಬೇಕಾಗುತ್ತದೆ. ಅರ್ಥಶಾಸ್ತ್ರದ ಅಧ್ಯಯನದ ಮಹತ್ವವನ್ನು ಈ ಕೆಳಕಂಡ ಅಂಶಗಳು ತಿಳಿಸಿಕೊಡುತ್ತವೆ.

- ಅರ್ಥಶಾಸ್ತ್ರವು ನಮ್ಮ ಸುತ್ತಮುತ್ತ ಕಂಡುಬರುವ ಬಡತನ, ನಿರುದ್ಯೋಗ, ಆರ್ಥಿಕ ಅಸಮಾನತೆ ಮುಂತಾದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಅವುಗಳಿಗೆ ಪರಿಹಾರೋಪಾಯಗಳನ್ನು ಕಂಡುಹಿಡಿಯಲು ಸಹಾಯಮಾಡುತ್ತದೆ.
- ನಮ್ಮಲ್ಲಿರುವ ಮಿತವಾದ ಸಂಪನ್ಮೂಲಗಳಿಂದ ಅಮಿತವಾದ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಮುಂದಾದಾಗ ಆಯ್ಕೆಯ ಸಮಸ್ಯೆಗಳು ಎದುರಾಗುತ್ತವೆ. ಇಂತಹ ಸನ್ನಿವೇಶಗಳಲ್ಲಿ ಅರ್ಥಶಾಸ್ತ್ರ ಪರಿಹಾರಗಳನ್ನು ಒದಗಿಸುತ್ತದೆ.
- ಉತ್ಪಾದಕರು ಸರಕುಗಳು ಮತ್ತು ಸೇವೆಗಳನ್ನು ಉತ್ಪಾದಿಸಲು ಮುಂದಾದಾಗ, ಏನನ್ನು ಉತ್ಪಾದಿಸಬೇಕು ? ಹೇಗೆ ಉತ್ಪಾದಿಸಬೇಕು ? ಯಾರಿಗಾಗಿ ಉತ್ಪಾದಿಸಬೇಕು ? ಯಾವ ಬೆಲೆಯಲ್ಲಿ ಉತ್ಪಾದಿಸಬೇಕು ? ಎಂಬ ಮೂಲಭೂತ ಸಮಸ್ಯೆಗಳು ಎದುರಾಗುತ್ತವೆ. ಇಂತಹ ಸಂದರ್ಭಗಳಲ್ಲಿ ಅರ್ಥಶಾಸ್ತ್ರವು ಅವರಿಗೆ ಮಾರ್ಗದರ್ಶನ ಮಾಡುತ್ತದೆ.

- ಅರ್ಥಶಾಸ್ತ್ರವು ಬೆಲೆಗಳ ಏರಿಳಿತದ ಕಾರಣಗಳು ಮತ್ತು ಪರಿಣಾಮಗಳನ್ನು ಗುರುತಿಸಿ, ಬೆಲೆಗಳಲ್ಲಿ ಸ್ಥಿರತೆಯನ್ನು ಕಾಯ್ದುಕೊಳ್ಳಲು ಉಪಾಯಗಳನ್ನು ಸೂಚಿಸುತ್ತದೆ.
- ಭೂಮಿ, ನೀರು, ಅರಣ್ಯ, ಖನಿಜಗಳು ಮುಂತಾದ ನೈಸರ್ಗಿಕ ಸಂಪತ್ತುಗಳು ಮಿತವಾಗಿದ್ದು, ಅವುಗಳನ್ನು ಮಿತವಾಗಿ ಮತ್ತು ದಕ್ಷವಾಗಿ ಬಳಸಿಕೊಳ್ಳುವುದರ ಜೊತೆಗೆ ಈ ಸಂಪನ್ಮೂಲಗಳು ಮುಂದಿನ ಜನಾಂಗಗಳಿಗೂ ದೊರಕುವಂತೆ ಮಾಡಲು ಮಾರ್ಗಗಳನ್ನು ಸೂಚಿಸುತ್ತದೆ.

ಹೀಗೆ ಅರ್ಥಶಾಸ್ತ್ರವು ನಮ್ಮ ದಿನನಿತ್ಯದ ಬದುಕಿಗೆ ಸಹಾಯಕವಾಗಿದೆ. ಆದುದರಿಂದ ಅರ್ಥಶಾಸ್ತ್ರದ ಅಧ್ಯಯನವು ನಮಗೆ ಜ್ಞಾನದಾಯಕವಾಗಿದೆ ಅಲ್ಲದೆ ಲಾಭದಾಯಕವೂ ಆಗಿದೆ.

> ಅರ್ಥಶಾಸ್ತ್ರದ ಅಧ್ಯಯನವು ಕೇವಲ ಜ್ಞಾನದಾಯಕವಾಗಿರದೆ ಫಲದಾಯಕವೂ ಆಗಿದೆ.
>
> –ಎ.ಸಿ.ಪಿ ಗೂ

**ಆರ್ಥಿಕ ಚಟುವಟಿಕೆಗಳು**

> ಬಯಕೆಗಳೇ ಎಲ್ಲ ಆರ್ಥಿಕ ಚಟುವಟಿಕೆಗಳ ಮೂಲ

ಮಾನವನಲ್ಲಿ ಅಪರಿಮಿತವಾದ ಬಯಕೆಗಳಿವೆ ಎಂದು ಈಗಾಗಲೇ ತಿಳಿದಿದ್ದೇವೆ. ಈ ಬಯಕೆಗಳನ್ನು ತೃಪ್ತಿಪಡಿಸುವ ಶಕ್ತಿ ಸರಕು ಮತ್ತು ಸೇವೆಗಳಲ್ಲಿದೆ. ಇದನ್ನು ತುಷ್ಟೀಗುಣ ಎನ್ನುತ್ತೇವೆ. ಉದಾ: ನಮಗೆ ಹಸಿವಾದಾಗ ಊಟಮಾಡುತ್ತೇವೆ. ಊಟಕ್ಕೆ ನಮ್ಮ ಈ ಬಯಕೆಯನ್ನು ತೃಪ್ತಿಪಡಿಸುವ ಶಕ್ತಿಯಿದೆ. ಬಾಯಾರಿಕೆಯಾದಾಗ ನೀರು ಕುಡಿಯುವ ಬಯಕೆಯಾಗುತ್ತದೆ. ನೀರಿಗೆ ಬಾಯಾರಿಕೆಯನ್ನು ತೃಪ್ತಿಪಡಿಸುವ ಶಕ್ತಿಯಿದೆ.

ನಾವು ದಿನನಿತ್ಯ ಬಳಸುವ ಬಹಳಷ್ಟು ಸರಕುಗಳು ಮತ್ತು ಸೇವೆಗಳು ಕೊರತೆಯಲ್ಲಿದ್ದು, ಅವು ನಮಗೆ ಪುಕ್ಕಟೆಯಾಗಿ ದೊರೆಯುವುದಿಲ್ಲ. ಅವುಗಳನ್ನು ಹಣಕೊಟ್ಟು ಕೊಳ್ಳಬೇಕಾಗುತ್ತದೆ. ಇಂತಹ ಸರಕು–ಸೇವೆಗಳನ್ನು ಆರ್ಥಿಕ ಸರಕು–ಸೇವೆಗಳು ಎನ್ನುತ್ತಾರೆ. ಹಾಗಾದರೆ ನಮಗೆ ಹಣ ಹೇಗೆ ದೊರೆಯುತ್ತದೆ ?. ನಾವು ಹಣ ಗಳಿಸಲು ಯಾವುದಾದರೊಂದು ಉದ್ಯೋಗವನ್ನು ಮಾಡಬೇಕಾಗುತ್ತದೆ. ಹೀಗೆ ಮಾನವನು ತನ್ನ ಶ್ರಮ ಮತ್ತು ಕೌಶಲ್ಯವನ್ನು ಬಳಸಿ ಹಣವನ್ನು ಗಳಿಸುತ್ತಾನೆ. ಆ ಹಣದಿಂದ ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುತ್ತಾನೆ. ಮಾನವನು ಹಣವನ್ನು ಹಾಗೂ ಸಂಪತ್ತನ್ನು ಗಳಿಸಲು ಆ ಮೂಲಕ ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಅನೇಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾನೆ. ಇಂತಹ ಚಟುವಟಿಕೆಗಳನ್ನೇ ಆರ್ಥಿಕ ಚಟುವಟಿಕೆಗಳು ಎನ್ನುತ್ತೇವೆ.

ಆರ್ಥಿಕ ಚಟುವಟಿಕೆಗಳ ಬಹುಮುಖ್ಯ ಉದ್ದೇಶ ಮಾನವನ ಬಯಕೆಗಳನ್ನು ತೃಪ್ತಿಪಡಿಸುವುದಾಗಿದೆ. ಯಾವುದೇ ಸಮಾಜದಲ್ಲಿ ಆರ್ಥಿಕ ಚಟುವಟಿಕೆಗಳು ಕೆಲವು ನಿಯಮ ಮತ್ತು ಸಂಪ್ರದಾಯಗಳ ಚೌಕಟ್ಟಿನಲ್ಲಿ ನಡೆಯುತ್ತವೆ. ಮಾನವನ ಆರ್ಥಿಕ ಚಟುವಟಿಕೆಗಳನ್ನು ಮುಖ್ಯವಾಗಿ ನಾಲ್ಕು ಗುಂಪುಗಳನ್ನಾಗಿ ವರ್ಗೀಕರಿಸಬಹುದಾಗಿದೆ. ಅವುಗಳೆಂದರೆ:

**1. ಉತ್ಪಾದಕ ಚಟುವಟಿಕೆಗಳು :** ಸರಕು–ಸೇವೆಗಳನ್ನು ಉತ್ಪಾದಿಸಲು ಕೈಗೊಳ್ಳಲಾಗುವ ಚಟುವಟಿಕೆಗಳೇ ಉತ್ಪಾದಕ ಚಟುವಟಿಕೆಗಳು. ಉದಾ: ವ್ಯವಸಾಯ, ಪಶುಪಾಲನೆ, ಮೀನುಗಾರಿಕೆ, ಗಣಿಗಾರಿಕೆ, ಅರಣ್ಯ ಬೆಳೆಸುವುದು, ವಿವಿಧ ರೀತಿಯ ಕೈಗಾರಿಕೆಗಳು, ಸಾರಿಗೆ, ಸಂಪರ್ಕ ಇತ್ಯಾದಿ.

**2. ಅನುಭೋಗಿ ಚಟುವಟಿಕೆಗಳು :** ಸರಕುಗಳು ಮತ್ತು ಸೇವೆಗಳನ್ನು ಉತ್ಪಾದಿಸುವುದೇ ಅನುಭೋಗಕ್ಕಾಗಿ. ಮಾನವನು ಸರಕು–ಸೇವೆಗಳನ್ನು ಬಳಸಿಕೊಳ್ಳುವ ಮೂಲಕ ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುತ್ತಾನೆ. ಈ ಎಲ್ಲ ಚಟುವಟಿಕೆಗಳನ್ನು ಅನುಭೋಗಿ ಚಟುವಟಿಕೆಗಳು ಒಳಗೊಂಡಿವೆ.

**3. ವಿನಿಮಯ ಚಟುವಟಿಕೆಗಳು :** ಉತ್ಪಾದಕರು ಅನುಭೋಗಿಗಳಿಗಾಗಿ ಸರಕುಗಳನ್ನು ಉತ್ಪಾದಿಸುತ್ತಾರೆ. ಉತ್ಪಾದಕರು ಉತ್ಪಾದಿಸಿದ ಸರಕುಗಳನ್ನು ಅನುಭೋಗಿಗಳಿಗೆ ತಲುಪಿಸಲು ಮಾರಾಟದ ವ್ಯವಸ್ಥೆಯಿದೆ. ಇಲ್ಲಿ ಸರಕುಗಳ ಸಂಗ್ರಹಣೆ, ಸಾಗಾಟ ಹಾಗೂ ಮಾರುವ ಮತ್ತು ಕೊಳ್ಳುವ ಚಟುವಟಿಕೆಗಳು ನಡೆಯುತ್ತವೆ.

**4. ವಿತರಣೆ :** ಉತ್ಪಾದನೆಯಿಂದ ಬರುವ ಆದಾಯವನ್ನು ಉತ್ಪಾದನೆಗೆ ಸಹಾಯ ಮಾಡಿದ ಉತ್ಪಾದನಾಂಗಗಳಿಗೆ ಹಂಚಬೇಕಾಗುತ್ತದೆ. ಉತ್ಪಾದನಾಂಗಗಳ ಬೆಲೆಯನ್ನು ನಿರ್ಧರಿಸಲು ಕೈಗೊಳ್ಳುವ ಚಟುವಟಿಕೆಗಳನ್ನು ಇದು ಒಳಗೊಂಡಿದೆ. ಆದಾಯವು ಎಲ್ಲ ಜನರಲ್ಲಿ ನ್ಯಾಯೋಚಿತವಾಗಿ ಹಂಚಿಕೆಯಾಗುವಂತೆ ಕ್ರಮ ಕೈಗೊಳ್ಳಬೇಕಾಗುತ್ತದೆ.

ಮಾನವನು ದೈನಂದಿನ ಬದುಕಿನಲ್ಲಿ ಕೇವಲ ಆರ್ಥಿಕ ಚಟುವಟಿಕೆಗಳಲ್ಲಿ ಮಾತ್ರ ನಿರತನಾಗಿರುವುದಿಲ್ಲ. ಅವನು ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ಮುಂತಾದ ಹಲವಾರು ಆರ್ಥಿಕೇತರ ಚಟುವಟಿಕೆಗಳಲ್ಲೂ ತೊಡಗಿರುತ್ತಾನೆ. ಅನೇಕ ಆರ್ಥಿಕೇತರ ಚಟುವಟಿಕೆಗಳು ಕೆಲವು ವೇಳೆ ಆರ್ಥಿಕ ಚಟುವಟಿಕೆಗಳಾಗುತ್ತವೆ. ಉದಾಹರಣೆಗೆ ಶಿಕ್ಷಕನು ಮನೆಪಾಠವನ್ನು ಉಚಿತವಾಗಿ ಮಾಡಿದರೆ, ಅದು ಆರ್ಥಿಕೇತರ ಚಟುವಟಿಕೆಯಾಗುತ್ತದೆ. ಅದೇ ಶಿಕ್ಷಕ ಮನೆಪಾಠವನ್ನು ಹಣಕ್ಕಾಗಿ ಮಾಡಿದರೆ ಅದು ಆರ್ಥಿಕ ಚಟುವಟಿಕೆಯಾಗುತ್ತದೆ.



### ಉತ್ಪಾದನೆ

ನಿಸರ್ಗವು ಭೂಮಿ, ನೀರು, ಅರಣ್ಯ, ಖನಿಜ, ಇಂಧನ, ಪ್ರಾಣಿಗಳು ಮುಂತಾದ ಹಲವು ಬಗೆ ಸಂಪನ್ಮೂಲಗಳನ್ನು ಒದಗಿಸಿದೆ. ಈ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಮಾನವ ತನಗೆ ಬೇಕಾದ ವಸ್ತುಗಳನ್ನು ತಯಾರಿಸುವುದನ್ನು ಕಲಿತಿದ್ದಾನೆ. ಇದನ್ನೇ ಉತ್ಪಾದನೆ ಎನ್ನುತ್ತೇವೆ. ಭೂಮಿ ಮತ್ತು ನೀರನ್ನು ಬಳಸಿಕೊಂಡು ಆಹಾರ ಧಾನ್ಯಗಳು, ಹತ್ತಿ, ಕಬ್ಬು ಮುಂತಾದುವುಗಳನ್ನು ಬೆಳೆಯುತ್ತಾನೆ. ಕೆಲವು ಪ್ರಾಣಿಗಳನ್ನು ಸಾಕುತ್ತಾ ಅವುಗಳಿಂದ ಹಾಲು, ಮಾಂಸ, ಉಣ್ಣೆ ಮುಂತಾದುವುಗಳನ್ನು ಪಡೆಯುತ್ತಾನೆ. ಅರಣ್ಯಗಳಿಂದ ಕೆಲವು ವಸ್ತುಗಳನ್ನು ಸಂಗ್ರಹಿಸುತ್ತಾನೆ. ಭೂಮಿಯಿಂದ ಖನಿಜಗಳನ್ನು ಹೊರತೆಗೆಯುತ್ತಾನೆ. ಹೀಗೆ ನಿಸರ್ಗದಿಂದ ನೇರವಾಗಿ ಪಡೆಯಲಾಗುವ ಉತ್ಪನ್ನಗಳನ್ನು ಪ್ರಾಥಮಿಕ ಉತ್ಪನ್ನಗಳು ಎನ್ನಲಾಗುತ್ತದೆ.

ಬಹುತೇಕ ಪ್ರಾಥಮಿಕ ಉತ್ಪನ್ನಗಳನ್ನು ನೇರವಾಗಿ ಅನುಭೋಗಿಸಲು ಬರುವುದಿಲ್ಲ. ಮಾನವನು ಪ್ರಾಥಮಿಕ ಉತ್ಪನ್ನಗಳ ಸ್ವರೂಪವನ್ನು ಮಾರ್ಪಡಿಸಿ ತನ್ನ ಬಯಕೆಗಳಿಗೆ ಅಗತ್ಯವಾದ ವಿವಿಧ ನಮೂನೆಯ ಸರಕುಗಳನ್ನು ತಯಾರಿಸುವುದನ್ನು ಕಲಿತಿದ್ದಾನೆ. ಉದಾ: ಹತ್ತಿಯನ್ನು ಬಳಸಿಕೊಂಡು ನೂಲನ್ನು, ನೂಲಿನಿಂದ ಬಟ್ಟೆಯನ್ನು, ಬಟ್ಟೆಯಿಂದ ವಿವಿಧ ಬಗೆಯ ಉಡುಪುಗಳನ್ನು ತಯಾರಿಸುತ್ತಾನೆ. ವಸ್ತುವಿನ ಸ್ವರೂಪ ಬದಲಾದಂತೆ ಅದರ ತುಷ್ಟೀಗುಣ ಹೆಚ್ಚುತ್ತದೆ ಜೊತೆಗೆ ಅದರ ಮೌಲ್ಯವೂ(ಬೆಲೆ) ಹೆಚ್ಚಾಗುತ್ತದೆ.

ಹಾಗೆಯೇ ಕಬ್ಬಿನಿಂದ ಬೆಲ್ಲ, ಸಕ್ಕರೆ ತಯಾರಿಸಲಾಗುತ್ತದೆ. ಮರಗಳಿಂದ ಪೀಠೋಪಕರಣಗಳು, ಖನಿಜಗಳಿಂದ ವಿವಿಧ ಬಗೆಯ ಲೋಹಗಳನ್ನು ತಯಾರಿಸಲಾಗುತ್ತದೆ. ಹೀಗೆ ಪ್ರಾಥಮಿಕ ಉತ್ಪನ್ನಗಳ ಸ್ವರೂಪವನ್ನು ಮಾರ್ಪಡಿಸಿ ತಯಾರಿಸಲಾಗುವ ಸರಕುಗಳನ್ನು ತಯಾರಿಕಾ ಉತ್ಪನ್ನಗಳು ಎಂದು ಕರೆಯಲಾಗುತ್ತದೆ.

ಮಾನವನು ಕೇವಲ ಸರಕುಗಳನ್ನು ಮಾತ್ರ ಉತ್ಪಾದಿಸುವುದಿಲ್ಲ, ಅವನು ತನ್ನ ಬಯಕೆಗಳ ತೃಪ್ತಿಗಾಗಿ ಸೇವೆಗಳನ್ನೂ ಉತ್ಪಾದಿಸುತ್ತಾನೆ. ಹೀಗೆ ಉತ್ಪಾದನೆಯು ಪ್ರಾಥಮಿಕ ಮತ್ತು ತಯಾರಿಕಾ ಸರಕುಗಳ ಉತ್ಪಾದನೆಯ ಜೊತೆಗೆ ಸೇವೆಗಳ ಉತ್ಪಾದನೆಗಳನ್ನು ಒಳಗೊಂಡಿದೆ.

**ಉತ್ಪಾದನಾಂಗಗಳು**

ಉತ್ಪಾದನೆಯ ಮೂಲ ಗುರಿ ಮಾನವನ ಬಯಕೆಗಳನ್ನು ತೃಪ್ತಿಪಡಿಸುವುದು. ಅವನಿಗೆ ಬೇಕಾದ ಸರಕು–ಸೇವೆಗಳನ್ನು ಉತ್ಪಾದಿಸಿ ಪೂರೈಸುವುದು. ಸರಕು–ಸೇವೆಗಳನ್ನು ಉತ್ಪಾದಿಸಲು ಅಗತ್ಯವಾಗಿ ಬೇಕಾದ ಅಂಶಗಳನ್ನು ಉತ್ಪಾದನಾಂಗಗಳು ಎನ್ನುತ್ತಾರೆ. ಉತ್ಪಾದನಾಂಗಗಳು ನಾಲ್ಕು. ಅವುಗಳೆಂದರೆ,

1. ಭೂಮಿ. 2. ಶ್ರಮ 3. ಭೌತಿಕ ಬಂಡವಾಳ 4. ಮಾನವ ಬಂಡವಾಳ

**1. ಭೂಮಿ :** ಅರ್ಥಶಾಸ್ತ್ರದಲ್ಲಿ ಭೂಮಿ ಎಂದರೆ ನೆಲ, ಜಲ, ಅರಣ್ಯ, ಖನಿಜ ಮುಂತಾದ ನೈಸರ್ಗಿಕ ಸಂಪನ್ಮೂಲಗಳನ್ನು ಒಳಗೊಂಡ ಭೂಭಾಗ ಎಂದು ಅರ್ಥ. ಭೂಮಿ ಸೀಮಿತವಾಗಿದೆ. ಅಂದರೆ ಅದನ್ನು ನಮ್ಮ ಅಗತ್ಯಕ್ಕೆ ತಕ್ಕಂತೆ ಹೆಚ್ಚಿಸಲು ಸಾಧ್ಯವಿಲ್ಲ. ಸೀಮಿತ ಭೂಮಿಯಲ್ಲಿಯೇ ಮಾನವನಿಗೆ ಅಗತ್ಯವಾದ ಸರಕುಗಳನ್ನು ಮತ್ತು ಸೇವೆಗಳನ್ನು ಉತ್ಪಾದಿಸಿಕೊಳ್ಳಬೇಕಾಗಿದೆ.

ವ್ಯವಸಾಯಕ್ಕೆ ಬಳಸಿಕೊಳ್ಳಬಹುದಾದ ಭೂಮಿಯೂ ಸೀಮಿತವಾಗಿದೆ. ಇದರಲ್ಲಿಯೇ ಮಾನವನ ಮೂಲಭೂತ ಅವಶ್ಯಕತೆಯಾದ ಆಹಾರ ಧಾನ್ಯಗಳನ್ನು ಉತ್ಪಾದಿಸಬೇಕಾಗಿದೆ. ಭಾರತದಲ್ಲಿ ಹೆಚ್ಚಿನ ಕೃಷಿ ಭೂಮಿ ಮಳೆಯನ್ನೇ ಅವಲಂಬಿಸಿದೆ. ಇಂತಹ ಭೂಮಿಯಲ್ಲಿ ಮಳೆಗಾಲದಲ್ಲಿ ಮಾತ್ರ ಒಂದು ಬೆಳೆಯನ್ನು ಬೆಳೆಯಬಹುದು. ಆದರೆ ನೀರಾವರಿಗೆ ಒಳಪಟ್ಟಿರುವ ಭೂಮಿಯಲ್ಲಿ ವರ್ಷದಲ್ಲಿ ಒಂದಕ್ಕಿಂತ ಹೆಚ್ಚು ಬೆಳೆಗಳನ್ನು ಬೆಳೆಯಲು ಸಾಧ್ಯವಿದೆ. ಇದನ್ನು ಬಹುಬೆಳೆ ಪದ್ಧತಿ ಎನ್ನುತ್ತಾರೆ. ಮಳೆಯ ಅವಲಂಬನೆಯನ್ನು ಕಡಿಮೆಮಾಡಿ, ಕೃಷಿ ಭೂಮಿಗೆ ನೀರಾವರಿಯನ್ನು ವಿಸ್ತರಿಸಿದರೆ, ಕೃಷಿ ಉತ್ಪಾದನೆಯನ್ನು ಹೆಚ್ಚಿಸಬಹುದಾಗಿದೆ.

ಕೈಗಾರಿಕೆಗಳ ಅಭಿವೃದ್ಧಿಗೆ ವಿಸ್ತಾರವಾದ ಭೂಮಿ ಅಗತ್ಯವಿದೆ. ಇತ್ತೀಚೆಗೆ ಕೈಗಾರಿಕೆಗಳ ಸ್ಥಾಪನೆಗಾಗಿ ಕೃಷಿ ಭೂಮಿಯನ್ನೇ ಬಳಸಿಕೊಳ್ಳಲಾಗುತ್ತಿದೆ. ಪಟ್ಟಣ ಮತ್ತು ನಗರಗಳ ವಿಸ್ತರಣೆ, ರಸ್ತೆ ಮತ್ತು ರೈಲು ಮಾರ್ಗಗಳು, ವಿಮಾನ ನಿಲ್ದಾಣಗಳು, ಸಂಪರ್ಕ ವ್ಯವಸ್ಥೆ, ಶಿಕ್ಷಣ ಸಂಸ್ಥೆಗಳು, ಆಸ್ಪತ್ರೆಗಳು ಮುಂತಾದುವುಗಳ ಅಭಿವೃದ್ಧಿಗೂ ಭೂಮಿಯು ಆವಶ್ಯಕವಾಗಿದೆ.

**2. ಶ್ರಮ :** ಭೂಮಿಯ ನಂತರ ಉತ್ಪಾದನೆಗೆ ಅತಿಮುಖ್ಯ ಅಂಶವೆಂದರೆ ಶ್ರಮ. ದುಡಿಯುವ ಜನರನ್ನು ಶ್ರಮಿಕರು ಎನ್ನುತ್ತೇವೆ. ಶ್ರಮಿಕರು ಹಣದ ಪ್ರತಿಫಲಕ್ಕಾಗಿ ಶ್ರಮವನ್ನು ಪೂರೈಸುತ್ತಾರೆ. ಆದುದರಿಂದ ಹಣದ ಪ್ರತಿಫಲಕ್ಕಾಗಿ ಮಾಡುವ ದೈಹಿಕ ಮತ್ತು ಬೌದ್ಧಿಕ ಕೆಲಸವನ್ನು ಶ್ರಮ ಎಂದು ಕರೆಯಲಾಗುತ್ತದೆ.

ರೈತರು, ಕೃಷಿಕಾರ್ಮಿಕರು, ಕೈಗಾರಿಕಾ ಕಾರ್ಮಿಕರು ಹಾಗೂ ಹೊಟೆಲ್, ಗ್ಯಾರೇಜು, ವಿವಿಧ ಸಾರಿಗೆ ಸಂಸ್ಥೆಗಳಲ್ಲಿನ ಕಾರ್ಮಿಕರು ತಮ್ಮ ದೇಹ ದಂಡಿಸಿ ದುಡಿಯುತ್ತಾರೆ. ಇವರೆಲ್ಲರು ಪೂರೈಸುವ ಶ್ರಮವನ್ನು ದೈಹಿಕ ಶ್ರಮ ಎನ್ನುತ್ತೇವೆ..

ಕೆಲವರು ಕಛೇರಿಗಳಲ್ಲಿ ಗುಮಾಸ್ತರಾಗಿ ಹಾಗೂ ಅಧಿಕಾರಿಗಳಾಗಿ, ಶಾಲಾ–ಕಾಲೇಜುಗಳಲ್ಲಿ ಶಿಕ್ಷಕರಾಗಿ, ವೈದ್ಯರಾಗಿ, ವಕೀಲರಾಗಿ ದುಡಿಯುತ್ತಿದ್ದಾರೆ. ಇವರು ಪೂರೈಸುವ ಶ್ರಮವನ್ನು ಬೌದ್ಧಿಕ ಶ್ರಮ ಎನ್ನುತ್ತೇವೆ.

ಶ್ರಮಿಕರು ಯಾರೇ ಆಗಿರಲಿ ಅವರನ್ನು ಮಾನವೀಯತೆಯಿಂದ ನಡೆಸಿಕೊಂಡರೆ ಅವರಿಂದ ಹೆಚ್ಚಿನ ಶ್ರಮ ಪಡೆಯಬಹುದು. ಕೃಷಿ ಕಾರ್ಮಿಕರು ಹಾಗೂ ಸಣ್ಣ ಕೈಗಾರಿಕೆಗಳು, ಹೋಟೆಲ್, ಗ್ಯಾರೇಜು ಮುಂತಾದ ಕಡೆಗಳಲ್ಲಿ ದುಡಿಯುವ ಕಾರ್ಮಿಕರು ದಿನದ ಕೂಲಿಯ ಆಧಾರದಲ್ಲಿ ದುಡಿಯುತ್ತಾರೆ. ದಿನಗೂಲಿ ಕಾರ್ಮಿಕರ ಕೂಲಿ ಅತ್ಯಂತ ಕಡಿಮೆಯಿದ್ದು, ಇವರು ಕಡುಬಡತನದಲ್ಲಿ ಬದುಕುತ್ತಿದ್ದಾರೆ. ಸರ್ಕಾರವು ಕನಿಷ್ಠ ಕೂಲಿ ಕಾಯಿದೆಯನ್ನು ಜಾರಿಗೆ ತಂದು, ಇವರಿಗೆ ನೀಡಬೇಕಾದ ಕನಿಷ್ಠ ಕೂಲಿಯನ್ನು ಕಾಲಕಾಲಕ್ಕೆ ತಾನೇ ನಿರ್ಧರಿಸಿ ಪ್ರಕಟಿಸುತ್ತಿದೆ. ಈಗ ಶ್ರಮಿಕರಿಗೆ ಸರ್ಕಾರ ನಿಗಧಿಪಡಿಸುವ ಕನಿಷ್ಠ ಕೂಲಿಗಿಂತ ಕಡಿಮೆ ಕೂಲಿ ನೀಡುವಂತಿಲ್ಲ.

**3. ಭೌತಿಕ ಬಂಡವಾಳ :** ಉತ್ಪಾದನೆಯಲ್ಲಿ ಬಳಸಲಾಗುವ ಎಲ್ಲ ರೀತಿಯ ಮಾನವ ನಿರ್ಮಿತ ಸರಕುಗಳನ್ನು ಭೌತಿಕ ಬಂಡವಾಳ ಎನ್ನಲಾಗುತ್ತದೆ. ಯಂತ್ರಗಳು, ಯಂತ್ರೋಪಕರಣಗಳು, ಕಟ್ಟಡಗಳು, ರೈಲು–ರಸ್ತೆ ಮಾರ್ಗಗಳು, ಬಂದರುಗಳು, ವಿಮಾನ ನಿಲ್ದಾಣಗಳು, ವಿದ್ಯುತ್ ಸ್ಥಾವರಗಳು ಮುಂತಾದುವುಗಳು ಭೌತಿಕ ಬಂಡವಾಳವೆನಿಸಿವೆ. ಇವೆಲ್ಲವುಗಳನ್ನು ಕೊಳ್ಳಲು ಅಥವಾ ನಿರ್ಮಾಣ ಮಾಡಲು ಹಣ ಬೇಕಾಗುತ್ತದೆ. ಉತ್ಪಾದನೆಯಲ್ಲಿ ಬಳಸಲಾಗುವ ಹಣವನ್ನು ಹಣರೂಪದ ಬಂಡವಾಳ ಎನ್ನುತ್ತೇವೆ.

ಕೃಷಿಯಲ್ಲಿ ಬಹುಹಿಂದಿನಿಂದಲೂ ನೇಗಿಲು, ಕುಂಟೆ, ಹಲಿವೆ ಮುಂತಾದ ಉಪಕರಣಗಳನ್ನು ಬಳಸುತ್ತಾ ಬಂದಿದ್ದಾರೆ. ಇತ್ತೀಚೆಗೆ ಆಧುನಿಕ ಬೇಸಾಯ ಮಾಡಲು ಮುಂದಾಗುತ್ತಿರುವ ರೈತರು ಟ್ರಾಕ್ಟರ್, ಟಿಲ್ಲರ್, ಪಂಪ್‌ಸೆಟ್ ಮುಂತಾದ ಆಧುನಿಕ ಕೃಷಿ ಉಪಕರಣಗಳನ್ನು ಬಳಸುತ್ತಿದ್ದಾರೆ. ಅದೇರೀತಿಯಲ್ಲಿ ಕೈಗಾರಿಕೆಗಳಲ್ಲಿ ಅತ್ಯಾಧುನಿಕ ಯಂತ್ರಗಳು ಮತ್ತು ಯಂತ್ರೋಪಕರಣಗಳನ್ನು ಬಳಸಿಕೊಳ್ಳಲಾಗುತ್ತಿದೆ. ಇದರಿಂದ ಕಡಿಮೆ ಬೆಲೆಯಲ್ಲಿ ಉತ್ತಮ ಗುಣಮಟ್ಟದ ಸರಕುಗಳನ್ನು ಉತ್ಪಾದಿಸಲು ಸಾಧ್ಯವಾಗುತ್ತಿದೆ.

ಸರ್ಕಾರವು ದೇಶದಲ್ಲಿ ಕಾರ್ಖಾನೆಗಳು, ವಿದ್ಯುತ್ ಸ್ಥಾವರಗಳು, ವಿವಿಧ ರೀತಿಯ ಸಾರಿಗೆಗಳು, ಸಂಪರ್ಕದ ವ್ಯವಸ್ಥೆ, ಸಾರ್ವಜನಿಕ ಕಟ್ಟಡಗಳು, ಆಸ್ಪತ್ರೆಗಳು, ಶಾಲಾ ಕಾಲೇಜುಗಳು ಮುಂತಾದುವುಗಳನ್ನು ನಿರ್ಮಿಸಲು ಪ್ರೋತ್ಸಾಹಿಸುತ್ತಿದೆ. ಇದನ್ನು ಬಂಡವಾಳ ಸಂಗ್ರಹ ಎನ್ನುತ್ತೇವೆ. ದೇಶದಲ್ಲಿ ಬಂಡವಾಳ ಸಂಗ್ರಹ ಹೆಚ್ಚಾದರೆ ಉತ್ಪಾದನೆ ಹೆಚ್ಚಾಗುತ್ತದೆ. ಇದಕ್ಕೆ ಬೇಕಾದ ಹಣರೂಪದ ಬಂಡವಾಳವನ್ನು ಜನರ ಉಳಿತಾಯದಿಂದ ಸಂಗ್ರಹಿಸಲಾಗುತ್ತದೆ.

**4.ಮಾನವ ಬಂಡವಾಳ :** ಆಧುನಿಕ ಉತ್ಪಾದನಾ ವ್ಯವಸ್ಥೆಯಲ್ಲಿ ಮಾನವ ಬಂಡವಾಳ ಅತ್ಯಂತ ಪ್ರಮುಖ ಅಂಶವಾಗಿದೆ. ಭೂಮಿ, ಶ್ರಮ ಮತ್ತು ಭೌತಿಕ ಬಂಡವಾಳವನ್ನು ಒಂದೆಡೆ ಸೇರಿಸಿ ಉತ್ಪಾದನಾ ಕಾರ್ಯ ನಡೆಯುವಂತೆ ಮಾಡುವ ಜ್ಞಾನ ಹೊಂದಿರುವ ವ್ಯಕ್ತಿಗಳನ್ನು ಮಾನವ ಬಂಡವಾಳ ಎಂದು ಕರೆಯಲಾಗುತ್ತದೆ. ಇವರನ್ನು ಸಂಘಟನಾಕಾರ, ವ್ಯವಸ್ಥಾಪಕ, ಉದ್ಯಮ ಸಾಹಸಿ, ಪ್ರವರ್ತಕ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಇಂದು ಉತ್ಪಾದನೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದು, ಉಳಿದೆಲ್ಲ ಉತ್ಪಾದನಾಂಗಗಳಿಗಿಂತ ಮಾನವ ಬಂಡವಾಳಕ್ಕೆ ಹೆಚ್ಚಿನ ಪ್ರಾಮುಖ್ಯತೆ ಬಂದಿದೆ.

ಉತ್ಪಾದನಾಂಗಗಳನ್ನು ಉತ್ಪಾದನಾ ಕಾರ್ಯದಲ್ಲಿ ಬಳಸಿಕೊಂಡು ಸರಕು – ಸೇವೆಗಳನ್ನು ಉತ್ಪಾದಿಸಲಾಗುತ್ತದೆ. ಸರಕು–ಸೇವೆಗಳನ್ನು ಮಾರಾಟ ಮಾಡುವುದರಿಂದ ಆದಾಯ ಬರುತ್ತದೆ. ಈ ಆದಾಯವನ್ನು ಉತ್ಪಾದನಾಂಗಳಿಗೆ ಪ್ರತಿಫಲದ ರೂಪದಲ್ಲಿ ಹಂಚಲಾಗುತ್ತದೆ. ಭೂಮಿಗೆ ಗೇಣಿಯನ್ನು ಶ್ರಮಕ್ಕೆ ಕೂಲಿ, ಭೌತಿಕ ಬಂಡವಾಳಕ್ಕೆ ಬಡ್ಡಿ ಹಾಗೂ ಮಾನವ ಬಂಡವಾಳಕ್ಕೆ ಲಾಭವನ್ನು ಪ್ರತಿಫಲವಾಗಿ ಹಂಚಲಾಗುತ್ತದೆ.

## ಅಭ್ಯಾಸಗಳು

**I ಖಾಲಿ ಜಾಗಗಳನ್ನು ಭರ್ತಿ ಮಾಡಿರಿ.**

1 ಅರ್ಥಶಾಸ್ತ್ರದ ಮೂಲ ಪದವು ಗ್ರೀಕ್ ಭಾಷೆಯ ________ ಮತ್ತು __________ ಎಂಬ ಎರಡು ಪದಗಳಿಂದಾಗಿದೆ.

2 ಮೌರ್ಯರ ಆಸ್ಥಾನದಲ್ಲಿದ್ದ ಕೌಟಿಲ್ಯನು ರಚಿಸಿದ ಗ್ರಂಥ ____________ .

3 ಸರಕು–ಸೇವೆಗಳಲ್ಲಿರುವ ಮಾನವನ ಬಯಕೆಗಳನ್ನು ತೃಪ್ತಿಪಡಿಸುವ ಗುಣಕ್ಕೆ ___________ ಎನ್ನುವರು.

4 ಹಣದ ಪ್ರತಿಫಲಕ್ಕಾಗಿ ಮಾಡುವ ದೈಹಿಕ ಮತ್ತು ಬೌದ್ಧಿಕ ಕೆಲಸಕ್ಕೆ __________ ಎಂದು ಕರೆಯುತ್ತಾರೆ.

5 ಉತ್ಪಾದನಾ ಕಾರ್ಯದಲ್ಲಿ ಬಳಸಲಾಗುವ ಮಾನವ ನಿರ್ಮಿತ ಸರಕುಗಳಿಗೆ_________ ಎಂದು ಕರೆಯಾಗುತ್ತದೆ.

**II ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1 ಅರ್ಥಶಾಸ್ತ್ರ ಎಂದರೇನು ?

2 ಅರ್ಥಶಾಸ್ತ್ರದ ಪಿತಾಮಹ ಎಂದು ಯಾರನ್ನು ಗುರುತಿಸಲಾಗಿದೆ ?

3 ಆರ್ಥಿಕ ಚಟುವಟಿಕೆಗಳು ಎಂದರೇನು ?

4 ವಿದ್ಯಾರ್ಥಿಯೊಬ್ಬ ಪೆನ್ನು ಕೊಂಡು ಬಳಸುತ್ತಾನೆ. ಇದು ಯಾವ ಬಗೆಯ ಆರ್ಥಿಕ ಚಟುವಟಿಕೆ ?

5 ಉತ್ಪಾದನೆಯ ಅರ್ಥ ಬರೆಯಿರಿ.

**III ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿ.**

1 ಮಾನವನ ಆರ್ಥಿಕ ಚಟುವಟಿಕೆಗಳಾವುವು ?

2 ಅರ್ಥಶಾಸ್ತ್ರವನ್ನು ನಾವೇಕೆ ಅಧ್ಯಯನ ಮಾಡಬೇಕು ?

3 ಕಾಲದಿಂದ ಕಾಲಕ್ಕೆ ಅರ್ಥಶಾಸ್ತ್ರದ ಅರ್ಥ ಹೇಗೆ ಬದಲಾಗಿದೆ ?

4 ಉತ್ಪಾದನಾಂಗಗಳು ಎಂದರೇನು ? ಅವು ಯಾವುವು ?

5 ಭೌತಿಕ ಬಂಡವಾಳ ಎಂದರೇನು ? ಬಂಡವಾಳ ಸರಕುಗಳನ್ನು ಗುರುತಿಸಿ.

**IV ಸಲಹಾ ಚಟುವಟಿಕೆಗಳು :**

1 ನಿಮ್ಮ ಕುಟುಂಬದ ಸದಸ್ಯರು ಕೈಗೊಂಡಿರುವ ಆರ್ಥಿಕ ಚಟುವಟಿಕೆಗಳನ್ನು ಪಟ್ಟಿಮಾಡಿರಿ.

2 ನಿಮ್ಮ ಸುತ್ತಮುತ್ತಲಿನ ಅಥವಾ ನಿಮ್ಮ ಗ್ರಾಮದಲ್ಲಿನ ಜನರು ಮಾಡುತ್ತಿರುವ ವಿವಿಧ ಆರ್ಥಿಕ ಚಟುವಟಿಕೆಗಳನ್ನು ಗುರುತಿಸಿ.

3 ಪ್ರತಿದಿನ ನೀವು ಅನುಭೋಗಿಸುವ ವಸ್ತುಗಳನ್ನು ಪಟ್ಟಿಮಾಡಿರಿ.

4 ರೈತರು ತಮ್ಮ ಜಮೀನಿನಲ್ಲಿ ಯಾವ ಬೆಳೆ ಬೆಳೆಯಬೇಕೆಂಬುದನ್ನು ಹೇಗೆ ನಿರ್ಧರಿಸುತ್ತಾರೆಂಬುದನ್ನು ಗಮನಿಸಿ.

5 ರೈತನೊಬ್ಬನು ತನ್ನ ಒಂದು ಎಕರೆ ಜಮೀನಿನಲ್ಲಿ ಭತ್ತವನ್ನು ಬೆಳೆಯಲು ಬಯಸಿದ್ದಾನೆಂದು ಭಾವಿಸಿರಿ. ಆತನಿಗೆ ಭತ್ತ ಉತ್ಪಾದಿಸಲು ಯಾವ ಯಾವ ಅಂಶಗಳು ಬೇಕಾಗುತ್ತವೆ ಎಂಬುದನ್ನು ಪಟ್ಟಿ ಮಾಡಿರಿ.

## ಅಧ್ಯಾಯ–2

# ನೈಸರ್ಗಿಕ ಸಂಪನ್ಮೂಲಗಳು

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ನೈಸರ್ಗಿಕ ಸಂಪನ್ಮೂಲಗಳ ಪ್ರಾಮುಖ್ಯತೆಯನ್ನು ತಿಳಿಯುವುದು.
- ಮುಗಿಯದ ಮತ್ತು ಮುಗಿದು ಹೋಗುವ ಸಂಪನ್ಮೂಲಗಳು ಮತ್ತು ಇವುಗಳ ಸಂರಕ್ಷಣೆಯ ಬಗ್ಗೆ ತಿಳಿಯುವುದು.
- ಅರಣ್ಯನಾಶ ಮತ್ತು ಮರುಭೂಮೀಕರಣದ ಪರಿಣಾಮಗಳನ್ನು ಗುರುತಿಸುವುದು.
- ಭೂಮಿಯ ಧಾರಣಾ ಶಕ್ತಿಯ ಬಗ್ಗೆ ತಿಳಿಯುವುದು.
- ಹವಾಗುಣ ಬದಲಾವಣೆಗೆ ಕಾರಣ ಮತ್ತು ಪರಿಣಾಮಗಳನ್ನು ವಿಶ್ಲೇಷಿಸುವುದು.

ಭೂಮಿ, ಗಾಳಿ, ನೀರು, ಅರಣ್ಯ, ಮಣ್ಣು, ಖನಿಜ ಮುಂತಾದುವು ನಮ್ಮ ಬದುಕಿಗೆ ಬಹಳ ಸಹಾಯಕವಾಗಿವೆ. ಇವೆಲ್ಲವುಗಳನ್ನು ಪ್ರಕೃತಿ ನಮಗೆ ಪುಕ್ಕಟೆಯಾಗಿ ನೀಡಿದೆ. ಪ್ರಕೃತಿ ನೀಡಿರುವ ಈ ಸಂಪನ್ಮೂಲಗಳನ್ನು ನೈಸರ್ಗಿಕ ಸಂಪನ್ಮೂಲಗಳು ಎನ್ನುತ್ತೇವೆ. ಸೂರ್ಯನ ಬೆಳಕು, ಭೂಮಿಯ ಆಳದಲ್ಲಿ ದೊರೆಯುವ ಕಲ್ಲಿದ್ದಲು ಮತ್ತು ಪೆಟ್ರೋಲಿಯಂ ಸಹ ನೈಸರ್ಗಿಕ ಸಂಪನ್ಮೂಲಗಳೆನಿಸಿವೆ.

ಮಾನವನ ಬದುಕು ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿದೆ. ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿ ಅವನ ಆರ್ಥಿಕ ಚಟುವಟಿಕೆಗಳು ಬೆಳವಣಿಗೆ ಹೊಂದಿವೆ. ಹಿತಕರವಾದ ಹವಾಗುಣ, ಫಲವತ್ತಾದ ಮಣ್ಣು, ಸಮೃದ್ಧವಾದ ನೀರು ಕೃಷಿ ಅಭಿವೃದ್ಧಿಗೆ ಸಹಾಯಕವಾಗಿದ್ದರೆ, ಖನಿಜ ಸಂಪನ್ಮೂಲಗಳು ಕೈಗಾರಿಕೆಗಳ ಅಭಿವೃದ್ಧಿಗೆ ಬೇಕಾದ ಕಚ್ಚಾವಸ್ತು ಮತ್ತು ಇಂಧನವನ್ನು ಪೂರೈಸುತ್ತವೆ. ಅರಣ್ಯ ಸಂಪನ್ಮೂಲಗಳು ಮಾನವನಿಗೆ ಬೇಕಾದ ಮರಮುಟ್ಟುಗಳನ್ನು ಹಾಗೂ ಇನ್ನಿತರೆ ಉತ್ಪನ್ನಗಳನ್ನು ಒದಗಿಸುವುದರ ಜೊತೆಗೆ ವಾತಾವರಣವನ್ನು ನಿಯಂತ್ರಿಸುತ್ತವೆ.

ಜಲಸಂಪನ್ಮೂಲವು ಕೃಷಿ, ನೀರಾವರಿ, ವಿದ್ಯುತ್ ಉತ್ಪಾದನೆ, ಕೈಗಾರಿಕಾಭಿವೃದ್ಧಿ ಮತ್ತು ಗೃಹ ಬಳಕೆಗೆ ಸಹಾಯಕವಾಗಿದೆ. ಹೀಗೆ ನೈಸರ್ಗಿಕ ಸಂಪನ್ಮೂಲಗಳು ಮಾನವನ ಬದುಕಿನಲ್ಲಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿವೆ. ಪ್ರಕೃತಿಯ ಉಳಿವು ಮಾನವನ ಉಳಿವಾಗಿದೆ.

**ಸಂಪನ್ಮೂಲಗಳ ಕೊರತೆ**

ಭೂಮಿ ಮತ್ತು ಅದರ ಮೇಲಿನ ಎಲ್ಲ ನೈಸರ್ಗಿಕ ಸಂಪನ್ಮೂಲಗಳು ಸ್ಥಿರವಾಗಿವೆ. ಅಂದರೆ ಅವುಗಳನ್ನು ನಮ್ಮ ಅಗತ್ಯಕ್ಕೆ ತಕ್ಕಂತೆ ಹೆಚ್ಚಿಸಲು ಬರುವುದಿಲ್ಲ. ಮಾನವನು ತನ್ನ ಬಯಕೆಗಳನ್ನು ಲಭ್ಯವಿರುವ ನೈಸರ್ಗಿಕ ಸಂಪನ್ಮೂಲಗಳಿಂದ ತೃಪ್ತಿಪಡಿಸಿಕೊಳ್ಳಬೇಕಾಗಿದೆ. ಕೊರತೆಯಲ್ಲಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ನಮ್ಮ ಹೆಚ್ಚುತ್ತಿರುವ ಅಗತ್ಯಗಳನ್ನು ಪೂರೈಸಿಕೊಳ್ಳಬೇಕಾಗಿದೆ.

ಗಾಳಿಯು ಹಲವಾರು ಅನಿಲಗಳ ಮಿಶ್ರಣ. ಗಾಳಿಯಲ್ಲಿ ಸಾರಜನಕ ಶೇ.78 ಭಾಗ, ಆಮ್ಲಜನಕ ಶೇ.21 ಭಾಗ ಇದೆ. ಇವಲ್ಲದೆ ಇಂಗಾಲದ ಡೈ ಆಕ್ಸೈಡ್, ಜಲಜನಕ ಮುಂತಾದ ಅನಿಲಗಳು

ಅಲ್ಪಪ್ರಮಾಣದಲ್ಲಿವೆ. ಜೀವಿಗಳ ಉಸಿರಾಟ, ಸಸ್ಯಗಳ ದ್ಯುತಿಸಂಶ್ಲೇಷಣೆ ಮುಂತಾದ ನೈಸರ್ಗಿಕ ಪ್ರಕ್ರಿಯೆಗಳು ಗಾಳಿಯಲ್ಲಿರುವ ಅನಿಲಗಳ ಸಮತೋಲನವನ್ನು ಕಾಪಾಡುತ್ತವೆ. ಆದರೆ ಪೆಟ್ರೋಲಿಯಂ, ಕಲ್ಲಿದ್ದಲು ಮುಂತಾದ ಖನಿಜಇಂಧನಗಳನ್ನು ಅತಿಯಾಗಿ ಬಳಸುತ್ತಿರುವುದರಿಂದ, ಅವುಗಳಿಂದ ಹೊರಬರುವ ಇಂಗಾಲದ ಡೈಆಕ್ಸೈಡ್ ಹಾಗೂ ಇನ್ನಿತರೆ ಕೆಲವು ಅಪಾಯಕಾರಿ ಅನಿಲಗಳು ವಾತಾವರಣ ಸೇರಿ, ಗಾಳಿ ಮಲಿನವಾಗುತ್ತಿದೆ. ನಗರಗಳಲ್ಲಿ ಶುದ್ಧವಾದ ಗಾಳಿ ಸಿಗುವುದೇ ದುರ್ಲಬವಾಗುತ್ತಿದೆ.

ಭೂಮಿಯಲ್ಲಿ ಶೇ. 70 ಕ್ಕಿಂತ ಹೆಚ್ಚು ಭಾಗ ನೀರು ಆವರಿಸಿದ್ದರೂ, ಅದರಲ್ಲಿ ಶೇ.97 ಭಾಗದ ನೀರು ಸಮುದ್ರಗಳಲ್ಲಿದ್ದು, ಬಳಕೆಗೆ ನಿರುಪಯುಕ್ತವಾಗಿದೆ. ಭೂಮಿಯಲ್ಲಿ ಕೇವಲ ಶೇ.3 ಭಾಗ ಮಾತ್ರ ಶುದ್ಧ ನೀರು ಇದೆ. ಅದರಲ್ಲಿ ಶೇ.2.3 ರಷ್ಟು ಶುದ್ಧನೀರು ಧ್ರುವ ಪ್ರದೇಶಗಳಲ್ಲಿ ಮತ್ತು ಎತ್ತರದ ಗಿರಿಶಿಖರಗಳಲ್ಲಿ ಮಂಜುಗಡ್ಡೆಯ ರೂಪದಲ್ಲಿ ಶೇಖರವಾಗಿದೆ. ಸುಮಾರು ಶೇ.0.66 ರಷ್ಟು ನೀರು ಅಂತರ್ಜಲದ ರೂಪದಲ್ಲಿ ಭೂಮಿಯ ಆಳದಲ್ಲಿ ಸಂಗ್ರಹವಾಗಿದೆ. ಕೇವಲ ಸುಮಾರು ಶೇ.0.03 ರಷ್ಟು ನೀರು ಮಾತ್ರ ಭೂಮಿಯ ಮೇಲ್ಭಾಗದಲ್ಲಿ ನದಿ, ಹಳ್ಳ ಕೊಳ್ಳಗಳು, ಕೆರೆಕಟ್ಟೆಗಳು ಮುಂತಾದುವುಗಳ ಮೂಲಕ ಲಭ್ಯವಾಗುತ್ತಿದೆ. ಭೂಮಿಯ ಮೇಲಿನ ನೀರಿನ ಬಹುಮುಖ್ಯ ಮೂಲ ಮಳೆ. ಭೂಮಿಯ ಮೇಲ್ಭಾಗದಲ್ಲಿರುವ ಮೇಲ್ಮೈಜಲ ಮತ್ತು ಅಂತರ್ಜಲ ಮಾತ್ರ ನಮ್ಮ ಬಳಕೆಗೆ ಲಭ್ಯವಿರುವ ಜಲಸಂಪತ್ತಾಗಿದೆ.

ಭೂಮಿಯಲ್ಲಿ ನಾನಾ ರೀತಿಯ ಖನಿಜಗಳು ಮತ್ತು ಖನಿಜ ಇಂಧನಗಳು ದೊರೆಯುತ್ತಿವೆ. ಇವುಗಳನ್ನು ಹೊರತೆಗೆದು ಬಳಸಿಕೊಂಡಂತೆ ಕ್ರಮೇಣ ಮುಗಿದುಹೋಗುತ್ತವೆ. ಉದಾ: ಕೋಲಾರದ ಚಿನ್ನದಗಣಿಯಲ್ಲಿ ಚಿನ್ನದ ಅದಿರು ಮುಗಿದುಹೋಗಿದ್ದು, ಅಲ್ಲಿ ಗಣಿಗಾರಿಕೆಯನ್ನು ನಿಲ್ಲಿಸಲಾಗಿದೆ.

ಅರಣ್ಯಗಳು ವಾತಾವರಣವನ್ನು ನಿಯಂತ್ರಿಸುವುದಲ್ಲದೆ, ಸಾಕಷ್ಟು ಮಳೆತರುತ್ತವೆ. ಸಾವಿರಾರು ಜೀವಸಂಕುಲಗಳಿಗೆ ಆಶ್ರಯ ನೀಡಿವೆ. ಮಾನವನಿಗೆ ಬೇಕಾದ ಮರಮುಟ್ಟು ಹಾಗೂ ಇನ್ನಿತರೆ ಉತ್ಪನ್ನಗಳನ್ನು ಪೂರೈಸುತ್ತವೆ. ಆದರೆ ಮಾನವ ಅರಣ್ಯ ಬೆಳೆಸುವ ಕಡೆಗೆ ಗಮನ ನೀಡದೆ, ತನ್ನ ಸ್ವಾರ್ಥಕ್ಕಾಗಿ ಅರಣ್ಯವನ್ನು ವ್ಯಾಪಕವಾಗಿ ನಾಶಮಾಡುತ್ತಿದ್ದಾನೆ. ಇದರಿಂದ ಅರಣ್ಯ ಪ್ರದೇಶ ನಿರಂತರವಾಗಿ ಕಡಿಮೆಯಾಗುತ್ತಿದೆ. ಅಲ್ಲಿರುವ ಪ್ರಾಣಿಗಳನ್ನು ಆಹಾರ, ಚರ್ಮ, ದಂತಗಳಿಗಾಗಿ ಕೊಲ್ಲುತ್ತಿದ್ದಾನೆ. ಪ್ರತಿದಿನ ಹಲವಾರು ಜೀವಿಸಂಕುಲಗಳು ನಾಶವಾಗುತ್ತಿವೆ.

**ಮುಗಿಯದ ಸಂಪನ್ಮೂಲಗಳು ಮತ್ತು ಮುಗಿದು ಹೋಗುವ ಸಂಪನ್ಮೂಲಗಳು**

ನೈಸರ್ಗಿಕ ಸಂಪನ್ಮೂಲಗಳನ್ನು ಮುಖ್ಯವಾಗಿ ಎರಡು ವಿಧಗಳನ್ನಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ,

1. ಮುಗಿಯದ ಸಂಪನ್ಮೂಲಗಳು 2. ಮುಗಿದು ಹೋಗುವ ಸಂಪನ್ಮೂಲಗಳು

**ಮುಗಿಯದ ಸಂಪನ್ಮೂಲಗಳು :** ಕೆಲವು ನೈಸರ್ಗಿಕ ಸಂಪನ್ಮೂಲಗಳನ್ನು ನಾವು ಬಳಸಿಕೊಳ್ಳುತ್ತಾ ಹೋದಂತೆ, ಅವು ಮತ್ತೆ ಮತ್ತೆ ಚೈತನ್ಯವನ್ನು ಪಡೆದುಕೊಂಡು ನಿರಂತರವಾಗಿ ನಮ್ಮ ಬಳಕೆಗೆ ದೊರೆಯುತ್ತವೆ. ಇಂತಹ ಸಂಪನ್ಮೂಲಗಳನ್ನು ಮುಗಿಯದ ಸಂಪನ್ಮೂಲಗಳು ಎನ್ನುತ್ತಾರೆ. ಇವುಗಳನ್ನು ನಾವು ಬಳಸಿಕೊಂಡಂತೆ ಪ್ರಕೃತಿಯು ತನ್ನ ನೈಸರ್ಗಿಕ ಕ್ರಿಯೆಯ ಮೂಲಕ ಅವುಗಳನ್ನು ಮತ್ತೆ ಮತ್ತೆ ತುಂಬಿಕೊಡುತ್ತದೆ. ಆದುದರಿಂದ ಇವುಗಳನ್ನು ನವೀಕರಿಸಬಹುದಾದ ಸಂಪನ್ಮೂಲಗಳು ಎಂತಲೂ ಕರೆಯುತ್ತಾರೆ. ನೀರು, ಭೂಮಿ, ಅರಣ್ಯ, ಗಾಳಿ, ಸೂರ್ಯನ ಶಾಖ ಮುಂತಾದುವು ಮುಗಿಯದ ಸಂಪನ್ಮೂಲಗಳಾಗಿವೆ.

ನೀರು ಅಮೂಲ್ಯವಾದ ನೈಸರ್ಗಿಕ ಕೊಡುಗೆ. ಕೆರೆಕಟ್ಟೆಗಳು, ಹಳ್ಳಕೊಳ್ಳಗಳು, ನದಿಗಳು, ಸರೋವರಗಳು, ಬಾವಿಗಳು ಮುಂತಾದುವು ನೀರಿನ ಮೂಲಗಳಾಗಿವೆ. ಇವುಗಳನ್ನು ಬಳಸಿಕೊಂಡಂತೆ ಇವುಗಳಲ್ಲಿರುವ ನೀರಿನ ಪ್ರಮಾಣ ಕಡಿಮೆಯಾದರೂ, ಪ್ರಕೃತಿ ಈ ಜಲಮೂಲಗಳನ್ನು ಮಳೆಯ ರೂಪದಲ್ಲಿ ಮತ್ತೆ ಮತ್ತೆ ತುಂಬಿಕೊಡುತ್ತದೆ.

ಭೂಮಿಯು ಅತ್ಯಂತ ಮಹತ್ವದ ಸಂಪತ್ತೆಂದು ಪರಿಗಣಿಸಲ್ಪಟ್ಟಿದೆ. ಇದು ಮಾನವನಿಗೆ ಮತ್ತು ಕೋಟ್ಯಾಂತರ ಜೀವರಾಶಿಗಳಿಗೆ ಆಶ್ರಯ ನೀಡಿದೆ. ಭೂಮಿಯ ಮೇಲ್ಮೈ ಲಕ್ಷಣಗಳಿಗೆ ಅನುಗುಣವಾಗಿ ಮಾನವನ ಆರ್ಥಿಕ ಚಟುವಟಿಕೆಗಳು, ವಸತಿ, ಕೃಷಿ, ಕೈಗಾರಿಕೆ, ವಾಣಿಜ್ಯ, ಸಾರಿಗೆ ಮುಂತಾದುವು ಬೆಳವಣಿಗೆ ಹೊಂದಿರುತ್ತವೆ. ಮಳೆ, ಪ್ರವಾಹ, ಗಾಳಿ ಹಾಗೂ ಅತಿಯಾದ ರಾಸಾಯನಿಕಗಳ ಬಳಕೆಯಿಂದ ಭೂಮಿಯ ಫಲವತ್ತತೆ ಕಡಿಮೆಯಾಗುತ್ತಿದೆ.

ಅರಣ್ಯಗಳು ಮಾನವನಿಗೆ ಮತ್ತು ಎಲ್ಲಾ ಪ್ರಾಣಿ ಪಕ್ಷಿಗಳಿಗೆ ಆಹಾರ ಮತ್ತು ಆಶ್ರಯ ನೀಡಿವೆ. ಅರಣ್ಯಗಳು ವಾತಾವರಣದಲ್ಲಿ ಆಮ್ಲಜನಕ ಮತ್ತು ಇಂಗಾಲದ ಡೈ ಆಕ್ಸೈಡ್ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುತ್ತವೆ. ಆದರೆ ಮಾನವ ನಾಗರಿಕನಾದಂತೆ ಅರಣ್ಯ ನಾಶ ಹೆಚ್ಚಿದೆ. ಮಾನವ ಪ್ರಯತ್ನದಿಂದ ಅರಣ್ಯವನ್ನು ಬೆಳೆಸಲು ಸಾಧ್ಯವಿದೆ.

ಗಾಳಿಯೂ ಒಂದು ಅಮೂಲ್ಯ ಮುಗಿಯದ ಸಂಪತ್ತು. ಸಕಲ ಜೀವಿಗಳ ಉಸಿರಾಟಕ್ಕೆ ಗಾಳಿ ಅವಶ್ಯಕ. ಗಾಳಿ ಇರುವುದರಿಂದಲೇ ವಾತಾವರಣದಲ್ಲಿ ನೀರಾವಿ ಸಂಗ್ರಹವಾಗಿ ಮಳೆ ತರುವುದು. ಗಾಳಿ ಮಲಿನವಾಗದಂತೆ ರಕ್ಷಿಸಿಕೊಳ್ಳುವ ಜವಾಬ್ದಾರಿ ನಮ್ಮ ಮೇಲಿದೆ. ಹಾಗೆಯೇ ಸೂರ್ಯನ ಶಾಖವೂ ಒಂದು ಮುಗಿಯದ ಸಂಪತ್ತಾಗಿದ್ದು, ಅದನ್ನು ಬಳಸಿಕೊಂಡು ಮಾಲಿನ್ಯರಹಿತವಾದ, ಅಪಾರ ಪ್ರಮಾಣದ ವಿದ್ಯುತ್ ಉತ್ಪಾದಿಸಲು ಸಾಧ್ಯವಿದೆ.

**ಮುಗಿದು ಹೋಗುವ ಸಂಪನ್ಮೂಲಗಳು :** ಕೆಲವು ನೈಸರ್ಗಿಕ ಸಂಪನ್ಮೂಲಗಳನ್ನು ನಾವು ಬಳಸಿಕೊಂಡಂತೆ ಕ್ರಮೇಣ ಅವು ಬರಿದಾಗುತ್ತವೆ. ಅವುಗಳನ್ನು ಮತ್ತೆ ಸೃಷ್ಟಿಸಲು ಸಾಧ್ಯವಿಲ್ಲ. ಇಂತಹ ಸಂಪನ್ಮೂಲಗಳನ್ನು ಮುಗಿದುಹೋಗುವ ಸಂಪನ್ಮೂಲಗಳು ಎನ್ನುತ್ತೇವೆ. ಕಬ್ಬಿಣದ ಅದಿರು, ತಾಮ್ರ, ಚಿನ್ನ, ಮ್ಯಾಂಗನೀಸ್, ಬಾಕ್ಸೈಟ್ ಮುಂತಾದ ಖನಿಜಗಳು ಹಾಗೂ ಕಲ್ಲಿದ್ದಲು, ಪೆಟ್ರೋಲಿಯಂ, ನೈಸರ್ಗಿಕ ಅನಿಲ, ಯುರೇನಿಯಂ, ಥೋರಿಯಂ ಮುಂತಾದ ಖನಿಜ ಇಂಧನಗಳು ಮುಗಿದುಹೋಗುವ ಸಂಪನ್ಮೂಲಗಳಾಗಿವೆ. ಇವುಗಳನ್ನು ನಿಸರ್ಗವು ತನ್ನ ಪ್ರಕ್ರಿಯೆಯ ಮೂಲಕ ಮತ್ತೆ ತುಂಬಿಕೊಡಲು ಸಾಧ್ಯವಿಲ್ಲದಿರುವುದರಿಂದ ಇವುಗಳಿಗೆ 'ನವೀಕರಿಸಲಾಗದ ಸಂಪನ್ಮೂಲಗಳು' ಎಂತಲೂ ಕರೆಯುತ್ತಾರೆ.

ಖನಿಜಗಳು ಮತ್ತು ಖನಿಜ ಇಂಧನಗಳು ಮುಗಿದು ಹೋಗುವ ಸಂಪನ್ಮೂಲಗಳಾಗಿದ್ದು, ಇವುಗಳನ್ನು ಬಹಳ ಜಾಗರೂಕತೆಯಿಂದ, ಯೋಜನಾಬದ್ಧವಾಗಿ ಬಳಸಿಕೊಳ್ಳಬೇಕಾದ ಅವಶ್ಯಕತೆಯಿದೆ. ಒಮ್ಮೆ ಇವು ಮುಗಿದುಹೋದರೆ ಮತ್ತೆ ನಮ್ಮ ಬಳಕೆಗೆ ಇವು ಲಭ್ಯವಾಗುವುದಿಲ್ಲ. ಆಗ ಇವು ಮುಂದಿನ ಜನಾಂಗಕ್ಕೆ ದೊರೆಯಲಾರವು. ಇವುಗಳನ್ನು ಮಿತವಾಗಿ ಮತ್ತು ವ್ಯವಸ್ಥಿತವಾಗಿ ಬಳಸಿಕೊಂಡು, ಮುಂದಿನ ಜನಾಂಗಗಳಿಗೂ ಇವುಗಳನ್ನು ಉಳಿಸಬೇಕಾಗಿದೆ. ಆ ಮೂಲಕ ಪರಿಸರದಲ್ಲಿ ಸಮತೋಲನವನ್ನು ಕಾಯ್ದುಕೊಂಡು ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಬೇಕಾಗಿದೆ.

**ಅರಣ್ಯನಾಶ ಮತ್ತು ಮರುಭೂಮೀಕರಣ**

**ಅರಣ್ಯನಾಶ :** ಅರಣ್ಯ ಮಾನವನಿಗೆ ಅತಿ ಮಹತ್ವದ ಸಂಪನ್ಮೂಲವಾಗಿದೆ. ಬಹು ಉಪಯೋಗಿಗಳಾದ ಅರಣ್ಯಗಳು ಮಾನವನ ಚಟುವಟಿಕೆಗಳ ಪರಿಣಾಮವಾಗಿ ನಾಶಹೊಂದಲಾರಂಭಿಸಿವೆ. ಅನಾದಿಕಾಲದಿಂದಲೂ ಮಾನವನ ಬದುಕು ಅರಣ್ಯಗಳೊಂದಿಗೆ ಹಾಸುಹೊಕ್ಕಾಗಿದೆ. ಮನುಷ್ಯ ಸುಮಾರು 11,000 ವರ್ಷಗಳ ಹಿಂದೆ ಒಂದೆಡೆ ನಿಂತು ವ್ಯವಸಾಯ ಮಾಡಲು ಪ್ರಾರಂಭಿಸಿರಬಹುದು. ಅಂದಿನಿಂದ ವ್ಯವಸಾಯಕ್ಕಾಗಿ, ಹಳ್ಳಿ ಪಟ್ಟಣಗಳ ನಿರ್ಮಾಣಕ್ಕಾಗಿ ಅರಣ್ಯವನ್ನು ನಾಶಮಾಡಲಾರಂಭಿಸಿದನು. ಇದು ಕೇವಲ ಅಲ್ಪ ಪ್ರಮಾಣದಲ್ಲಿ ಆಗಿದ್ದರಿಂದ, ಇದರ ದುಷ್ಪರಿಣಾಮ ಯಥೇಚ್ಛವಾಗಿ ಕಾಣಲಿಲ್ಲ. ಆದರೆ ಸುಮಾರು 300 ವರ್ಷಗಳಿಂದೀಚೆಗೆ ಸಂಭವಿಸಿದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಅರಣ್ಯ ಸಂಪನ್ಮೂಲಗಳ ಬಳಕೆ ಮಿತಿಮೀರಿದೆ. ಹೆಚ್ಚುತ್ತಿರುವ ನಗರೀಕರಣ, ಕೈಗಾರಿಕೀಕರಣ, ಗಣಿಗಾರಿಕೆ ಹಾಗೂ ಕೃಷಿ ಭೂಮಿಯ ವಿಸ್ತರಣೆಯ ಕಾರಣಗಳಿಂದಾಗಿ ಮರಗಳನ್ನು ನಿರ್ದಯವಾಗಿ ಕಡಿಯಲಾಗುತ್ತಿದೆ, ಅರಣ್ಯನಾಶ ಮಾಡಲಾಗುತ್ತಿದೆ. ಇದರಿಂದ ಅಪಾರ ಪ್ರಮಾಣದ ಪರಿಸರ ಸಂಬಂಧಿ ಸಮಸ್ಯೆಗಳು ಸೃಷ್ಟಿಯಾಗುತ್ತಿವೆ.



**ಅರಣ್ಯ ನಾಶದ ಚಿತ್ರ**

**ಅರಣ್ಯ ನಾಶದ ಪರಿಣಾಮಗಳು :** ಅರಣ್ಯಗಳು ಹವಾಮಾನ ನಿಯಂತ್ರಣ, ಜೀವ ವೈವಿಧ್ಯತೆ, ಪ್ರಾಣಿ ಪಕ್ಷಿಗಳು, ಬೆಳೆಗಳು, ಔಷಧೀಯ ಸಸ್ಯಗಳು ಮುಂತಾದುವುಗಳ ಜೊತೆ ನಿಕಟ ಸಂಬಂಧ ಹೊಂದಿವೆ. ಅತಿಯಾದ ಅರಣ್ಯನಾಶವು ಪರಿಸರದ ಮೇಲೆ ಬಹಳಷ್ಟು ಅಡ್ಡಪರಿಣಾಮಗಳನ್ನು ಉಂಟುಮಾಡುತ್ತಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ:–

- ಅರಣ್ಯನಾಶದಿಂದ ಭೂಸವೆತ ಉಂಟಾಗಿ, ಭೂಮಿಯ ಫಲವತ್ತತೆ ನಾಶವಾಗುತ್ತದೆ.
- ವಾತಾವರಣದಲ್ಲಿ ಆಮ್ಲಜನಕದ ಉತ್ಪಾದನೆ ಕಡಿಮೆಯಾಗಿ, ಇಂಗಾಲದ ಡೈಆಕ್ಸೈಡ್ ಪ್ರಮಾಣ ಹೆಚ್ಚುತ್ತದೆ.
- ಅರಣ್ಯನಾಶದಿಂದ ಅರಣ್ಯ ಉತ್ಪನ್ನಗಳ ಲಭ್ಯತೆ ಕಡಿಮೆಯಾಗುತ್ತದೆ. ಇದರಿಂದ ಅರಣ್ಯ ಉತ್ಪನ್ನಗಳನ್ನೇ ಅವಲಂಭಿಸಿರುವ ಕೈಗಾರಿಕೆಗಳು ನಾಶಹೊಂದುತ್ತವೆ.
- ಅರಣ್ಯನಾಶದಿಂದ ಅಲ್ಲಿ ವಾಸಿಸುತ್ತಿರುವ ಕೋಟ್ಯಂತರ ಜೀವಿಸಂಕುಲ ಅವನತಿ ಹೊಂದುತ್ತದೆ.
- ಮಳೆಯ ಪ್ರಮಾಣ ಕಡಿಮೆಯಾಗಿ, ಮಾನವನ ಆಹಾರದ ಮೂಲವೇ ಬತ್ತುತ್ತದೆ.
- ಅರಣ್ಯನಾಶವು ಜಾಗತಿಕ ತಾಪಮಾನ ಹೆಚ್ಚಳಕ್ಕೂ ಕಾರಣವಾಗಿದೆ.

**ಮರುಭೂಮೀಕರಣ :** ಭೂಮಿಯ ಮೇಲಿನ ಅರಣ್ಯ ಮತ್ತು ಜೀವರಾಶಿಯ ನಾಶವು ಮರುಭೂಮಿಯಂತಹ ಸನ್ನಿವೇಶಕ್ಕೆ ದಾರಿಮಾಡಿಕೊಡುತ್ತದೆ. ಇದನ್ನು ಮರುಭೂಮೀಕರಣ ಎನ್ನುತ್ತೇವೆ. ಭೂಮಿಯ ಮೇಲಿನ ಮರಗಿಡಗಳಿಂದ ಕೂಡಿದ ಜೈವಿಕ ಆವರಣ ನಾಶಹೊಂದಿದಂತೆ, ವೇಗವಾಗಿ ಬೀಸುವ ಗಾಳಿ ಮತ್ತು ರಭಸವಾಗಿ ಬೀಳುವ ಮಳೆಯಿಂದ ಮಣ್ಣಿನ ಸವೆತ ಉಂಟಾಗುತ್ತದೆ. ತೀಕ್ಷ್ಣಬೇಸಾಯ ಮತ್ತು ಅತಿಯಾದ ರಾಸಾಯನಿಕಗಳ ಬಳಕೆಯು ಭೂಮಿಯ ಸಹಜ ಗುಣವನ್ನು ನಾಶಮಾಡುತ್ತದೆ. ಅರಣ್ಯನಾಶದಿಂದ ಮಳೆಯ ಪ್ರಮಾಣ ಕಡಿಮೆಯಾಗುತ್ತದೆ. ಇವೆಲ್ಲದರ ಸಂಯುಕ್ತ ಪರಿಣಾಮವಾಗಿ ಮರುಭೂಮೀಕರಣ ಉಂಟಾಗುತ್ತದೆ. ಮರುಭೂಮೀಕರಣವು ಮಣ್ಣಿನ ಫಲವತ್ತತೆಯ ನಾಶ ಮತ್ತು ಭೂಮಿಯ ಅವನತಿಗೆ ಕಾರಣವಾಗಿದೆ.

> ಪರಿಸರವನ್ನು ನಾಗರಿಕತೆಯು ಬೆನ್ನಟ್ಟುತ್ತದೆ. ನಾಗರಿಕತೆಯನ್ನು ಮರುಭೂಮಿ ಹಿಂಬಾಲಿಸುತ್ತದೆ.

ಅರಣ್ಯನಾಶದಿಂದ ಮಳೆಯ ಪ್ರಮಾಣ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿರುವುದರ ಜೊತೆಗೆ ಅಂತರ್ಜಲದ ಪ್ರಮಾಣವೂ ಕುಸಿಯುತ್ತಿದೆ. ಬರಗಾಲಗಳು ಪದೇಪದೇ ಎದುರಾಗುತ್ತಿವೆ. ಬೇಸಿಗೆಯ ಬಿಸಿಲಿನ ತಾಪವೂ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿದ್ದು, ಕುಡಿಯುವುದಕ್ಕೂ ನೀರು ಸಿಗುವುದು ದುಸ್ತರವಾಗುತ್ತಿದೆ. ಇಂದು ಜಗತ್ತಿನಲ್ಲಿ ಸುಮಾರು 80ಕ್ಕೂ ಹೆಚ್ಚು ದೇಶಗಳು ನೀರಿನ ಕೊರತೆಯನ್ನು ಅನುಭವಿಸುತ್ತಿವೆ. ಪರಿಸ್ಥಿತಿ ಹೀಗೇ ಮುಂದುವರಿದರೆ ಮುಂಬರುವ 20–25 ವರ್ಷಗಳಲ್ಲಿ ಜಗತ್ತಿನ ಸುಮಾರು 50ಕ್ಕೂ ಹೆಚ್ಚು ದೇಶಗಳು ಪೂರ್ಣ ನೀರೇ ಇಲ್ಲದ ಮರುಭೂಮಿಗಳಾಗಿ ಮಾರ್ಪಡುತ್ತವೆ ಎನ್ನುತ್ತಾರೆ ಅಮೆರಿಕಾದ ಚಿಕಾಗೋ ವಿಶ್ವವಿದ್ಯಾಲಯದ ವಿಜ್ಞಾನಿಗಳು. ಈ 50 ದೇಶಗಳಲ್ಲಿ ಭಾರತವೂ ಒಂದು ಎಂಬುದೇ ಆತಂಕದ ಸಂಗತಿ. ಈಗಾಗಲೇ ಭಾರತದಲ್ಲಿ ಸುಮಾರು 1.5 ಲಕ್ಷ ಹಳ್ಳಿಗಳು ಮತ್ತು ನಗರಗಳಲ್ಲಿನ ಸುಮಾರು 1.25 ಲಕ್ಷ ಕಾಲೊನಿಗಳು ಶುದ್ಧವಾದ ಕುಡಿಯುವ ನೀರಿಲ್ಲದೆ ದುರಂತಕ್ಕೊಳಗಾಗಿವೆ. ಕರ್ನಾಟಕದ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗೇನೂ ಇಲ್ಲ. ಇಲ್ಲಿನ ಅರಣ್ಯನಾಶ ಹೀಗೆಯೇ ಮುಂದುವರಿದರೆ ಮುಂದಿನ ಕೆಲವೇ ವರ್ಷಗಳಲ್ಲಿ ಕರ್ನಾಟಕವು ಭಾರತದ ಅತಿದೊಡ್ಡ ಮರುಭೂಮಿಯಾಗಲಿದೆ ಎಂಬ ತಜ್ಞರ ಅಭಿಪ್ರಾಯ ನಿಜವಾಗುತ್ತದೆ.

**ಧಾರಣಶಕ್ತಿ ಮತ್ತು ಹವಾಗುಣ ಬದಲಾವಣೆ**

**ಧಾರಣಶಕ್ತಿ** : ಭೂಮಿಗೆ ಧಾರಣಶಕ್ತಿಯಿದೆ. ಜನಸಂಖ್ಯಾ ಹೆಚ್ಚಳ, ಅರಣ್ಯನಾಶ, ಪರಿಸರ ಮಾಲಿನ್ಯ, ಅಂತರ್ಜಲದ ಬಳಕೆ, ವಾಹನದಟ್ಟಣೆ ಮುಂತಾದವುಗಳನ್ನು ಒಂದು ಮಿತಿಯವರೆಗೆ ತಾಳಿಕೊಳ್ಳುವ ಶಕ್ತಿ ಭೂಮಿಗೆ ಇದೆ. ಇದನ್ನೇ ಭೂಮಿಯ ಧಾರಣಶಕ್ತಿ ಎನ್ನುತ್ತಾರೆ. ಇವು ಮಿತಿಮೀರಿದರೆ ಆಗ ವಿನಾಶ ತಪ್ಪಿದ್ದಲ್ಲ.


**ಅತಿಯಾದ ಜನಸಂಖ್ಯೆಯಿಂದ ಕುಸಿಯುತ್ತಿರುವ ಭೂಮಿ**

ಭೂಮಿಯ ಮೇಲಿರುವ ವಿವಿಧ ಪ್ರಕಾರದ ಪ್ರಾಣಿಗಳು, ಸಸ್ಯಗಳು ಮತ್ತು ಮಾನವರ ನಡುವೆ ಸಂಬಂಧವಿದೆ. ಇವುಗಳ ನಡುವೆ ಸಮತೋಲನವಿರುವುದು ಅವಶ್ಯಕ. ಪ್ರಪಂಚದಲ್ಲಿ ಕಂಡುಬರುವ ಪ್ರಾಣಿಗಳು, ಮಾನವರು ಮತ್ತು ಸಸ್ಯಗಳು ಇವುಗಳ

ಪ್ರಮಾಣಗಳು ಪರಸ್ಪರ ಪೂರಕವಾಗಿದ್ದು, ಪ್ರತಿಯೊಂದು ಜೀವಿಯು ನೆಮ್ಮದಿಯಾಗಿ ಬಾಳುವಂತಹ ಸ್ಥಿತಿಯಿದ್ದರೆ ಅಂತಹ ಸ್ಥಿತಿಗೆ ಜೀವ ಪರಿಸರ ಸಮತೋಲನ ಎನ್ನುತ್ತೇವೆ. ಆದರೆ ಅವುಗಳ ಪ್ರಮಾಣಗಳಲ್ಲಿ ಅಸಮತೋಲನ ಉಂಟಾದರೆ, ಯಾವ ವರ್ಗದ ಜೀವಿಗಳೂ ನೆಮ್ಮದಿಯಿಂದ ಬದುಕಲಾರವು.

ಜೀವರಾಶಿಗಳಲ್ಲಿ ಅಸಮತೋಲನ ಉಂಟಾಗುವುದೆಂದರೆ ವಿವಿಧ ಪ್ರಕಾರದ ಜೀವರಾಶಿಗಳ ಪ್ರಮಾಣಗಳಲ್ಲಿ ಸಮತೋಲನ ತಪ್ಪುವುದು ಎಂದು ಅರ್ಥ. ಜನಸಂಖ್ಯೆಯು ಮಿತಿಮೀರಿ ಬೆಳೆದು, ಅರಣ್ಯಗಳ ಪ್ರಮಾಣ ಕಡಿಮೆಯಾದರೆ ಅಥವಾ ಖನಿಜ ಸಂಪನ್ಮೂಲಗಳ ಪ್ರಮಾಣ ಕಡಿಮೆಯಾದರೆ, ಜೀವರಾಶಿಗಳ ಪರಿಸರದಲ್ಲಿ ಅಸಮತೋಲನ ಉಂಟಾಗುತ್ತದೆ. ಇಂತಹ ಅಸಮತೋಲನದಿಂದ ಆಹಾರ ಧಾನ್ಯಗಳ ಕೊರತೆ, ಖನಿಜ ಸಂಪನ್ಮೂಲಗಳ ಕೊರತೆ, ಹವಾಮಾನದಲ್ಲಿ ಬದಲಾವಣೆ, ಮಳೆಯ ಅಭಾವ, ನೀರಿನ ಕೊರತೆ, ಪರಿಸರ ಮಾಲಿನ್ಯ ಸಂಭವಿಸುತ್ತವೆ. ಈ ರೀತಿಯ ವೈಪರೀತ್ಯಗಳನ್ನು ಒಂದು ಮಿತಿಯವರೆಗೆ ತಾಳಿಕೊಳ್ಳುವ ಶಕ್ತಿ ಭೂಮಿಗೆ ಇದೆ. ಅದು ಮಿತಿಮೀರಿದಾಗ ಜನರು ಕಷ್ಟ–ನಷ್ಟಗಳಿಗೆ ತುತ್ತಾಗುತ್ತಾರೆ. ಅಲ್ಲದೆ ಪ್ರಾಣಿ ಪಕ್ಷಿಗಳು ತಮ್ಮ ಅಸ್ಥಿತ್ವವನ್ನು ಕಳೆದುಕೊಳ್ಳುತ್ತವೆ.

**ಹವಾಗುಣ ಬದಲಾವಣೆ :** ನಾವು ಇತ್ತೀಚಿನ ದಿನಗಳಲ್ಲಿ ಅನುಭವಿಸುತ್ತಿರುವಂತೆ, ಬೇಸಿಗೆಯಲ್ಲಿ ಅತಿಯಾದ ಬಿಸಿಲು, ಚಳಿಗಾಲದಲ್ಲಿ ಅತಿಯಾದ ಚಳಿ, ಮಳೆಗಾಲದಲ್ಲಿ ಮಳೆಯ ಪ್ರಮಾಣದಲ್ಲಿ ಅತಿಯಾದ ಏರಿಳಿತ, ಚಂಡಮಾರುತ ಮುಂತಾದ ಪ್ರಕೃತಿಯಲ್ಲಿ ಕಂಡುಬರುತ್ತಿರುವ ವೈಪರೀತ್ಯಗಳಿಗೆ ಹವಾಗುಣದಲ್ಲಾಗುತ್ತಿರುವ ಬದಲಾವಣೆಯೇ ಮೂಲ ಕಾರಣ. ಇತ್ತೀಚಿನ ವರ್ಷಗಳಲ್ಲಿ ಜಾಗತಿಕ ತಾಪಮಾನದ ಬಗ್ಗೆ ವಿಶ್ವದಾದ್ಯಂತ ಚರ್ಚೆಯಾಗುತ್ತಿದೆ.

ವಾತಾವರಣದಲ್ಲಾಗುತ್ತಿರುವ ಬದಲಾವಣೆಗೆ ಹಲವಾರು ಅಂಶಗಳು ಕಾರಣವಾಗಿವೆ. ಇದಕ್ಕೆ ನೈಸರ್ಗಿಕ ಅಂಶಗಳೂ ಕಾರಣವಾಗಿವೆ ಮತ್ತು ಮಾನವನ ಚಟುವಟಿಕೆಗಳೂ ಕಾರಣವಾಗಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ,

1. **ಇಂದನಗಳ ದಹನ ಮತ್ತು ಬೆಂಕಿ :** ಕಲ್ಲಿದ್ದಲು, ಪೆಟ್ರೋಲಿಯಂ, ಇಂಧನ ಖನಿಜಗಳನ್ನು ಅತಿಯಾಗಿ ಬಳಸುತ್ತಿರುವುದು, ಸೌದೆಗಳನ್ನು ಉರಿಸುತ್ತಿರುವುದು ಮತ್ತು ಬೇಸಿಗೆಯಲ್ಲಿ ಅರಣ್ಯಗಳು ಬೆಂಕಿಯಿಂದ ದಹಿಸುವುದು ಮುಂತಾದ ಕಾರಣಗಳಿಂದ ಇಂಗಾಲದ ಮಾನಾಕ್ಸೈಡ್, ಮೀಥೇನ್, ಸಲ್ಫರ್ ಡೈಆಕ್ಸೈಡ್, ನೈಟ್ರೋಜನ್ ಆಕ್ಸೈಡ್ ಮುಂತಾದ ಅಪಾಯಕಾರಿ ಅನಿಲಗಳು ವಾತಾವರಣಕ್ಕೆ ಬಿಡುಗಡೆಯಾಗುತ್ತವೆ. ಇವು ವಾತಾವರಣದಲ್ಲಿ ಬಿಸಿಯನ್ನು ಹೆಚ್ಚಿಸಿ, ಹವಾಮಾನ ವೈಪರೀತ್ಯವನ್ನು ಉಂಟುಮಾಡುತ್ತಿವೆ.

2. **ಅರಣ್ಯನಾಶ :** ಮಾನವನು ವಿವೇಕರಹಿತನಾಗಿ ಮರಗಿಡಗಳನ್ನು ಮತ್ತು ಅರಣ್ಯಗಳನ್ನು ನಾಶಮಾಡುತ್ತಿರುವುದರಿಂದ ಆಮ್ಲಜನಕ ಮತ್ತು ಇಂಗಾಲದ ಡೈಆಕ್ಸೈಡ್ ನಡುವಿನ ಸಮತೋಲನ ಹಾಳಾಗುತ್ತದೆ. ಇದರಿಂದ ವಾತಾವರಣದಲ್ಲಿ ಆಮ್ಲಜನಕ ಕಡಿಮೆಯಾಗಿ, ಇಂಗಾಲದ ಡೈಆಕ್ಸೈಡ್ ಹೆಚ್ಚಳವಾಗಿ, ತಾಪಮಾನ ಹೆಚ್ಚಾಗುತ್ತದೆ.

3. **ಹಸಿರು ಮನೆ ಪರಿಣಾಮ :** ವಾತಾವರಣದಲ್ಲಿ ಸಂಗ್ರಹವಾಗುವ ಇಂಗಾಲದ ಡೈಆಕ್ಸೈಡ್, ಮೀಥೇನ್, ಕ್ಲೋರೋಫ್ಲೋರೋ ಕಾರ್ಬನ್, ಓಝೋನ್ ಮುಂತಾದ ಅನಿಲಗಳು ಭೂಮಿಯ

ಮೇಲಿನ ಉಷ್ಣಾಂಶ ಹೆಚ್ಚಳಕ್ಕೆ ಕಾರಣವಾಗಿವೆ. ಈ ಅನಿಲಗಳನ್ನು ಹಸಿರುಮನೆ ಅನಿಲಗಳು ಎನ್ನುತ್ತಾರೆ. ಈ ಅನಿಲಗಳು ಭೂಮಿಯ ಶಾಖವನ್ನು ಹಿಡಿದಿಟ್ಟು ಜಾಗತಿಕ ತಾಪಮಾನಕ್ಕೆ ಕಾರಣವಾಗಿವೆ.

4. **ಎಲ್ ನೈನೊ ಅಥವಾ ಉಷ್ಣೋದಕ ಪ್ರವಾಹ :** ದಕ್ಷಿಣ ಫೆಸಿಫಿಕ್ ಸಾಗರದ ಉಷ್ಣೋದಕ ಸಾಗರ ಪ್ರವಾಹವನ್ನು ಎಲ್ ನೈನೋ ಎನ್ನುತ್ತಾರೆ. ಇದು ಪೆಸಿಫಿಕ್ ಸಾಗರದಲ್ಲಿ ಭೂ ಮಧ್ಯ ರೇಖೆಯಿಂದ ದಕ್ಷಿಣದ ಕಡೆಗೆ ಪ್ರವಹಿಸುತ್ತದೆ. ಇದು ಪೆಸಿಫಿಕ್ ಸಾಗರದ ಸುತ್ತಲಿರುವ ದೇಶಗಳಲ್ಲಿ ಅತಿಯಾದ ಮಳೆ ಇಲ್ಲವೇ ಅತಿಯಾದ ಬರಗಾಲಗಳನ್ನು ಉಂಟುಮಾಡುತ್ತದೆ.

5. **ಅಂತರ್ಜಲದ ಅತಿಯಾದ ಬಳಕೆ :–** ಕೊಳವೆ ಬಾವಿಗಳ ಮೂಲಕ ಅಂತರ್ಜಲವನ್ನು ಅತಿಯಾಗಿ ಬಳಸಿಕೊಳ್ಳಲಾಗುತ್ತಿದೆ. ಇದರಿಂದ ಭೂಮಿಯ ಮೂಲಕ ಅಂತರ್ಜಲವನ್ನು ಅತಿಯಾಗಿ ಬಳಸಿಕೊಳ್ಳಲಾಗುತ್ತಿದೆ. ಇದರಿಂದ ಭೂಮಿಯ ಮೇಲ್ಭಾಗದ ಜಲಮೂಲಗಳೆಲ್ಲ ಬತ್ತಿ ಹೋಗುತ್ತಿದ್ದು, ವಾತಾವರಣದಲ್ಲಿ ತೇವಾಂಶ ಕಡಿಮೆಯಾಗಿ ಜಾಗತಿಕ ಬಿಸಿ ಹೆಚ್ಚುತ್ತಿದೆ.

**ಹವಾಗುಣ ಬದಲಾವಣೆಯ ಪರಿಣಾಮಗಳು :** 1995ರಲ್ಲಿ ವಿಶ್ವದ ತಾಪಮಾನದ ಅಧ್ಯಯನಕ್ಕಾಗಿ ಸುಮಾರು 2000 ವಿಜ್ಞಾನಿಗಳನ್ನು ಒಳಗೊಂಡ **'ಹವಾಗುಣ ಬದಲಾವಣೆ ಮೇಲಿನ ಅಂತರ ಸರ್ಕಾರಿ ತಂಡ'** (IPCC -Inter Govermental Panal on Climatic Change) ವನ್ನು ರಚಿಸಲಾಯಿತು. ಈ ತಂಡವು ವಿಶ್ವದ ತಾಪಮಾನದ ಬಗ್ಗೆ ಸುಧೀರ್ಘ ಅಧ್ಯಯನ ನಡೆಸಿ, ತನ್ನ ವರದಿಯನ್ನು ಸಲ್ಲಿಸಿದೆ. ಈ ತಂಡವು ಜಾಗತಿಕ ತಾಪಮಾನ ಹೆಚ್ಚಳವು ಮಾನವನ ಉಳಿವಿಗೆ ಅಪಾಯವನ್ನು ತಂದು ನೀಡಲಿದೆ ಎಂದು ಎಚ್ಚರಿಸಿದೆ. 21 ನೇ ಶತಮಾನದ ಕೊನೆಯ ವೇಳೆಗೆ ಭೂಮಿಯ ಉಷ್ಣತೆಯು $1.4^0$ c ರಿಂದ $5.8^0$ c. ನಷ್ಟು ಹೆಚ್ಚಲಿದೆ ಎಂದು ಅವರು ಊಹಿಸಿದ್ದಾರೆ. ಹವಾಗುಣ ಬದಲಾವಣೆಯಿಂದ ಉಂಟಾಗಬಹುದಾದ ತೊಂದರೆಗಳೆಂದರೆ:–

1. ಜಾಗತಿಕ ತಾಪಮಾನದ ಪರಿಣಾಮವಾಗಿ ಧ್ರುವಪ್ರದೇಶ ಮತ್ತು ಶಿಖರಾಗ್ರಗಳಲ್ಲಿರುವ ಹಿಮಕವಚ ಕರಗಿ, ಸಮುದ್ರದ ಮಟ್ಟ ಹೆಚ್ಚುತ್ತದೆ. ಆಗ ಸಮುದ್ರತೀರದ ಬಹುತೇಕ ನಗರ ಮತ್ತು ಪಟ್ಟಣಗಳು ಜಲಾವೃತವಾಗುತ್ತವೆ.
2. ವಾತಾವರಣದಲ್ಲಿ ಬಿಸಿ ಹೆಚ್ಚುವುದರಿಂದ ಭೂಮಿಯ ಮೇಲ್ಭಾಗದ ನೀರು ಹೆಚ್ಚಾಗಿ ಆವಿಯಾಗುತ್ತದೆ. ಇದು ನೀರಿನ ಮೂಲಗಳು, ಅರಣ್ಯಗಳು ಮತ್ತು ಇತರೆ ನೈಸರ್ಗಿಕ ಜೀವ ವ್ಯವಸ್ಥೆ, ಕೃಷಿ, ವಿದ್ಯುತ್ ಉತ್ಪಾದನೆ, ಪ್ರವಾಸೋದ್ಯಮ ಮತ್ತು ಮಾನವನ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟು ಮಾಡುತ್ತದೆ.
3. ವಾತಾವರಣದಲ್ಲಿ ಇಂಗಾಲದ ಡೈಆಕ್ಸೈಡ್ ಪ್ರಮಾಣ ಹೆಚ್ಚಾದಂತೆ, ಬಿಸಿ ಅಲೆಗಳು ಹೆಚ್ಚುತ್ತವೆ. ಇವು ಸಸ್ಯವರ್ಗ ಮತ್ತು ಪ್ರಾಣಿವರ್ಗಗಳ ಮೇಲೆ ಕೆಟ್ಟ ಪರಿಣಾಮ ಉಂಟುಮಾಡುತ್ತವೆ.
4. ವಾತಾವರಣದಲ್ಲಿ ತಾಪಮಾನ ಹೆಚ್ಚಾದಂತೆ ಶಿಖರಾಗ್ರಗಳಲ್ಲಿನ ಹಿಮಕವಚ, ಹಿಮನದಿಗಳು ಮತ್ತು ಹಿಮಸರೋವರಗಳು ಕರಗಿ, ಅಲ್ಲಿ ಹುಟ್ಟುವ ನದಿಗಳ ಪ್ರವಾಹ ಹೆಚ್ಚುತ್ತದೆ. ಆಗ ನದಿ ಬಯಲುಗಳು ಪ್ರವಾಹ ಮತ್ತು ಭೂಸವೆತಕ್ಕೆ ತುತ್ತಾಗುತ್ತವೆ. ಸಿಂಧೂ, ಗಂಗಾ ಮತ್ತು ಬ್ರಹ್ಮಪುತ್ರಾದಂತಹ ಜನಭರಿತ ನದಿ ಬಯಲುಗಳು ಹೆಚ್ಚಿನ ಪ್ರವಾಹ ಮತ್ತು ಭೂಸವೆತದಿಂದ ಬಹಳ ತೊಂದರೆಗೆ ಒಳಗಾಗುತ್ತವೆ.

5. ಉಷ್ಣವಲಯದ ಅತಿಯಾದ ಉಷ್ಣತೆಯು ಧ್ರುವಪ್ರದೇಶಗಳಿಗೂ ಹರಡುವುದರಿಂದ ಸಾಗರ ಪ್ರವಾಹಗಳ ದಿಕ್ಕೂ ಬದಲಾವಣೆಯಾಗುತ್ತದೆ.

6. ಸಾಗರ ಜೀವಿಗಳು ಹವಾಗುಣ ಬದಲಾವಣೆಯಿಂದ ಆತಂಕಕ್ಕೆ ಒಳಗಾಗುತ್ತವೆ. ಅವುಗಳ ಆಹಾರ, ಸಂತಾನೋತ್ಪತ್ತಿ ಮತ್ತು ಜೀವನ ಕ್ರಮದ ಮೇಲೆ ಕೆಟ್ಟ ಪರಿಣಾಮವಾಗುತ್ತದೆ.

ಹೀಗೆ ಜಾಗತಿಕ ತಾಪಮಾನದ ಹೆಚ್ಚಳದಿಂದ ಹವಾಗುಣ ಬದಲಾಗುತ್ತದೆ. ಹವಾಗುಣ ಬದಲಾವಣೆಯು ಜೀವ ಪರಿಸರದ ಮೇಲೆ ದುಷ್ಪರಿಣಾಮವನ್ನು ಉಂಟುಮಾಡುತ್ತದೆ. ಮಾನವನ ಬದುಕು ಅಸಹನೀಯವಾಗುತ್ತದೆ.



ಆರ್.ಕೆ. ಪಚೌರಿ

ಜಾಗತಿಕ ತಾಪಮಾನದ ಅಧ್ಯಯನಕ್ಕಾಗಿ ರಚಿಸಲಾದ ವಿಶ್ವದ ಸುಮಾರು 2000 ವಿಜ್ಞಾನಿಗಳನ್ನು ಒಳಗೊಂಡ "ಹವಾಗುಣ ಬದಲಾವಣೆ ಮೇಲಿನ ಅಂತರ ಸರ್ಕಾರಿ ತಂಡ"ದ ಮುಂದಾಳತ್ವವನ್ನು ಭಾರತೀಯ ವಿಜ್ಞಾನಿ ಆರ್.ಕೆ. ಪಚೌರಿ ವಹಿಸಿದ್ದರು. ಇವರ ಸಾಧನೆಯನ್ನು ಗುರುತಿಸಿ ಇವರಿಗೆ 2007ರ **ನೊಬೆಲ್ ಪ್ರಶಸ್ತಿ** ನೀಡಲಾಗಿದೆ.



**ಹವಾಗುಣ ಬದಲಾವಣೆಯನ್ನು ತಡೆಗಟ್ಟುವುದು :** ಭೂಮಿಯ ಮೇಲಿನ ಜೀವರಾಶಿಗಳು ಉಳಿಯಬೇಕಾದರೆ, ಮಾನವನ ಬದುಕು ಸುಖಮಯವಾಗಿ ನಿರಂತರ ಮುಂದುವರಿಯಬೇಕಾದರೆ ಹವಾಮಾನದಲ್ಲಾಗುತ್ತಿರುವ ಬದಲಾವಣೆಗಳನ್ನು ತಡೆಗಟ್ಟಬೇಕಾಗಿದೆ. ಹವಾಮಾನ ಬದಲಾವಣೆಯನ್ನು ತಡೆಗಟ್ಟಬಹುದಾದ ಕ್ರಮಗಳೆಂದರೆ,

1. ಮರಗಿಡಗಳನ್ನು ಬೆಳೆಸುವುದು. ಸಾರ್ವಜನಿಕ ಸ್ಥಳಗಳು ಮತ್ತು ಕೃಷಿ ಭೂಮಿಯ ಸುತ್ತಮುತ್ತ ಮರಗಿಡಗಳನ್ನು ಬೆಳೆಸುವುದು.

2. ಸದ್ಯದಲ್ಲಿರುವ ಅರಣ್ಯವನ್ನು ನಾಶಪಡಿಸದಂತೆ ಸಂರಕ್ಷಣೆ ಮಾಡಬೇಕು.

3. ಇಂಧನಗಳ ಬಳಕೆಯನ್ನು ಕಡಿಮೆ ಮಾಡಿ, ಗಾಳಿಶಕ್ತಿ, ಸೌರಶಕ್ತಿ, ಗೊಬ್ಬರ ಅನಿಲ, ಜೈವಿಕ ಇಂಧನ ಮುಂತಾದ ಅಸಾಂಪ್ರದಾಯಿಕ ಇಂಧನ ಮೂಲಗಳ ಬಳಕೆಯನ್ನು ಹೆಚ್ಚುಮಾಡಬೇಕು.

4. ಅಂತರರಾಷ್ಟ್ರೀಯ ಸಹಕಾರದ ಮೂಲಕ ಹಸಿರು ಮನೆ ಅನಿಲಗಳ ಹೊರಸೂಸುವಿಕೆಯನ್ನು ತಡೆಯುವುದು.

ಇತ್ತೀಚೆಗೆ ಇಂಗಾಲದ ಡೈಆಕ್ಸೈಡ್ ಮತ್ತು ಹಸಿರುಮನೆ ಅನಿಲಗಳ ಹೊರಸೂಸುವಿಕೆ ಪ್ರಮಾಣವನ್ನು ತಡೆಯಲು ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಯತ್ನಗಳಾಗುತ್ತಿವೆ. ಈ ನಿಟ್ಟಿನಲ್ಲಿ ರಾಷ್ಟ್ರ ರಾಷ್ಟ್ರಗಳ ನಡುವೆ ಒಪ್ಪಂದಗಳು ಏರ್ಪಡುತ್ತಿವೆ. ಒಂದು ನಿರ್ಧಿಷ್ಟ ಕಾಲಮಿತಿಯೊಳಗೆ ಅಪಾಯಕಾರಿ ಅನಿಲಗಳ ಹೊರಸೂಸುವಿಕೆಯನ್ನು ತಡೆಗಟ್ಟಲು ಬಹುತೇಕ ರಾಷ್ಟ್ರಗಳು ಒಮ್ಮತ ಸೂಚಿಸಿವೆ. ಇದೇ ವೇಳೆಯಲ್ಲಿ ಪರಿಸರ ಸ್ನೇಹಿಯಾದ ಅಸಾಂಪ್ರದಾಯಿಕ ಇಂಧನಮೂಲಗಳ ಬಳಕೆಗೆ ಹೆಚ್ಚಿನ ಗಮನ ಹರಿಸಲಾಗುತ್ತಿದೆ.

## ಅಭ್ಯಾಸಗಳು

**I ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟಿರುವ ಜಾಗಗಳನ್ನು ಭರ್ತಿ ಮಾಡಿರಿ.**

1 ಇತ್ತೀಚೆಗೆ ಮನುಷ್ಯನು ಪರಿಸರ ಮಾಲಿನ್ಯ ನಿಯಂತ್ರಿಸಿ, ಪ್ರಕೃತಿಯನ್ನು ರಕ್ಷಿಸಿ, ಗೌರವಿಸಿಕೊಂಡು ಹೋಗಲು ____________ ಅಭಿವೃದ್ಧಿಯತ್ತ ಮುಖ ಮಾಡಿದ್ದಾನೆ.

2 ಭೂಮಿಯ ಮೇಲ್ಭಾಗದಲ್ಲಿ ಮಾನವನ ಬಳಕೆಗೆ ಲಭ್ಯವಿರುವ ಶುದ್ಧ ನೀರಿನ ಪ್ರಮಾಣ ________

3 ನೀರು ಒಂದು ನವೀಕರಿಸಬಹುದಾದ ನೈಸರ್ಗಿಕ ಸಂಪನ್ಮೂಲ, ಹಾಗೆಯೇ ಖನಿಜ ತೈಲ __________.

4 ಮರಗಿಡಗಳು ದ್ಯುತಿಸಂಶ್ಲೇಷಣೆ ಮೂಲಕ ವಾತಾವರಣದಲ್ಲಿರುವ ___________ ನ್ನು ಹೀರಿಕೊಂಡು, ____________ ನ್ನು ಬಿಡುಗಡೆ ಮಾಡುತ್ತವೆ.

5 ಅರಣ್ಯನಾಶ ಈಗಿನಂತೆಯೇ ಮುಂದುವರಿದಲ್ಲಿ ಮುಂದಿನ ಕೆಲವೇ ವರ್ಷಗಳಲ್ಲಿ__________ ರಾಜ್ಯವು ಭಾರತದ ಅತಿದೊಡ್ಡ ಮರುಭೂಮಿಯಾಗಲಿದೆ.

**II ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1 ನೈಸರ್ಗಿಕ ಸಂಪನ್ಮೂಲಗಳು ಎಂದರೇನು ?

2 ಮರುಭೂಮೀಕರಣದ ಅರ್ಥ ಬರೆಯಿರಿ.

3 ಜೀವ ಪರಿಸರ ಸಮತೋಲನ ಎಂದರೇನು ?

4 ಹಸಿರು ಮನೆ ಅನಿಲಗಳು ಎಂದು ಯಾವ ಅನಿಲಗಳನ್ನು ಗುರುತಿಸಲಾಗಿದೆ ?

5 ಭೂಮಿಯ ಧಾರಣ ಶಕ್ತಿ ಎಂದರೇನು ?

6 ಅಂತರ್ಜಲದ ಮಟ್ಟ ಕುಸಿತಕ್ಕೆ ಬಹುಮುಖ್ಯ ಕಾರಣ ಯಾವುದು ?

**III ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿ.**

1 ನೈಸರ್ಗಿಕ ಸಂಪನ್ಮೂಲಗಳು ಮಾನವನ ಬದುಕಿಗೆ ಆಧಾರವಾಗಿವೆ. ಹೇಗೆ ?

2 ಮರಗಿಡಗಳು ಗಾಳಿಯನ್ನು ಶುದ್ಧೀಕರಿಸುವ ಕಾರ್ಖಾನೆಗಳು. ಸಮರ್ಥಿಸಿ.

3 ಮುಗಿಯದ ಸಂಪನ್ಮೂಲಗಳು ಎಂದರೇನು ? ಅವುಗಳನ್ನು ಪಟ್ಟಿ ಮಾಡಿ.

4 ಮುಗಿದು ಹೋಗುವ ಸಂಪನ್ಮೂಲಗಳಾವುವು ? ಇವುಗಳನ್ನು ಬಹು ಜಾಗರೂಕತೆಯಿಂದ ಬಳಸಬೇಕಾಗಿದೆ. ಏಕೆ ?

5 ಹವಾಗುಣ ಬದಲಾವಣೆಯ ಪರಿಣಾಮಗಳನ್ನು ಪಟ್ಟಿ ಮಾಡಿರಿ.

**IV ಚಟುವಟಿಕೆಗಳು.**

1 ನಿಮ್ಮ ಊರಿನ ಸುತ್ತಮುತ್ತ ಇರುವ ನೈಸರ್ಗಿಕ ಸಂಪನ್ಮೂಲಗಳನ್ನು ಪಟ್ಟಿಮಾಡಿರಿ.

2 ನಿಮ್ಮ ಗ್ರಾಮದಲ್ಲಿ ಎಷ್ಟು ಕೊಳವೆ ಬಾವಿಗಳಿವೆ ಎಂಬುದನ್ನು ಪತ್ತೆಹಚ್ಚಿ. ಅವುಗಳಲ್ಲಿ ಎಷ್ಟು ಬತ್ತಿಹೋಗಿವೆ? ಅವು ಬತ್ತಲು ಕಾರಣವೇನು? ಎಂಬುದನ್ನು ತಿಳಿಯಿರಿ.

3 ಭೂಕಂಪ ಮತ್ತು ಸುನಾಮಿಗೆ ಸಂಬಂಧಿಸಿದ ಚಿತ್ರಗಳನ್ನು ಸಂಗ್ರಹಿಸಿರಿ.

# ಅಧ್ಯಾಯ–3
# ಮಾನವ ಸಂಪನ್ಮೂಲ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಮಾನವ ಸಂಪನ್ಮೂಲದ ಅರ್ಥ, ಪ್ರಾಮುಖ್ಯತೆ ತಿಳಿಯುವುದು.
- ಭಾರತದ ಜನಸಂಖ್ಯಾ ಬೆಳವಣಿಗೆ ಜನನದರ, ಲಿಂಗಾನುಪಾತ, ಹಾಗೂ ಜನಸಾಂದ್ರತೆ ಬಗ್ಗೆ ತಿಳಿಯುವುದು.
- ಆರ್ಥಿಕ ಅಭಿವೃದ್ಧಿಯಲ್ಲಿ ಜನಸಂಖ್ಯಾ ಪರಿವರ್ತನೆಯ ಪಾತ್ರವನ್ನು ತಿಳಿಯುವುದು.
- ಸಂತಾನೋತ್ಪತ್ತಿ, ಆರೋಗ್ಯ ಮತ್ತು ಜನಸಂಖ್ಯಾ ಗುಣಮಟ್ಟ ಸುದಾರಿಸುವುದಕ್ಕೆ ಸಂಬಂಧಿಸಿದ ಅಂಶಗಳನ್ನು ತಿಳಿಯುವುದು.

ಒಂದು ಗ್ರಾಮದಲ್ಲಿ ವಾಸಿಸುತ್ತಿರುವ ಜನರನ್ನು ಆ ಗ್ರಾಮದ ಜನಸಂಖ್ಯೆ ಎನ್ನುತ್ತೇವೆ. ಅದೇ ರೀತಿಯಲ್ಲಿ ಒಂದು ದೇಶದಲ್ಲಿ ವಾಸಿಸುತ್ತಿರುವ ಜನರು ಆ ದೇಶದ ಜನಸಂಖ್ಯೆ ಎನಿಸಿದ್ದಾರೆ. ದೇಶದಲ್ಲಿರುವ ನೈಸರ್ಗಿಕ ಸಂಪನ್ಮೂಲಗಳಂತೆ ಅಲ್ಲಿನ ಜನಸಂಖ್ಯೆ ದೇಶದ ಆಸ್ತಿ.

ದೇಶದ ಜನಸಂಖ್ಯೆಯಲ್ಲಿ ಮಕ್ಕಳಿದ್ದಾರೆ, ವಯಸ್ಕರಿದ್ದಾರೆ ಮತ್ತು ಹಿರಿಯನಾಗರಿಕರಿದ್ದಾರೆ. 14 ವರ್ಷ ವಯಸ್ಸಿನ ಒಳಗಿರುವವರನ್ನು ಮಕ್ಕಳೆಂತಲೂ, 15 ವರ್ಷದ ಮೇಲ್ಪಟ್ಟು 60 ವರ್ಷದ ಒಳಗಿನವರನ್ನು ವಯಸ್ಕರೆಂತಲೂ ಮತ್ತು 60 ವರ್ಷದ ಮೇಲ್ಪಟ್ಟವರನ್ನು ಹಿರಿಯನಾಗರಿಕರೆಂತಲೂ ಗುರುತಿಸಲಾಗಿದೆ.

ವಯಸ್ಕರು ದುಡಿಯಲು ಸಮರ್ಥರು. ಇವರನ್ನು ದುಡಿಯುವ ಜನರು ಎನ್ನುತ್ತೇವೆ. ಈ ದುಡಿಯುವ ಜನರೇ ದೇಶದ ಸಂಪತ್ತು. ಪ್ರಸ್ತುತ ದೇಶದಲ್ಲಿರುವ ಉತ್ಪಾದನಾ ಜ್ಞಾನ, ಕೌಶಲ್ಯ ಮತ್ತು ಸಾಮರ್ಥ್ಯ ಹೊಂದಿರುವ ದುಡಿಯುವ ಜನರನ್ನು ಮಾನವ ಸಂಪನ್ಮೂಲ ಎಂದು ಕರೆಯಲಾಗುತ್ತಿದೆ. ಈಗ ಭಾರತದಲ್ಲಿ ಯುವಕರೆ ಹೆಚ್ಚಾಗಿರುವುದರಿಂದ, ದುಡಿಯುವ ಶಕ್ತಿ ಹೆಚ್ಚಾಗಿದೆ.

ಮಾನವ ಸಂಪನ್ಮೂಲಕ್ಕೆ ಉತ್ತಮ ಶಿಕ್ಷಣ, ತರಬೇತಿ ಮತ್ತು ಆರೋಗ್ಯ ಸುರಕ್ಷತೆಗಳನ್ನು ಒದಗಿಸಿದರೆ, ಅವರು ಮಾನವ ಬಂಡವಾಳವಾಗಿ ಮಾರ್ಪಡುತ್ತಾರೆ. ಇವರು ರಾಷ್ಟ್ರದ ಆದಾಯದ ಹೆಚ್ಚಳಕ್ಕೆ ಕಾರಣರಾಗುವ, ಸಮಾಜವನ್ನು ಪರಿವರ್ತನೆ ಮಾಡುವ ಸಾಮರ್ಥ್ಯವನ್ನು ಹೊಂದಿದ್ದಾರೆ.

ಮಕ್ಕಳ ಶಿಕ್ಷಣ ಮತ್ತು ಆರೋಗ್ಯದ ಮೇಲೆ ಹೆಚ್ಚಿನ ಹಣ ಹೂಡುವುದರಿಂದ ಭವಿಷ್ಯದಲ್ಲಿ ಅವರು ಹೆಚ್ಚಿನ ಆದಾಯ ತರಬಲ್ಲರು. ಸಮಾಜಕ್ಕೆ ಉತ್ತಮ ಕೊಡುಗೆ ನೀಡಬಲ್ಲರು. ಹಾಗಾಗಿ ಸರ್ಕಾರಗಳು ತನ್ನ ನಾಗರಿಕರಿಗೆ ಉತ್ತಮ ಶಿಕ್ಷಣ ಹಾಗೂ ಆರೋಗ್ಯ ಒದಗಿಸಲು ಶ್ರಮಿಸುತ್ತವೆ.

**ಸಂಪನ್ಮೂಲವಾಗಿ ಜನರು**

ಶಿಕ್ಷಣ ಮತ್ತು ತರಬೇತಿ ಪಡೆದ ಆರೋಗ್ಯವಂತ ಜನರ ದುಡಿಯುವ ಸಾಮರ್ಥ್ಯ ಹೆಚ್ಚಾಗಿರುವುದನ್ನು ನಮ್ಮ ಪರಿಸರದಲ್ಲಿ ನಾವು ಗಮನಿಸಬಹುದು, ಇದರಿಂದ ರಾಷ್ಟ್ರದ ಆದಾಯ ಹೆಚ್ಚುತ್ತದೆ. ಹಾಗಾಗಿ ವಿದ್ಯಾವಂತ ಹಾಗೂ ಆರೋಗ್ಯವಂತ ದುಡಿಯುವ ಜನರೇ ದೇಶದ ಮಾನವ ಸಂಪತ್ತು.

ಸರಕು– ಸೇವೆಗಳ ಉತ್ಪಾದನೆಯಲ್ಲಿ ನಿಸರ್ಗ ಸಂಪತ್ತು ಮತ್ತು ಭೌತಿಕ ಬಂಡವಾಳಕ್ಕಿಂತ ಮಾನವ ಸಂಪತ್ತು ಹೆಚ್ಚಿನ ಮಹತ್ವವನ್ನು ಪಡೆದಿದೆ. ನಿಸರ್ಗ ಸಂಪತ್ತು ಮತ್ತು ಭೌತಿಕ ಬಂಡವಾಳ ತಮ್ಮಷ್ಟಕ್ಕೆ ತಾವೇ ಸರಕು–ಸೇವೆಗಳನ್ನು ಉತ್ಪಾದಿಸಲಾರವು. ಮಾನವನ ಬುದ್ಧಿಶಕ್ತಿ ಮತ್ತು ಶ್ರಮ ಇದ್ದಾಗ ಮಾತ್ರ ಉತ್ಪಾದನೆ ಸಾಧ್ಯವಾಗುತ್ತದೆ. ಮಾನವ ಸಂಪತ್ತು ಉತ್ಪಾದನೆಗೆ ಬೇಕಾದ ಜ್ಞಾನ ಮತ್ತು ಶ್ರಮಶಕ್ತಿಯನ್ನು ಒದಗಿಸುತ್ತದೆ.

ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯದ ವಿವಿಧ ಉದ್ಯೋಗಗಳಲ್ಲಿ ದುಡಿಯುತ್ತಿರುವ ಜನರನ್ನು ಶ್ರಮ ಶಕ್ತಿ ಎನ್ನುತ್ತೇವೆ. ಮಾನವ ಸಂಪತ್ತು ದುಡಿಮೆಗೆ ಅಗತ್ಯವಾದ ಶ್ರಮಶಕ್ತಿಯನ್ನು ಪೂರೈಸುತ್ತದೆ. ದೇಶದ ರಕ್ಷಣಾ ಕಾರ್ಯದಲ್ಲಿ ನಿರತವಾಗಿರುವ ಸೇನಾ ಪಡೆಗಳಿಗೆ ಆರೋಗ್ಯವಂತ ಮತ್ತು ಬುದ್ಧಿವಂತ ಯುವ ಜನಾಂಗವನ್ನು ಮಾನವಸಂಪತ್ತು ಪೂರೈಸುತ್ತದೆ.

ಮಾನವ ಬಂಡವಾಳವು ಹೆಚ್ಚಿನ ಸಂಶೋಧನೆಗಳನ್ನು ಕೈಗೊಂಡು, ಜನಸಮುದಾಯಕ್ಕೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಿಕೊಡುತ್ತದೆ. ನಾವು ಪಡೆಯುವ ವಿದ್ಯುತ್, ಟಿ.ವಿ, ಕಂಪ್ಯೂಟರ್, ಮೊಬೈಲ್, ವೇಗದ ವಾಹನಗಳು ಮುಂತಾದುವು ಮಾನವ ಬಂಡವಾಳದ ಕೊಡುಗೆಯಾಗಿವೆ.

ಇಲ್ಲಿಯವರೆಗೂ ಭಾರತದಲ್ಲಿರುವ ಅತಿಯಾದ ಜನಸಂಖ್ಯೆಯು ದೇಶಕ್ಕೆ ಹೊರೆ ಎಂದೇ ಭಾವಿಸಲಾಗಿತ್ತು. ಚೀನಾದ ಆರ್ಥಿಕ ಯಶಸ್ಸಿನ ನಂತರ ಜನಸಂಖ್ಯೆಯನ್ನು ಸಂಪನ್ಮೂಲವಾಗಿ ನೋಡಲಾಗುತ್ತಿದೆ. ಶಿಕ್ಷಣ, ತರಬೇತಿ ಮತ್ತು ಆರೋಗ್ಯ ಸೌಲಭ್ಯಗಳನ್ನು ಒದಗಿಸುವ ಮೂಲಕ ಜನರನ್ನು ದೇಶದ ಉತ್ಪಾದಕ ಆಸ್ತಿಯನ್ನಾಗಿ ಪರಿವರ್ತಿಸಲು ಸಾಧ್ಯವಿದೆ. ಆದರೂ ದೇಶದಲ್ಲಿ ಜನಸಂಖ್ಯೆ ಮಿತಿಯಲ್ಲಿರುವುದು ಒಳಿತು.

**ನಿಮಗಿದು ತಿಳಿದಿರಲಿ**

- ಸಾಕ್ಷರರ ಸಂಖ್ಯೆ ಹೆಚ್ಚಾದಂತೆ ಬಡವರ ಸಂಖ್ಯೆ ಕಡಿಮೆಯಾಗುತ್ತದೆ.
- ಮಹಿಳೆಯರ ಶಿಕ್ಷಣ ಹೆಚ್ಚಾದಂತೆ ಜನನ ಪ್ರಮಾಣ ಕಡಿಮೆಯಾಗುತ್ತದೆ.
- ಕೃಷಿಕನ ಶಿಕ್ಷಣ ಹೆಚ್ಚಾದಂತೆ ಕೃಷಿ ಉತ್ಪಾದನೆ ಹೆಚ್ಚಾಗುತ್ತದೆ.
- ವ್ಯಕ್ತಿಯ ಶಿಕ್ಷಣಮಟ್ಟ ಹೆಚ್ಚಾದಂತೆ ಅವನು ಗಳಿಸುವ ಆದಾಯವು ಹೆಚ್ಚುತ್ತದೆ.

## ಜನಸಂಖ್ಯಾ ಬೆಳವಣಿಗೆ

### ಭಾರತದ ಜನಸಂಖ್ಯಾ ಬೆಳವಣಿಗೆ

ಭಾರತದ ಜನಸಂಖ್ಯೆಯನ್ನು ಗಮನಿಸಿ. 1901 ರಲ್ಲಿ ಇಲ್ಲಿನ ಜನಸಂಖ್ಯೆ 23.8 ಕೋಟಿಗಳಷ್ಟಿತ್ತು. 2001 ರಲ್ಲಿ ಅದು 102.7 ಕೋಟಿಗಳಿಗೆ ಹೆಚ್ಚಿದೆ. 2011 ರ ಜನಗಣತಿಯಲ್ಲಿ ಭಾರತದ ಜನಸಂಖ್ಯೆಯು 121.01 ಕೋಟಿಗಳಿಗೆ ಹೆಚ್ಚಳವಾಗಿದೆ. ಅಂದರೆ 100 ವರ್ಷಗಳ ಅವಧಿಯಲ್ಲಿ ಭಾರತದ ಜನಸಂಖ್ಯೆಯು ನಾಲ್ಕು ಪಟ್ಟು ಹೆಚ್ಚಿದೆ. ಪ್ರಪಂಚದ ಜನಸಂಖ್ಯೆಯಲ್ಲಿ ಶೇ. 17.3 ರಷ್ಟು ಜನರು ಭಾರತದಲ್ಲಿ ವಾಸಿಸುತ್ತಿದ್ದಾರೆ. ಭಾರತವು ಜನಸಂಖ್ಯೆಯಲ್ಲಿ ಚೀನಾದ ನಂತರದ ಎರಡನೇ ಅತಿ ದೊಡ್ಡ ದೇಶವಾಗಿದೆ. ಇತ್ತೀಚೆಗೆ ಪ್ರತಿ ವರ್ಷ ಸುಮಾರು ಎರಡು ಕೋಟಿಗಳಷ್ಟು ಜನರು ಹೊಸದಾಗಿ ನಮ್ಮ ಜನಸಂಖ್ಯೆಗೆ ಸೇರುತ್ತಿದ್ದಾರೆ. ಅಂದರೆ ಪ್ರತಿವರ್ಷ ನಮ್ಮ ದೇಶದಲ್ಲಿ ಒಂದು ಆಸ್ಟ್ರೇಲಿಯಾ ಖಂಡ ಹುಟ್ಟುತ್ತದೆಂದು ಹೇಳಿದರೆ ಆಶ್ಚರ್ಯವೆನಿಸದು. ಹೀಗೆ ದೇಶದ ಜನಸಂಖ್ಯೆಯು ನಿರಂತರವಾಗಿ ಹೆಚ್ಚಳವಾಗುವುದನ್ನು ಜನಸಂಖ್ಯಾ ಬೆಳವಣಿಗೆ ಎನ್ನುತ್ತೇವೆ.

ಭಾರತದಲ್ಲಿ ಪ್ರತಿ ಹತ್ತು ವರ್ಷಗಳಿಗೊಮ್ಮೆ ಜನಗಣತಿ ನಡೆಯುತ್ತಿದ್ದು, ಹತ್ತು ವರ್ಷಗಳ ಅವಧಿಯಲ್ಲಿ ಹೆಚ್ಚಳವಾಗುವ ಜನಸಂಖ್ಯೆಯನ್ನು ದಶವಾರ್ಷಿಕ ಜನಸಂಖ್ಯಾ ಬೆಳವಣಿಗೆ ಎನ್ನುತ್ತೇವೆ.

| ಜನಗಣತಿ ವರ್ಷ | ಜನಸಂಖ್ಯಾ ಪ್ರಮಾಣ (ಕೋಟಿಗಳಲ್ಲಿ) | ಸರಾಸರಿ ವಾರ್ಷಿಕ ಬೆಳವಣಿಗೆ ದರ (ಶೇಕಡಾವಾರು) |
|---|---|---|
| 1951 | 36.1 | 1.26 |
| 1961 | 43.9 | 1.98 |
| 1971 | 54.8 | 2.20 |
| 1981 | 68.3 | 2.25 |
| 1991 | 84.3 | 2.14 |
| 2001 | 102.7 | 1.93 |
| 2011 | 121.01 | 1.70 |

**ಜನಸಂಖ್ಯೆ ಬೆಳವಣಿಗೆ ದರ**

ರಂಗನಹಳ್ಳಿಯ ಜನಸಂಖ್ಯೆ 2001ರಲ್ಲಿ 5000 ಇತ್ತು. ಅದು 2011ರ ಜನಗಣತಿಯಲ್ಲಿ 7000ಕ್ಕೆ ಹೆಚ್ಚಳವಾಗಿದೆ. ಹಾಗಾದರೆ ರಂಗನಹಳ್ಳಿಯ ಜನಸಂಖ್ಯಾ ಬೆಳವಣಿಗೆದರ ಕಂಡುಹಿಡಿಯಿರಿ.

ಉತ್ತರ : $gt = \frac{Q_t - Q_{t-1}}{Q_{t-1}} \times 100$

$= \frac{7000 - 5000}{5000} \times 100$

$= \frac{2000}{5000} \times 100 = 40\%$ (ದಶವಾರ್ಷಿಕ ಬೆಳವಣಿಗೆ ದರ)

$g_t$ = ಬೆಳವಣಿಗೆದರ

$Q_t$ = ಈಗಿನ ಜನಸಂಖ್ಯೆ

$Q_{t-1}$ = ಹಿಂದಿನ ಜನಸಂಖ್ಯೆ

ದಶವಾರ್ಷಿಕ ಬೆಳವಣಿಗೆ ದರ ಶೇ. 40 ಆದರೆ, ಸರಾಸರಿ ಬೆಳವಣಿಗೆ ದರ ಎಷ್ಟು ?

ಜನಸಂಖ್ಯೆಯ ವಾರ್ಷಿಕ ಸರಾಸರಿ ಬೆಳವಣಿಗೆ ದರ = $\frac{40}{10} = 4\%$



ಸಾಮಾನ್ಯವಾಗಿ ಜನಸಂಖ್ಯಾ ಬೆಳವಣಿಗೆಯನ್ನು ಶೇಕಡಾವಾರು ಪ್ರಮಾಣದಲ್ಲಿ ವ್ಯಕ್ತಪಡಿಸುತ್ತೇವೆ. ಹೀಗೆ ಶೇಕಡಾವಾರು ಪ್ರಮಾಣದಲ್ಲಿ ವ್ಯಕ್ತಪಡಿಸಲಾದ ಬೆಳವಣಿಗೆಯನ್ನು ಬೆಳವಣಿಗೆ ದರ ಎನ್ನುತ್ತಾರೆ. ಜನಸಂಖ್ಯಾ ಬೆಳವಣಿಗೆ ದರವನ್ನು ದಶವಾರ್ಷಿಕ ಬೆಳವಣಿಗೆ ದರ ಮತ್ತು ವಾರ್ಷಿಕ ಬೆಳವಣಿಗೆ ದರ ಎಂದು ಎರಡು ರೀತಿಯಲ್ಲಿ ಲೆಕ್ಕಾಚಾರ ಮಾಡಲಾಗುತ್ತದೆ.

ಪ್ರತಿ ವರ್ಷ ಹೆಚ್ಚಳವಾಗುವ ಜನಸಂಖ್ಯೆಯ ಶೇಕಡಾವಾರು ಪ್ರಮಾಣವನ್ನು ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ದರ ಎಂದು ಕರೆಯುತ್ತಾರೆ. ದಶವಾರ್ಷಿಕ ಬೆಳವಣಿಗೆ ದರವನ್ನು ಹತ್ತರಿಂದ ಭಾಗಿಸುವ ಮೂಲಕ ಸರಾಸರಿ ವಾರ್ಷಿಕ ಬೆಳವಣಿಗೆ ದರವನ್ನು ಕಂಡುಹಿಡಿಯಲಾಗುತ್ತದೆ. 2011ರ ಜನಗಣತಿ ಪ್ರಕಾರ ಭಾರತದ ಜನಸಂಖ್ಯೆಯ ಸರಾಸರಿ ವಾರ್ಷಿಕ ಬೆಳವಣಿಗೆ ದರ ಶೇ. 1.7 ಇದೆ.

ಒಂದು ದೇಶದ ಜನಸಂಖ್ಯಾ ಬೆಳವಣಿಗೆ ದರವನ್ನು ಅಲ್ಲಿನ ಜನನ ದರ ಮತ್ತು ಮರಣ ದರಗಳು ನಿರ್ಧರಿಸುತ್ತವೆ. ಜನನ ದರ ಹೆಚ್ಚಾಗಿದ್ದು ಮರಣ ದರ ಕಡಿಮೆಯಿದ್ದರೆ ಮಾತ್ರ ಜನಸಂಖ್ಯೆ ಬೆಳವಣಿಗೆ ದರ ಹೆಚ್ಚಾಗಿರುತ್ತದೆ. ಜನನ ದರ ಮತ್ತು ಮರಣ ದರಗಳೆರಡೂ ಸಮನಾಗಿದ್ದರೆ ಜನಸಂಖ್ಯೆ ಸ್ಥಿರವಾಗಿರುತ್ತದೆ. ಜನನ ದರಕ್ಕಿಂತ ಮರಣ ದರ ಹೆಚ್ಚಾಗಿದ್ದರೆ ಜನಸಂಖ್ಯೆ ಇಳಿಕೆಯಾಗುತ್ತದೆ. 2011 ರಲ್ಲಿ ಭಾರತದಲ್ಲಿ ಪ್ರತಿ ಸಾವಿರ ಜನರಲ್ಲಿ ಒಂದು ವರ್ಷದ ಅವಧಿಯಲ್ಲಿ ಸರಾಸರಿ 22 ಮಕ್ಕಳು ಜನಿಸಿವೆ. ಇದೇ ಭಾರತದ ಕಚ್ಚಾ ಜನನ ದರ. ಪ್ರತಿ ಸಾವಿರ ಜನರಲ್ಲಿ ಒಂದು ವರ್ಷದ ಅವಧಿಯಲ್ಲಿ ಜನಿಸುವ ಮಕ್ಕಳ ಸರಾಸರಿ ಸಂಖ್ಯೆಗೆ ಕಚ್ಚಾ ಜನನ ದರ ಎಂದು ಕರೆಯಲಾಗುತ್ತದೆ.

**ಜನನ ದರ**

ರಂಗನಹಳ್ಳಿಯಲ್ಲಿ 2001ರಲ್ಲಿ 5000 ಜನಸಂಖ್ಯೆ ಇದ್ದು, ಅವರಲ್ಲಿ ಒಂದು ವರ್ಷದ ಅವಧಿಯಲ್ಲಿ 300 ಮಕ್ಕಳು ಜನಿಸಿವೆ. ಹಾಗಾದರೆ ಆ ಗ್ರಾಮದ ಕಚ್ಚಾ ಜನನ ದರ ಎಷ್ಟು?

ಕಚ್ಚಾ ಜನನ ದರ = $\frac{300}{5000} \times 1000 = 60$

$\therefore$ 2001 ರಲ್ಲಿ ರಂಗನ ಹಳ್ಳಿಯ ಕಚ್ಚಾ ಜನನದರ = 60

* ರಂಗನಹಳ್ಳಿಯಲ್ಲಿದ್ದ 5000 ಜನಸಂಖ್ಯೆಯಲ್ಲಿ ಒಂದು ವರ್ಷದಲ್ಲಿ 100 ಜನರು ಮರಣ ಹೊಂದಿದ್ದಾರೆ. ಹಾಗಾದರೆ ಅಲ್ಲಿನ ಕಚ್ಚಾ ಮರಣ ದರ ಎಷ್ಟು?

ಪ್ರತಿ ಸಾವಿರ ಜನರಲ್ಲಿ ಒಂದು ವರ್ಷದ ಅವಧಿಯಲ್ಲಿ ಮರಣ ಹೊಂದುವ ಜನರ ಸರಾಸರಿ ಸಂಖ್ಯೆಗೆ ಕಚ್ಚಾ ಮರಣ ದರ ಎನ್ನುತ್ತೇವೆ. 2011 ರಲ್ಲಿ ಕಚ್ಚಾ ಮರಣ ದರ 6 ಇತ್ತು. ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳು ಹೆಚ್ಚಾದಂತೆ ಕಚ್ಚಾ ಜನನ ಮತ್ತು ಮರಣ ದರಗಳು ಕಡಿಮೆಯಾಗುತ್ತವೆ. ಆದರೆ ಕಚ್ಚಾ ಜನನ ದರ ನಿಧಾನವಾಗಿ ಕಡಿಮೆಯಾದರೆ, ಕಚ್ಚಾ ಮರಣ ದರ ವೇಗವಾಗಿ ಕಡಿಮೆಯಾಗುತ್ತದೆ.

ನೈಸರ್ಗಿಕವಾಗಿ ಜನಸಂಖ್ಯೆಯಲ್ಲಿ ಮಹಿಳೆಯರು ಮತ್ತು ಪುರುಷರ ಸಂಖ್ಯೆ ಸಮನಾಗಿರುವುದು ಅವಶ್ಯಕ. ಆದರೆ 2011 ರಲ್ಲಿ ಭಾರತದಲ್ಲಿ ಸ್ತ್ರೀಯರ ಸಂಖ್ಯೆ 58.64 ಕೋಟಿಗಳಷ್ಟು ಇದ್ದರೆ, ಪುರುಷರ ಸಂಖ್ಯೆ 62.37 ಕೋಟಿಗಳಷ್ಟಿತ್ತು. ಅಂದರೆ ಪ್ರತಿ ಸಾವಿರ ಪುರುಷರಿಗೆ ಸರಾಸರಿ 940 ಮಹಿಳೆಯರಿದ್ದರು. ಇದನ್ನೇ ಭಾರತದ ಲಿಂಗಾನುಪಾತ ಎನ್ನುತ್ತೇವೆ. ವರದಕ್ಷಿಣೆ ಹಾಗೂ ಇನ್ನಿತರೆ ಕಾರಣಗಳಿಂದ ಇಂದಿಗೂ ಹೆಣ್ಣು ಮಕ್ಕಳು ಕುಟುಂಬಕ್ಕೆ ಹೊರೆ ಎಂಬ ಭಾವನೆಯಿದೆ. ತಾಯಿ ಗರ್ಭಧರಿಸಿದಾಗಲೇ, ಭ್ರೂಣಲಿಂಗ ಪತ್ತೆಹಚ್ಚಿ ಹೆಣ್ಣು ಭ್ರೂಣಗಳನ್ನು ನಿರ್ದಯವಾಗಿ ಹತ್ಯೆಮಾಡಲಾಗುತ್ತಿದೆ. ಹೆಣ್ಣು ಶಿಶುಗಳ ಅನಾದರದಿಂದ ಶಿಶು ಮರಣ ಹೆಚ್ಚಿದೆ. ಇದರಿಂದ ಲಿಂಗಾನುಪಾತ ಕಡಿಮೆಯಾಗಿದೆ. ಗರ್ಭಿಣಿ ತಾಯಿ ಹಾಗೂ ಶಿಶುವಿಗೆ ಸೂಕ್ತ ಆರೈಕೆ ಒದಗಿಸುವುದು ಮತ್ತು ಪೌಷ್ಠಿಕತೆಗೆ ಹೆಚ್ಚಿನ ಗಮನ ಕೊಡುವ ಮೂಲಕ ಶಿಶು ಮರಣವನ್ನು ಗಣನೀಯವಾಗಿ ಕಡಿಮೆ ಮಾಡಬಹುದು.

**ಲಿಂಗಾನುಪಾತ**

ರಂಗನಹಳ್ಳಿಯಲ್ಲಿ 2011 ರಲ್ಲಿ 7000 ಜನಸಂಖ್ಯೆಯಿದ್ದು, ಅವರಲ್ಲಿ 3400 ಸ್ತ್ರೀಯರು ಮತ್ತು 3600 ಮಂದಿ ಪುರುಷರಿದ್ದರು. ಹಾಗಾದರೆ ಆ ಗ್ರಾಮದ ಲಿಂಗಾನುಪಾತ ಎಷ್ಟು?

$$\text{ಲಿಂಗಾನುಪಾತ} = \frac{\text{ಸ್ತ್ರೀಯರ ಸಂಖ್ಯೆ}}{\text{ಪುರುಷರ ಸಂಖ್ಯೆ}} = \times 1000$$

$$= \frac{3400}{3600} \times 1000 = 944$$

∴ 2011ರಲ್ಲಿ ರಂಗನಹಳ್ಳಿಯ ಲಿಂಗಾನುಪಾತ = 944

ದೇಶದಲ್ಲಿನ ಜನಸಂಖ್ಯೆಯ ಒತ್ತಡವನ್ನು ತಿಳಿಯಲು ಜನಸಾಂದ್ರತೆಯನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಒಂದು ಚದರ ಕಿಲೋ ಮೀಟರ್ ಪ್ರದೇಶದಲ್ಲಿ ವಾಸಿಸುತ್ತಿರುವ ಜನರ ಸರಾಸರಿ ಸಂಖ್ಯೆಗೆ ಜನಸಾಂದ್ರತೆ ಎನ್ನುತ್ತೇವೆ. ಒಂದು ದೇಶದಲ್ಲಿರುವ ಒಟ್ಟು ಜನಸಂಖ್ಯೆಯನ್ನು ಅಲ್ಲಿನ ಒಟ್ಟು ಭೂವಿಸ್ತೀರ್ಣದಿಂದ ಭಾಗಿಸುವ ಮೂಲಕ ಜನಸಾಂದ್ರತೆಯನ್ನು ಲೆಕ್ಕಾಚಾರ ಮಾಡಲಾಗುತ್ತದೆ. 2011 ರಲ್ಲಿ ಭಾರತದ ಜನಸಾಂದ್ರತೆ 382 ಇತ್ತು. ಇತರೆ ರಾಷ್ಟ್ರಗಳಿಗೆ ಹೋಲಿಸಿದರೆ ಇದು ಅತಿ ಹೆಚ್ಚಾಗಿರುವುದು ಕಂಡುಬರುತ್ತದೆ.



**ಜನಸಾಂದ್ರತೆ**

ರಂಗನಹಳ್ಳಿಗೆ ಸಂಬಂಧಿಸಿದ ಭೂ ವಿಸ್ತೀರ್ಣ 25 ಚ.ಕಿ.ಮೀ. 2011ರಲ್ಲಿ ಅಲ್ಲಿನ ಜನಸಂಖ್ಯೆ 7000. ಹಾಗಾದರೆ ಆ ಗ್ರಾಮದ ಜನಸಾಂದ್ರತೆ ಎಷ್ಟು?

$$\text{ಜನಸಾಂದ್ರತೆ} = \frac{\text{ಒಟ್ಟು ಜನಸಂಖ್ಯೆ}}{\text{ಒಟ್ಟು ಭೂವಿಸ್ತೀರ್ಣ}}$$

$$= \frac{7000}{25} = 280$$

∴ 2011ರಲ್ಲಿ ರಂಗನಹಳ್ಳಿಯ ಜನಸಾಂದ್ರತೆ = 280

**ಜನಸಂಖ್ಯಾ ಪರಿವರ್ತನೆ**

ಆರ್ಥಿಕ ಅಭಿವೃದ್ಧಿ ಮತ್ತು ಜನಸಂಖ್ಯಾ ಬೆಳವಣಿಗೆ ನಡುವೆ ನಿಕಟ ಸಂಬಂಧವಿದೆ. ದೇಶವು ಆರ್ಥಿಕ ಅಭಿವೃದ್ಧಿ ಹೊಂದಿದಂತೆ, ಆ ದೇಶದ ಜನಸಂಖ್ಯೆಯು ಕಡಿಮೆಯಾಗುತ್ತಾ ಸಾಗುತ್ತದೆ. ದೇಶದ ಆರ್ಥಿಕ ಅಭಿವೃದ್ಧಿಯು ಮೂರು ಹಂತಗಳನ್ನು ಹಾದು ಸಾಗುತ್ತದೆ. ಅವುಗಳೆಂದರೆ, ಹಿಂದುಳಿದ ಹಂತ, ಮುಂದುವರಿಯುತ್ತಿರುವ ಹಂತ ಹಾಗೂ ಮುಂದುವರಿದ ಹಂತ. ಅಭಿವೃದ್ಧಿಯ ಈ ಹಂತಗಳಿಗೆ ತಕ್ಕಂತೆ ಜನಸಂಖ್ಯಾ ಬೆಳವಣಿಗೆಯಲ್ಲಿ ಪರಿವರ್ತನೆಯಾಗುತ್ತದೆ.

1. **ಹಿಂದುಳಿದ ಹಂತ :** ಒಂದು ದೇಶವು ಆರ್ಥಿಕವಾಗಿ ಹಿಂದುಳಿದಿದ್ದಾಗ ಅಲ್ಲಿ ಬಡತನ, ನಿರುದ್ಯೋಗ ಹೆಚ್ಚಾಗಿರುತ್ತದೆ. ಜನರಿಗೆ ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳು ಇರುವುದಿಲ್ಲ. ಜನರು ಮೂಢನಂಬಿಕೆ ಉಳ್ಳವರೂ, ಸಂಪ್ರದಾಯ ಶರಣರೂ ಆಗಿರುತ್ತಾರೆ. ಇದರಿಂದ ಜನನ ದರ ಮತ್ತು ಮರಣ ದರಗಳೆರಡೂ ಹೆಚ್ಚಾಗಿದ್ದು, ಜನಸಂಖ್ಯಾ ಬೆಳವಣಿಗೆ ದರ ಅತ್ಯಂತ ಕಡಿಮೆಯಿರುತ್ತದೆ.

2. **ಮುಂದುವರಿಯುತ್ತಿರುವ ಹಂತ :** ಹಿಂದುಳಿದ ದೇಶವು ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ತೀವ್ರ ಪ್ರಯತ್ನಗಳನ್ನು ಕೈಗೊಳ್ಳುತ್ತದೆ. ಸರ್ಕಾರವು ಮೊದಲು ಜನರಿಗೆ ಶಿಕ್ಷಣ ನೀಡಲು, ಆರೋಗ್ಯ ಸೌಲಭ್ಯಗಳನ್ನು ಒದಗಿಸಿಕೊಡಲು ಮುಂದಾಗುತ್ತದೆ. ಸಾಂಕ್ರಾಮಿಕ ರೋಗಗಳನ್ನು ನಿಯಂತ್ರಿಸಲಾಗುತ್ತದೆ. ಇದರಿಂದ ಮರಣದರ ಶೀಘ್ರವಾಗಿ ಕಡಿಮೆಯಾಗುತ್ತದೆ. ಆದರೆ ಜನನ ದರವು ಹೆಚ್ಚಾಗಿಯೇ ಇದ್ದು, ಅದು ನಿಧಾನವಾಗಿ ಕಡಿಮೆಯಾಗುತ್ತಿರುತ್ತದೆ. ಹೀಗೆ ಈ ಹಂತದಲ್ಲಿ ಜನನ ದರ ಹೆಚ್ಚಿದ್ದು, ಮರಣ ದರ ಕಡಿಮೆಯಾಗುವುದರಿಂದ ಜನಸಂಖ್ಯಾ ಬೆಳವಣಿಗೆ ದರ ಹೆಚ್ಚಾಗಿರುತ್ತದೆ. ಸದ್ಯದಲ್ಲಿ ಭಾರತವು ಈ ಹಂತದಲ್ಲಿದೆ. ಹಾಗಾಗಿ ಇಲ್ಲಿ ಜನಸಂಖ್ಯಾ ಬೆಳವಣಿಗೆ ಹೆಚ್ಚಾಗಿದೆ.

3. **ಮುಂದುವರಿದ ಹಂತ :** ಮುಂದುವರಿಯುತ್ತಿರುವ ದೇಶವು ಅಭಿವೃದ್ದಿ ಚಟುವಟಿಕೆಗಳನ್ನು ತೀವ್ರಗೊಳಿಸುವ ಮೂಲಕ ಕ್ರಮೇಣ ಮುಂದುವರಿದ ದೇಶವಾಗಿ ಮಾರ್ಪಡುತ್ತದೆ. ಆಗ ದೇಶದಲ್ಲಿರುವ ಎಲ್ಲ ಜನರು ವಿದ್ಯಾವಂತರು ಮತ್ತು ತಿಳುವಳಿಕೆಯುಳ್ಳವರೂ ಆಗಿರುತ್ತಾರೆ. ಎಲ್ಲರಿಗೂ ಆರೋಗ್ಯ ಮತ್ತು ಸ್ವಚ್ಛತೆಯ ಸೌಲಭ್ಯಗಳು ದೊರೆಯುತ್ತವೆ. ಇದರಿಂದಾಗಿ ಈ ಹಂತದಲ್ಲಿ ಜನನ ದರ ಮತ್ತು ಮರಣ ದರಗಳೆರಡೂ ಅತ್ಯಂತ ಕಡಿಮೆಯಿದ್ದು, ಜನಸಂಖ್ಯಾ ಬೆಳವಣಿಗೆ ದರವು ಅತ್ಯಂತ ಕಡಿಮೆಯಾಗುತ್ತದೆ.

ಒಟ್ಟಿನಲ್ಲಿ ಹಿಂದುಳಿದ ದೇಶವು ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಮೂಲಕ ಕ್ರಮೇಣ ಮುಂದುವರಿದ ದೇಶವಾಗಿ ಮಾರ್ಪಡುತ್ತಾ ಸಾಗಿದಂತೆ, ಅಲ್ಲಿನ ಜನಸಂಖ್ಯಾ ಬೆಳವಣಿಗೆಯಲ್ಲಿ ಪರಿವರ್ತನೆಯಾಗುತ್ತದೆ. ಯಾವುದೇ ದೇಶವು ಆರ್ಥಿಕವಾಗಿ ಅಭಿವೃದ್ಧಿ ಹೊಂದುವ ಮೂಲಕ ಜನಸಂಖ್ಯಾ ಬೆಳವಣಿಗೆಯನ್ನು ನಿಯಂತ್ರಿಸಬಹುದು.

**ನೆನಪಿರಲಿ**

**ಹಿಂದುಳಿದ ದೇಶ** – ಜನನ ದರ ಮತ್ತು ಮರಣ ದರ ಹೆಚ್ಚು, ಜನಸಂಖ್ಯಾ ಬೆಳವಣಿಗೆ ದರ ಕಡಿಮೆ

**ಮುಂದುವರಿಯುತ್ತಿರುವ ದೇಶ** – ಜನನ ದರ ಹೆಚ್ಚು ಮತ್ತು ಮರಣ ದರ ಕಡಿಮೆ, ಜನಸಂಖ್ಯಾ ಬೆಳವಣಿಗೆ ದರ ಹೆಚ್ಚು

**ಮುಂದುವರಿದ ದೇಶ**–ಜನನದರ ಮತ್ತು ಮರಣ ದರ ಕಡಿಮೆ, ಜನಸಂಖ್ಯಾ ಬೆಳವಣಿಗೆ ದರ ಕಡಿಮೆ.

**ಸಂತಾನೋತ್ಪತ್ತಿಯ ಆರೋಗ್ಯ ಮತ್ತು ಜನಸಂಖ್ಯೆಯ ಗುಣಮಟ್ಟ**

ಆರೋಗ್ಯವು ಮಾನವನ ಬಹುಮುಖ್ಯ ಸಾಮಾಜಿಕ ಮೂಲಸೌಲಭ್ಯವಾಗಿದೆ. ಉತ್ತಮ ಆರೋಗ್ಯವು ಜನರ ಜೀವನದ ಗುಣಮಟ್ಟ ಮತ್ತು ಅವರ ಕೆಲಸದ ಗುಣಮಟ್ಟವನ್ನು ಹೆಚ್ಚಿಸುತ್ತದೆ. 'ಆರೋಗ್ಯವಂತ ದೇಹದಲ್ಲಿ ಆರೋಗ್ಯವಂತ ಮನಸ್ಸಿರುತ್ತದೆ' ಎಂಬ ಮಾತಿದೆ. ಆದುದರಿಂದ ವೇಗದ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ದೇಶದ ಜನರ ಆರೋಗ್ಯ ಮಟ್ಟವನ್ನು ಹೆಚ್ಚಿಸಬೇಕಾದ ಅವಶ್ಯಕತೆಯಿದೆ.

ಸಂತಾನೋತ್ಪತ್ತಿಯು ಜೀವಿಗಳ ಪ್ರಧಾನ ಲಕ್ಷಣಗಳಲ್ಲಿ ಒಂದು. ಒಂದು ಜೀವಿ ತನ್ನಂತಹದ್ದೇ ಮತ್ತೊಂದು ಜೀವಿಗೆ ಜನ್ಮ ನೀಡುತ್ತದೆ. ಇದನ್ನೇ ಸಂತಾನೋತ್ಪತ್ತಿ ಎಂದು ಕರೆಯಲಾಗುತ್ತದೆ. ತಾಯಿಯು ಗರ್ಭಧರಿಸಿದಂದಿನಿಂದ ಮಗುವಿಗೆ ಜನ್ಮ ನೀಡುವವರೆಗೆ ಆಕೆಯ ಆರೋಗ್ಯ ಮತ್ತು ಪೌಷ್ಠಿಕತೆಗೆ ಹೆಚ್ಚಿನ ಗಮನ ನೀಡಬೇಕಾಗುತ್ತದೆ. ಜನನದ ನಂತರ ತಾಯಿ ಮತ್ತು ಶಿಶುವಿಗೆ ಸೂಕ್ತ ಆರೈಕೆಯನ್ನು ಒದಗಿಸಬೇಕಾಗುತ್ತದೆ. ಇದಕ್ಕಾಗಿ ದೇಶದಲ್ಲಿ ಸುಸಜ್ಜಿತ ಆರೋಗ್ಯ ಮೂಲಸೌಲಭ್ಯವನ್ನು ಅಭಿವೃದ್ಧಿ ಪಡಿಸಬೇಕಾಗುತ್ತದೆ. ಆರೋಗ್ಯ ಮೂಲಸೌಲಭ್ಯವು ಆಸ್ಪತ್ರೆಗಳು, ವೈದ್ಯರು, ದಾದಿಯರು, ಇತರೆ ಅರೆ–ವೈದ್ಯ ಸಿಬ್ಬಂದಿ, ಹಾಸಿಗೆಗಳು, ಆಸ್ಪತ್ರೆಯಲ್ಲಿ ಅಗತ್ಯವಿರುವ ಉಪಕರಣಗಳು ಮತ್ತು ಉತ್ತಮವಾಗಿ ಅಭಿವೃದ್ಧಿ ಹೊಂದಿದ ಔಷಧಿ ತಯಾರಿಕಾ ಕೈಗಾರಿಕೆಗಳು ಮುಂತಾದುವುಗಳನ್ನು ಒಳಗೊಂಡಿದೆ. ಇವು ಎಲ್ಲ ಜನರಿಗೆ ದೊರಕುವಂತಾಗಬೇಕು.

ಭಾರತದ ರಾಷ್ಟ್ರೀಯ ಆರೋಗ್ಯ ನೀತಿಯು ಜನರ ಆರೋಗ್ಯ ಸುರಕ್ಷತೆ, ಕುಟುಂಬ ಕಲ್ಯಾಣ ಮತ್ತು ಪೌಷ್ಠಿಕಾಂಶದ ಸೇವೆಗಳನ್ನು ಉತ್ತಮಪಡಿಸುವ ಗುರಿ ಹೊಂದಿದೆ. ಅದರಲ್ಲೂ ಸೌಲಭ್ಯ ವಂಚಿತ ಬಡ ಹಾಗೂ ಗುಡ್ಡಗಾಡು ಜನರ ಆರೋಗ್ಯ ರಕ್ಷಣೆಗೆ ಹೆಚ್ಚು ಗಮನಹರಿಸಿದೆ. ಕಳೆದ ಆರು ದಶಕಗಳ ಅವಧಿಯಲ್ಲಿ ವ್ಯಾಪಕವಾದ ಆರೋಗ್ಯ ಮೂಲಸೌಲಭ್ಯಗಳನ್ನು ನಿರ್ಮಾಣಮಾಡುವ ಮೂಲಕ ಜನರ ಗುಣಮಟ್ಟವನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸಲಾಗುತ್ತಿದೆ.

ಸರ್ಕಾರದ ಈ ಕ್ರಮಗಳಿಂದಾಗಿ ಜನರ ಗುಣಮಟ್ಟದಲ್ಲಿ ಸುಧಾರಣೆಯಾಗಿದೆ. ನಿರೀಕ್ಷಿತ ಜೀವಿತಾವಧಿ ದರ ಹೆಚ್ಚುತ್ತಿದೆ. ಶಿಶು ಮರಣ ದರ ಕಡಿಮೆಯಾಗುತ್ತಿದೆ. ನಿರೀಕ್ಷಿತ ಜೀವಿತಾವಧಿ ದರದ ಹೆಚ್ಚಳವು ಜನರ ಜೀವನದ ಗುಣಮಟ್ಟದಲ್ಲಾಗಿರುವ ಸುಧಾರಣೆಯ ಸ್ಪಷ್ಟ ಸೂಚಕವಾಗಿದೆ. ತಾಯಿ ಮಕ್ಕಳ ಸುರಕ್ಷತೆ, ಪೌಷ್ಠಿಕಾಂಶದ ಪೂರೈಕೆ, ರೋಗಗಳಿಂದ ಮಕ್ಕಳ ರಕ್ಷಣೆ ಮುಂತಾದ ಕ್ರಮಗಳ ಪರಿಣಾಮವಾಗಿ ಶಿಶು ಮರಣ ದರ ಕಡಿಮೆಯಾಗುತ್ತಿದೆ.

**ಆರೋಗ್ಯದ ಸೂಚಕಗಳು**

ಒಂದು ದೇಶದ ಜನರ ಆರೋಗ್ಯದ ಸ್ಥಿತಿಗತಿಗಳನ್ನು ತಿಳಿಯಲು ಕೆಲವು ಸೂಚಕಗಳನ್ನು ಬಳಸುತ್ತಾರೆ. ಅವುಗಳೆಂದರೆ, ನಿರೀಕ್ಷಿತ ಜೀವಿತಾವಧಿ ದರ, ಶಿಶು ಮರಣ ದರ, ಮಕ್ಕಳ ಮರಣ ದರ ಮತ್ತು ಮಾತೃ ಮರಣ ದರ.

**ನಿರೀಕ್ಷಿತ ಜೀವಿತಾವಧಿ ದರ :** ಹುಟ್ಟಿದ ಪ್ರತಿಯೊಂದು ಮಗು ಬದುಕುಳಿಯಬಹುದಾದ ಅಂದಾಜು ವರ್ಷ.

**ಶಿಶು ಮರಣ ದರ :** ಪ್ರತಿ ಸಾವಿರ ಜನನದಲ್ಲಿ ಒಂದು ವರ್ಷದ ಒಳಗೆ ಮರಣಹೊಂದುವ ಶಿಶುಗಳ ಸರಾಸರಿ ಸಂಖ್ಯೆ.

**ಮಕ್ಕಳ ಮರಣ ದರ :** ಪ್ರತಿ ಸಾವಿರ ಜನನದಲ್ಲಿ ಐದು ವರ್ಷಗಳ ಒಳಗೆ ಮರಣಹೊಂದುವ ಮಕ್ಕಳ ಸರಾಸರಿ ಸಂಖ್ಯೆ.

**ಮಾತೃ ಮರಣ ದರ :** ಪ್ರತಿ ಒಂದು ಲಕ್ಷ ಜನನದಲ್ಲಿ ಮರಣ ಹೊಂದುವ ತಾಯಂದಿರ ಸರಾಸರಿ ಸಂಖ್ಯೆ.

## ಅಭ್ಯಾಸಗಳು

**I ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟಿರುವ ಜಾಗಗಳನ್ನು ಭರ್ತಿ ಮಾಡಿರಿ.**

1 ಪ್ರಸ್ತುತ ದೇಶದಲ್ಲಿರುವ ಉತ್ಪಾದನಾ ಜ್ಞಾನ, ಕೌಶಲ್ಯ ಮತ್ತು ಸಾಮರ್ಥ್ಯ ಹೊಂದಿರುವ ದುಡಿಯುವ ಜನರನ್ನು ____________ ಎಂದು ಕರೆಯಲಾಗುತ್ತಿದೆ.

2 2011 ರಲ್ಲಿ ಭಾರತದ ಲಿಂಗಾನುಪಾತ ____________ .

3 ಭಾರತದಲ್ಲಿ ಜನಗಣತಿಯು ಪ್ರತಿ ____________ ವರ್ಷಗಳಿಗೊಮ್ಮೆ ನಡೆಯುತ್ತದೆ.

4 ಒಂದು ದೇಶದ ಜನಸಂಖ್ಯೆಯ ಗುಣಮಟ್ಟವು ____________ ಮತ್ತು ____________ನ್ನು ಅವಲಂಬಿಸಿದೆ.

5 ಪ್ರತಿ ಸಾವಿರ ಜನನದಲ್ಲಿ ಒಂದು ವರ್ಷದಲ್ಲಿ ಮರಣ ಹೊಂದುವ ಶಿಶುಗಳ ಸರಾಸರಿ ಸಂಖ್ಯೆಗೆ ____________ ಎನ್ನುವರು.

6 ಭಾರತದಲ್ಲಿ ಕಚ್ಚಾ ಜನನ ದರ ಹೆಚ್ಚಾಗಿದ್ದು, ಕಚ್ಚಾ ಮರಣ ದರ ____________ಆಗುತ್ತಿರುವುದರಿಂದ ಜನಸಂಖ್ಯಾ ಬೆಳವಣಿಗೆ ದರ ಹೆಚ್ಚಾಗಿದೆ.

**II ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1 ದುಡಿಯುವ ಜನರು ಎಂದು ಯಾರನ್ನು ಗುರುತಿಸಲಾಗುತ್ತಿದೆ ?

2 ಮಾನವ ಸಂಪನ್ಮೂಲ ಎಂದರೇನು ?

3 2011 ರ ಜನಗಣತಿ ಪ್ರಕಾರ ಭಾರತದ ಜನಸಂಖ್ಯೆ ಎಷ್ಟು ?

4 ಕಚ್ಚಾ ಜನನ ದರ ಎಂದರೇನು ?

5 2011 ರಲ್ಲಿ ಭಾರತದ ಕಚ್ಚಾ ಜನನ ದರ 22 ಮತ್ತು ಕಚ್ಚಾ ಮರಣ ದರ 6 ಇದೆ. ಹಾಗಾದರೆ ಕಚ್ಚಾ ಜನಸಂಖ್ಯೆ ಬೆಳವಣಿಗೆ ದರ ಕಂಡು ಹಿಡಿಯಿರಿ?

6 2011 ರ ಜನಗಣತಿ ಪ್ರಕಾರ ಭಾರತದ ಜನಸಾಂದ್ರತೆ ಎಷ್ಟು ?

7 ಮುಂದುವರಿದ ರಾಷ್ಟ್ರಗಳಲ್ಲಿ ಜನಸಂಖ್ಯಾ ಬೆಳವಣಿಗೆ ದರ ಅತ್ಯಂತ ಕಡಿಮೆಯಿದೆ. ಏಕೆ ?

**III ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿ.**

1 ಜನಸಾಂದ್ರತೆ ಎಂದರೇನು ? ಒಂದು ದೇಶದ ಜನಸಾಂದ್ರತೆಯನ್ನು ಹೇಗೆ ಲೆಕ್ಕಾಚಾರ ಮಾಡಲಾಗುವುದು?

2 ಉತ್ಪಾದನಾಂಗಗಳಲ್ಲಿ ಮಾನವ ಬಂಡವಾಳ ಅತ್ಯುತ್ತಮವಾದುದು ಎಂದು ಪರಿಗಣಿಸಲಾಗುತ್ತಿದೆ. ಏಕೆ ?

3 ಮಾನವ ಬಂಡವಾಳವನ್ನು ರೂಪಿಸುವಲ್ಲಿ ಆರೋಗ್ಯ ಮತ್ತು ಶಿಕ್ಷಣದ ಪಾತ್ರವೇನು ?

4 ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಮಾತ್ರ ಜನಸಂಖ್ಯಾ ಬೆಳವಣಿಗೆ ಹೆಚ್ಚಾಗಿರುತ್ತದೆ. ಕಾರಣವೇನು ?

5 ಜನಸಂಖ್ಯೆಯ ಗುಣಮಟ್ಟವನ್ನು ಹೆಚ್ಚಿಸಲು ತಾವು ಯಾವ ಕ್ರಮಗಳನ್ನು ಸೂಚಿಸುವಿರಿ ?

**IV ಯೋಜಿತ ಕಾರ್ಯ (Project Work)**

1 ಯಾವುದಾದರೊಂದು ಗ್ರಾಮಕ್ಕೆ ಭೇಟಿ ನೀಡಿ ಅಲ್ಲಿನ ಜನಸಂಖ್ಯೆಯನ್ನು ಗಣತಿ ಮಾಡಿರಿ. ಅವರಲ್ಲಿ ಸ್ತ್ರೀಯರು ಮತ್ತು ಪುರುಷರ ಸಂಖ್ಯೆಯನ್ನು ವಿಂಗಡಿಸಿ ಲಿಂಗಾನುಪಾತ ಕಂಡು ಹಿಡಿಯಿರಿ.

# ಅಧ್ಯಾಯ-4

# ಬಡತನ ಮತ್ತು ಹಸಿವು

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ಬಡತನದ ಸೂಚಕಗಳನ್ನು ಗುರುತಿಸುವುದು.
- ಭಾರತದಲ್ಲಿ ಬಡತನದ ಪ್ರಮಾಣ ಗುರುತಿಸುವುದು.
- ಬಡತನದ ಲಕ್ಷಣಗಳಾದ ಹಸಿವು ಮತ್ತು ದಾರಿದ್ರ್ಯಗಳ ಬಗ್ಗೆ ಅರ್ಥೈಸಿಕೊಳ್ಳುವುದು.
- ಆಹಾರ ಭದ್ರತೆಯಡಿಯಲ್ಲಿರುವ ಕಾಪು ದಾಸ್ತಾನು ಮತ್ತು ಸಾರ್ವಜನಿಕ ವಿತರಣಾ ವ್ಯವಸ್ಥೆಯ ಬಗ್ಗೆ ತಿಳಿಯುವುದು.
- ಬಡತನ ನಿರ್ಮೂಲನೆಗಾಗಿ ಕೈಗೊಂಡಿರುವ ಕ್ರಮಗಳನ್ನು ತಿಳಿಯುವುದು.

ಮಾನವ ಬದುಕಲು ಅವನಿಗೆ ಹೊಟ್ಟೆತುಂಬ ಊಟ, ಮೈಮುಚ್ಚಲು ಬಟ್ಟೆ, ವಾಸಿಸಲೊಂದು ಮನೆ, ರೋಗಗಳಿಗೆ ತುತ್ತಾದಾಗ ಆರೋಗ್ಯ ಸೌಲಭ್ಯಗಳು, ಶಿಕ್ಷಣ ಮತ್ತು ಶುದ್ಧವಾದ ಕುಡಿಯುವ ನೀರು ಬೇಕಾಗುತ್ತದೆ. ಇವನ್ನೇ ಮಾನವನ ಕನಿಷ್ಠ ಮೂಲಭೂತ ಅವಶ್ಯಕತೆಗಳು ಎನ್ನುತ್ತೇವೆ. ಈ ಮೂಲಭೂತ ಅವಶ್ಯಕತೆಗಳು ಎಲ್ಲ ಜನರಿಗೂ ದೊರೆಯುವಂತೆ ನೋಡಿಕೊಳ್ಳುವುದು ನಾಗರಿಕ ಸಮಾಜದ ಕರ್ತವ್ಯ.

ಭಾರತವು ಸ್ವಾತಂತ್ರ್ಯ ಪಡೆದ ನಂತರ, ನಮ್ಮ ರಾಷ್ಟ್ರ ನಾಯಕರು ನಮ್ಮ ದೇಶದಲ್ಲಿ ಬಡತನ, ಅಜ್ಞಾನ, ಅನಾರೋಗ್ಯ, ಆದಾಯ ಅಸಮತೋಲನ ಮುಂತಾದ ಸಮಸ್ಯೆಗಳನ್ನು ನಿವಾರಣೆ ಮಾಡಲು ಪಣತೊಟ್ಟರು. ಇವರ ಆಶಯಕ್ಕೆ ತಕ್ಕಂತೆ ಸರ್ಕಾರವು ಹಲವಾರು ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದಿದೆ. ಇಲ್ಲಿಯವರೆಗೆ 11 ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯಗತ ಮಾಡಲಾಗಿದೆ. ಇವೆಲ್ಲವುಗಳ ಮೂಲ ಗುರಿ, ಎಲ್ಲ ಜನರಿಗೆ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವುದು ಮತ್ತು ಬಡತನವನ್ನು ನಿವಾರಣೆ ಮಾಡುವುದಾಗಿದೆ. ಆದರೆ ದುರಾದೃಷ್ಟವಶಾತ್ ಈಗಲೂ ಭಾರತದಲ್ಲಿ $\frac{1}{4}$ ಭಾಗದಷ್ಟು ಜನರು ಬಡತನ ರೇಖೆಗಿಂತ ಕೆಳಗಿದ್ದಾರೆ.

**ಬಡವರೆಂದರೆ ಯಾರು ?**

ನೀವು ನಿಮ್ಮ ಸುತ್ತಮುತ್ತಲಿನ ಜೀವನವನ್ನು ಗಮನಿಸಿರಬಹುದು. ನಗರ ಮತ್ತು ಗ್ರಾಮೀಣ ಪ್ರದೇಶಗಳೆರಡರಲ್ಲೂ ಬಡತನ ಕಂಡುಬರುತ್ತದೆ. ನಗರಗಳಲ್ಲಿ ಬೀದಿಬದಿಯ ವ್ಯಾಪಾರಿಗಳು, ದಿನಗೂಲಿ ಕಾರ್ಮಿಕರು, ಭಿಕ್ಷುಕರು, ಸಣ್ಣಪುಟ್ಟ ಕೈಗಾರಿಕೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು, ಅಲೆಮಾರಿಗಳು ಮುಂತಾದವರು ಬಡವರೆನಿಸಿದ್ದಾರೆ.

ಗ್ರಾಮೀಣ ಪ್ರದೇಶದಲ್ಲಿ ಸ್ವಂತ ಜಮೀನು ಇಲ್ಲದೆ ಇತರರ ಹೊಲಗದ್ದೆಗಳಲ್ಲಿ ಕೆಲಸ ಮಾಡುವ ಕೃಷಿ ಕಾರ್ಮಿಕರು, ಕಡಿಮೆ ಜಮೀನು ಹೊಂದಿರುವ ಸಣ್ಣ ಮತ್ತು ಅತಿಸಣ್ಣ ರೈತರು, ಕೃಷಿಯೇತರ ಕಸುಬುಗಳನ್ನು ಮಾಡುತ್ತಿರುವ ಬುಟ್ಟಿ ಹೆಣೆಯುವವರು, ಮಡಿಕೆ ಮಾಡುವವರು, ಕಬ್ಬಿಣದ ಕೆಲಸಮಾಡುವವರು ಮುಂತಾದವರು ಬಡತನದಲ್ಲಿ ವಾಸಿಸುತ್ತಿದ್ದಾರೆ.

ಬಡವರ ಬಹುಮುಖ್ಯ ಲಕ್ಷಣವೆಂದರೆ ಹಸಿವು ಮತ್ತು ದಾರಿದ್ರ್ಯ. ಇವರಿಗೆ ದಿನದ ಎರಡು ಹೊತ್ತಿನ ಊಟ ಪಡೆಯುವುದೂ ಕಷ್ಟವಾಗಿರುತ್ತದೆ. ಇವರಲ್ಲಿ ಅಪೌಷ್ಠಿಕತೆ ಹೆಚ್ಚಾಗಿರುತ್ತದೆ. ಆರೋಗ್ಯದ ಬಗ್ಗೆ ಕಾಳಜಿ ಇರುವುದಿಲ್ಲ. ಅನಾರೋಗ್ಯದಿಂದ ಬಳಲುತ್ತಿರುತ್ತಾರೆ. ಶಿಕ್ಷಣ ಮತ್ತು ತರಬೇತಿಯಿಲ್ಲದೆ ಕೌಶಲ್ಯರಹಿತರಾಗಿರುತ್ತಾರೆ. ಹಾಗಾಗಿ ಇವರಿಗೆ ಉದ್ಯೋಗಾವಕಾಶಗಳು ಅತ್ಯಂತ ಕಡಿಮೆ ಮತ್ತು ಇರುವ ಕೆಲಸವೂ ಸ್ಥಿರವಾಗಿರುವುದಿಲ್ಲ.

ಸಾಮಾನ್ಯವಾಗಿ ಬಡವರು ಕಚ್ಚಾ ಮನೆಗಳಲ್ಲಿ ವಾಸಿಸುತ್ತಾರೆ. ಅಂದರೆ ಮಣ್ಣಿನ ಗೋಡೆ, ಮಣ್ಣಿನ ಮೇಲ್ಛಾವಣಿ ಹೊಂದಿರುವ ಮಾಳಿಗೆ ಮನೆಗಳು, ತೆಂಗಿನ ಗರಿ ಅಥವಾ ಹುಲ್ಲಿನಿಂದ ನಿರ್ಮಿಸಿರುವ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ಅತಿಬಡವರಿಗೆ ಇಂತಹ ಮನೆಗಳೂ ಇರುವುದಿಲ್ಲ. ಅವರು ರಸ್ತೆಗಳ ಬದಿಯಲ್ಲಿ, ಮರದ ಕೆಳಗೆ ನಿರ್ಮಿಸಿಕೊಂಡಿರುವ ಸಣ್ಣ ಸಣ್ಣ ಟೆಂಟುಗಳು ಅಥವಾ ತಗಡುಗಳಿಂದ ಮಾಡಿದ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ನಗರ ಪ್ರದೇಶಗಳಲ್ಲಿ ಇಂತಹ ಜನರು ಹೆಚ್ಚಾಗಿ ವಾಸಿಸುವ ಪ್ರದೇಶಗಳಿಗೆ ಕೊಳಗೇರಿಗಳು ಎನ್ನುತ್ತಾರೆ. ಹೀಗೆ ಮಾನವನ ಬದುಕಿಗೆ ಅಗತ್ಯವಾದ ಊಟ, ಬಟ್ಟೆ, ವಸತಿ, ಶಿಕ್ಷಣ, ಆರೋಗ್ಯ ಮುಂತಾದ ಕನಿಷ್ಠ ಮೂಲಭೂತ ಅವಶ್ಯಕತೆಗಳನ್ನು ಪಡೆಯಲಾಗದ ಪರಿಸ್ಥಿತಿಯೇ ಬಡತನ.

**ಬಡತನದ ಸೂಚಕಗಳು**

ಬಡತನ ಮಾನವ ಜನಾಂಗದ ಶತ್ರು. ಅದು ಹಲವು ರೂಪಗಳಲ್ಲಿದೆ. ಅದನ್ನು ಸಂಪೂರ್ಣವಾಗಿ ಹೋಗಲಾಡಿಸಬೇಕೆಂಬುದು ನಮ್ಮೆಲ್ಲರ ಗುರಿ. ಬಡತನವನ್ನು ನಿಖರವಾಗಿ ಗುರುತಿಸುವುದಕ್ಕಾಗಿ ಸ್ಪಷ್ಟವಾದ ಮಾನದಂಡವನ್ನು ಅಭಿವೃದ್ಧಿಪಡಿಸುವುದು ಅವಶ್ಯಕವಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಪಿತಾಮಹ ದಾದಾಬಾಯಿ ನವರೋಜಿಯವರು ಬಡವರನ್ನು ಗುರುತಿಸಲು ಮೊಟ್ಟಮೊದಲ ಬಾರಿಗೆ ಬಡತನ ರೇಖೆಯನ್ನು ಬಳಕೆಗೆ ತಂದರು. ಸ್ವಾತಂತ್ರ್ಯಾ ನಂತರವೂ ಬಡತನವನ್ನು ಅಳೆಯಲು ಬಡತನ ರೇಖೆಯನ್ನು ಪ್ರಮುಖ ಸೂಚಕವನ್ನಾಗಿ ಬಳಸಲಾಗುತ್ತಿದೆ. ಬಡವರನ್ನು ಬಡವರಲ್ಲದವರಿಂದ ಪ್ರತ್ಯೇಕಿಸಲು ಬಳಸುವ ರೇಖೆಯೇ ಬಡತನ ರೇಖೆ. ಸದ್ಯದಲ್ಲಿ ಮಾನವನ ಆಹಾರದ ಅನುಭೋಗದ ಪ್ರಮಾಣವನ್ನು ಪರಿಗಣಿಸಿ ಬಡತನ ರೇಖೆಯನ್ನು ಗುರುತಿಸಲಾಗುತ್ತಿದೆ. ವ್ಯಕ್ತಿಯ ಆಹಾರದ ಅನುಭೋಗವನ್ನು ಕ್ಯಾಲೊರಿಗಳಲ್ಲಿ ಅಳೆಯಲಾಗುತ್ತದೆ. ವ್ಯಕ್ತಿಯೊಬ್ಬನಿಗೆ ಪ್ರತಿದಿನ ನಗರ ಪ್ರದೇಶದಲ್ಲಿ ಕನಿಷ್ಠ 2100 ಕ್ಯಾಲೊರಿಗಳು ಮತ್ತು ಗ್ರಾಮೀಣ ಪ್ರದೇಶದಲ್ಲಿ ಕನಿಷ್ಠ 2400 ಕ್ಯಾಲೊರಿಗಳಷ್ಟು ಆಹಾರ ಬೇಕಾಗುತ್ತದೆ. ಇದೇ ಬಡತನ ರೇಖೆ. ಮಾನವನಿಗೆ ಅಗತ್ಯವಿರುವ ಕನಿಷ್ಠ ಮಟ್ಟದ ಆಹಾರವನ್ನು ಪಡೆಯಲಾಗದವರನ್ನು ಬಡತನ ರೇಖೆಯ ಕೆಳಗಿರುವವರು (ಬಡವರು) ಎಂದು ಗುರುತಿಸಲಾಗುತ್ತಿದೆ.

ಮಾನವನ ಉಳಿವಿಗಾಗಿ ಆಹಾರವೊಂದಿದ್ದರೆ ಸಾಲದು. ಅವನು ಆರೋಗ್ಯವಂತನಾಗಿರಲು ಉತ್ತಮ ಪೌಷ್ಠಿಕ ಆಹಾರ ಅವನಿಗೆ ದೊರೆಯಬೇಕು. ಅವನು ಸಂಪನ್ಮೂಲಗಳನ್ನು ಸರಿಯಾಗಿ ಬಳಸಿಕೊಳ್ಳಲು ಬೇಕಾದ ಯೋಗ್ಯ ಜ್ಞಾನವಂತನಾಗಿರಬೇಕು, ಅಲ್ಲದೆ ಸಮುದಾಯದ ಜೀವನದಲ್ಲಿ ಅವನಿಗೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಮುಂತಾದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಸ್ವಾತಂತ್ರ್ಯವಿರಬೇಕು. ಬಡವರ ಜೀವನದಲ್ಲಿ ಈ ರೀತಿಯ ಸುಧಾರಣೆಗಳಾದಾಗ ಬಡತನ ನಿರ್ಮೂಲವಾಗುತ್ತದೆ.

ಈ ದೃಷ್ಠಿಕೋನದಲ್ಲಿ ಸಮಾಜಶಾಸ್ತ್ರಜ್ಞರು ಆದಾಯ ಮತ್ತು ಅನುಭೋಗದ ಜೊತೆಗೆ ಇತರೆ ಸಾಮಾಜಿಕ ಸೂಚಕಗಳ ಮೂಲಕ ಬಡತನವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಅವುಗಳೆಂದರೆ, ಅನಕ್ಷರತೆಯ ಮಟ್ಟ,

ಅಪೌಷ್ಟಿಕತೆಯ ಪ್ರಮಾಣ, ಆರೋಗ್ಯ ಸುರಕ್ಷತೆಯ ಕೊರತೆ, ಉದ್ಯೋಗಾವಕಾಶಗಳ ಕೊರತೆ, ನೈರ್ಮಲ್ಯದ ಅಲಭ್ಯತೆ ಮುಂತಾದುವು. ಇತ್ತೀಚೆಗೆ ಬಡತನವನ್ನು ವಿಶ್ಲೇಷಿಸುವಲ್ಲಿ ಸಾಮಾಜಿಕ ಬಹಿಷ್ಕಾರ ಮತ್ತು ಅಶಕ್ತತೆಯ ಅಂಶಗಳನ್ನೂ ಪರಿಗಣಿಸಲಾಗುತ್ತಿದೆ.

> ಮುಂದುವರಿದ ಪಾಶ್ಚಿಮಾತ್ಯ ದೇಶಗಳ ಅರ್ಥಶಾಸ್ತ್ರಜ್ಞರ ಪ್ರಕಾರ ದಕ್ಷಿಣ ಏಷ್ಯಾದ ರಾಷ್ಟ್ರಗಳಾದ ಭಾರತ, ಪಾಕಿಸ್ತಾನ, ಬಾಂಗ್ಲಾದೇಶಗಳ ಬಹುತೇಕ ಜನರು ಬಡವರಾಗಿದ್ದಾರೆ. ಪಾಶ್ಚಿಮಾತ್ಯ ದೇಶಗಳಲ್ಲಿನ ವೈಭವಯುತವಾದ ಬದುಕು, ಮೂಲಭೂತ ಸೌಕರ್ಯಗಳು ಇಲ್ಲಿ ಇಲ್ಲದಿರುವುದನ್ನು ಅವರು ಗುರುತಿಸುವುದುಂಟು. ಆದರೆ ಭಾರತದ ಬಹುತೇಕ ರೈತಾಪಿ ವರ್ಗಗಳಿಗೆ ಸೇರಿದ ಜನರಾಗಲಿ ಅಥವಾ 'ಬಡವ' ಎಂದು ಗುರುತಿಸುವ ಜನರಾಗಲಿ ತಮ್ಮನ್ನು ತಾವು ಬಡವರೆಂದುಕೊಳ್ಳುವುದಿಲ್ಲ. ಗಾಂಧೀಜಿಯವರು ಆಗಾಗ್ಗೆ ಮಾತನಾಡಿದ ಸರಳತೆಯನ್ನು, ಸರಳ ಬದುಕನ್ನು ಬಹುತೇಕ ಭಾರತೀಯರಲ್ಲಿ ನಾವು ಕಾಣಬಹುದು. ಲೌಕಿಕತೆಗೆ ಒತ್ತುಕೊಡುವಂತೆ ಅಲೌಕಿಕತೆಗೆ ಕೂಡ ಭಾರತೀಯರಲ್ಲಿ ಗೌರವ ಇರುವುದನ್ನು ಗಮನಿಸಬಹುದಾಗಿದೆ. ಈ ಸನ್ನಿವೇಶದಲ್ಲಿ ಭಾರತದಂತಹ ದೇಶದ ಬಡತನವನ್ನು ಪಾಶ್ಚಾತ್ಯರು ಅಭ್ಯಸಿಸುವುದಕ್ಕಿಂತ ಭಿನ್ನವಾಗಿ ಅಭ್ಯಾಸ ಮಾಡುವುದರಿಂದ ಭಿನ್ನವಾದ ಪರಿಸ್ಥಿತಿಯು ನಮ್ಮ ಮುಂದೆ ಬರುತ್ತದೆ.

ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಶ್ವಬ್ಯಾಂಕು ವ್ಯಕ್ತಿಯೊಬ್ಬ ದಿನವೊಂದಕ್ಕೆ ಅನುಭೋಗಕ್ಕಾಗಿ 1.25 ಡಾಲರಿಗಿಂತ ಕಡಿಮೆ ವೆಚ್ಚ ಮಾಡುವವನು ಬಡತನ ರೇಖೆಯ ಕೆಳಗಿರುವವನು, ಅಂದರೆ ಬಡವ ಎಂದು ಗುರುತಿಸುತ್ತಿದೆ. ಇದರಂತೆ ಸದ್ಯದಲ್ಲಿ ಭಾರತದಲ್ಲಿ ಸುಮಾರು ಶೇ. 41.6 ರಷ್ಟು ಜನರು ಬಡವರಾಗಿದ್ದಾರೆ.

ಭಾರತದಲ್ಲಿ ಯೋಜನಾ ಆಯೋಗವು ಬಡತನ ರೇಖೆಯ ಕೆಳಗಿರುವ ಜನರ ಸಂಖ್ಯೆ ಮತ್ತು ಬಡತನದ ಪ್ರಮಾಣವನ್ನು ಕಾಲಕಾಲಕ್ಕೆ ಅಂದಾಜು ಮಾಡಿ ಪ್ರಕಟಿಸುತ್ತಿದೆ. ಇದು ಪ್ರಕಟಣೆ ಮಾಡಿರುವ ಅಂಕಿಅಂಶಗಳನ್ನು ಮುಂದಿನ ಕಂಬಚಿತ್ರದಲ್ಲಿ ಕೊಡಲಾಗಿದೆ.

**ಭಾರತದಲ್ಲಿ ಬಡತನದ ಪ್ರಮಾಣ (ಶೇಕಡಾವಾರು)**



ಮೇಲಿನ ಕಂಬ ಚಿತ್ರವನ್ನು ಗಮನಿಸಿ. 1973–74 ರಲ್ಲಿ ಭಾರತದಲ್ಲಿದ್ದ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಬಡವರಾಗಿದ್ದರು. ಅವರಲ್ಲಿ ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿದ್ದ ಬಡವರ ಸಂಖ್ಯೆ ಹೆಚ್ಚಾಗಿತ್ತು. ವರ್ಷದಿಂದ ವರ್ಷಕ್ಕೆ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರ ಬಡತನವೂ ಕ್ರಮೇಣ ಕಡಿಮೆಯಾಗಿದೆ. 2004–05 ರಲ್ಲಿ ದೇಶದಲ್ಲಿ ಸುಮಾರು ಶೇ.21.8 ರಷ್ಟು ಬಡತನವಿದ್ದು, ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲೂ ಅದು ಸಮ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಭಾರತದ ಯೋಜನಾ ಆಯೋಗವು ಇತ್ತೀಚೆಗೆ ಬಡತನವನ್ನು ಅಂದಾಜು ಮಾಡಲು ಪ್ರೊ॥ ಸುರೇಶ್ ತೆಂಡೂಲ್ಕರ್‌ರವರ ಮಾದರಿಯನ್ನು ಸ್ವೀಕರಿಸಿದೆ. ಇದರ ಪ್ರಕಾರ 2004–05ರಲ್ಲಿ ಶೇ. 37.2 ರಷ್ಟಿದ್ದ ಬಡತನದ ಪ್ರಮಾಣವು 2009–10ರಲ್ಲಿ ಶೇ. 29.8ಕ್ಕೆ ಇಳಿದಿದೆ.

**ಹಸಿವು ಮತ್ತು ಕ್ಷಾಮ**

ಬಡತನದ ಬಹುಮುಖ್ಯ ಲಕ್ಷಣವೆಂದರೆ ಹಸಿವು ಮತ್ತು ದಾರಿದ್ರ್ಯ. ಬಡತನದ ಕುಟುಂಬಗಳಿಗೆ ಆಹಾರ ಪದಾರ್ಥಗಳು ಸುಲಭವಾಗಿ ಮತ್ತು ಸಮರ್ಪಕವಾಗಿ ದೊರೆಯುತ್ತಿಲ್ಲ. ಅವರಲ್ಲಿ ಅವುಗಳನ್ನು ಕೊಳ್ಳುವ ಶಕ್ತಿಯಿಲ್ಲ. ಹಾಗಾಗಿ ಇವರು ಆಹಾರದ ಅಭದ್ರತೆಯನ್ನು ಎದುರಿಸುತ್ತಿದ್ದಾರೆ. ಬಹುತೇಕ ಬಡಜನರು ಅರೆಹೊಟ್ಟೆ ಮತ್ತು ಹಸಿವಿನಿಂದ ಬದುಕಬೇಕಾದ ಸ್ಥಿತಿಯಿದೆ.

ಇತ್ತೀಚೆಗೆ ವಿಶ್ವದ ಹಸಿವಿನ ಪ್ರಮಾಣವನ್ನು ಅಳೆಯಲು **'ವಿಶ್ವ ಹಸಿವಿನ ಸೂಚಿ'** ಎಂಬ ಮಾನದಂಡವನ್ನು ರೂಪಿಸಲಾಗಿದೆ. ಜನರಲ್ಲಿರುವ ಅಪೌಷ್ಠಿಕತೆಯ ಪ್ರಮಾಣ, ಮಕ್ಕಳಲ್ಲಿನ ಕಡಿಮೆ ತೂಕ ಮತ್ತು ಮಕ್ಕಳ ಮರಣ ಪ್ರಮಾಣ, ಈ ಮೂರು ಅಂಶಗಳನ್ನು ಆಧಾರವಾಗಿಟ್ಟುಕೊಂಡು ಈ ಸೂಚಿಯನ್ನು ರೂಪಿಸಲಾಗಿದೆ. ಇದರ ಪ್ರಕಾರ ವಿಶ್ವದ ಪ್ರತಿ 7 ಜನರಲ್ಲಿ ಒಬ್ಬ ಪ್ರತಿದಿನ ಊಟವಿಲ್ಲದೆ ಹಸಿವಿನಿಂದ ಮಲಗುತ್ತಿದ್ದಾನೆ. 2010 ರ ವಿಶ್ವ ಹಸಿವಿನ ಸೂಚಿಯ ಆಧಾರದ ಮೇಲೆ ತಯಾರಿಸಲಾದ 84 ರಾಷ್ಟ್ರಗಳ ಪಟ್ಟಿಯಲ್ಲಿ ಭಾರತದ ಸ್ಥಾನ 67 ನೆಯದು.

ಇತ್ತೀಚಿನ ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ ಪ್ರಕಾರ ಭಾರತದಲ್ಲಿ ಸುಮಾರು ಶೇ.79 ರಷ್ಟು ಮಕ್ಕಳು ಮತ್ತು ಶೇ.58 ರಷ್ಟು ಗರ್ಭಿಣಿ ಮಹಿಳೆಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ಇಲ್ಲಿನ ಪ್ರತಿ ಇಬ್ಬರು ಮಕ್ಕಳಲ್ಲಿ ಒಂದು ಮಗು ಮತ್ತು ಪ್ರತಿ ಮೂವರು ಮಹಿಳೆಯರಲ್ಲಿ ಒಬ್ಬ ಮಹಿಳೆ ಕಡಿಮೆ ತೂಕ ಹೊಂದಿದ್ದಾರೆ. ವಿಶ್ವದ ಕಡಿಮೆ ತೂಕ ಹೊಂದಿದ ಮಕ್ಕಳಲ್ಲಿ ಶೇ.42 ರಷ್ಟು ಮಕ್ಕಳು ಭಾರತದಲ್ಲಿದ್ದಾರೆ. ರಕ್ತಹೀನತೆ ಮತ್ತು ಕಡಿಮೆ ತೂಕ ಹಸಿವಿನ ಪರಿಣಾಮಗಳಾಗಿವೆ.

ನಾವು ಸ್ವಾತಂತ್ರ್ಯ ಪಡೆದು ಆರು ದಶಕಗಳು ಕಳೆದಿವೆ. ಈ ಅವಧಿಯಲ್ಲಿ ನಾವು ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಬಹುತೇಕ ಸ್ವಾವಲಂಬನೆಯನ್ನು ಸಾಧಿಸಿದ್ದೇವೆ. ಅಂದರೆ ನಮ್ಮ ದೇಶಕ್ಕೆ ಸಾಕಾಗುವಷ್ಟು ಆಹಾರ ಧಾನ್ಯಗಳನ್ನು ನಾವೇ ಉತ್ಪಾದಿಸಿಕೊಳ್ಳುವ ಸಾಮರ್ಥ್ಯ ಪಡೆದಿದ್ದೇವೆ. ಹೈನು ಉತ್ಪಾದನೆಯಲ್ಲಿ ಪ್ರಪಂಚದಲ್ಲಿಯೇ ಮೊದಲನೆಯ ಸ್ಥಾನದಲ್ಲಿದ್ದೇವೆ. ಹಣ್ಣು ಮತ್ತು ತರಕಾರಿಗಳ ಉತ್ಪಾದನೆಯೂ ಅಗಾಧವಾಗಿ ಹೆಚ್ಚಿದೆ. ಆದರೂ ಭಾರತದಲ್ಲಿ ಹೆಚ್ಚಿನ ಜನರು ಹಸಿವಿನಿಂದ ಬಳಲುತ್ತಿರುವುದು ಒಂದು ಬಹುದೊಡ್ಡ ವಿರೋಧಾಭಾಸವಾಗಿದೆ. ಬಡಜನರಲ್ಲಿ ಕೊಳ್ಳುವ ಶಕ್ತಿ ಇಲ್ಲದಿರುವುದು ಹಾಗೂ ಆಹಾರ ಧಾನ್ಯಗಳ ವಿತರಣೆಯಲ್ಲಿನ ದೋಷಗಳು ಈ ರೀತಿಯ ವಿರೋಧಾಭಾಸಕ್ಕೆ ಕಾರಣವಾಗಿವೆ.

ಸಾಮಾನ್ಯವಾಗಿ ಭೂಕಂಪ, ಬರಗಾಲ, ಪ್ರವಾಹ, ಸುನಾಮಿ, ವ್ಯಾಪಕ ಬೆಳೆನಾಶ ಮುಂತಾದ ನೈಸರ್ಗಿಕ ವಿಕೋಪಗಳು ಸಂಭವಿಸಿದಾಗ ಅವುಗಳ ಪರಿಣಾಮ ವ್ಯಾಪಕವಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ಆಹಾರ ಧಾನ್ಯಗಳ ಒಟ್ಟು ಉತ್ಪಾದನೆ ಕುಂಠಿತಗೊಂಡು, ಆಹಾರದ ಕೊರತೆ ಉಂಟಾಗುತ್ತದೆ. ಆಹಾರ ಧಾನ್ಯಗಳ

ಕೊರತೆಯಿಂದಾಗಿ ಅವುಗಳ ಬೆಲೆಗಳು ಅತಿಯಾಗಿ ಹೆಚ್ಚುತ್ತವೆ. ಆಗ ಬಡಜನರಿಗೆ ಹೆಚ್ಚಿನ ಬೆಲೆಕೊಟ್ಟು ಆಹಾರ ಧಾನ್ಯಗಳನ್ನು ಕೊಳ್ಳುವ ಶಕ್ತಿಯಿರುವುದಿಲ್ಲ. ಇದರಿಂದ ವ್ಯಾಪಕವಾಗಿ ಜನರು ಹೊಟ್ಟೆಗಿಲ್ಲದೆ ಹಸಿವಿನಿಂದ ಬಳಲುತ್ತಾರೆ. ಇಂತಹ ಸಾಮೂಹಿಕ ಹಸಿವು ಕ್ರಮೇಣ ಕ್ಷಾಮಕ್ಕೆ ದಾರಿಮಾಡಿಕೊಡುತ್ತದೆ.

ಆಹಾರದ ಕೊರತೆಯಿಂದ ಹೊಟ್ಟೆಗಿಲ್ಲದೆ ಮತ್ತು ಕಲುಷಿತ ನೀರಿನ ಸೇವನೆಯಿಂದ ಉಂಟಾಗುವ ಸೋಂಕಿಗೆ ಒಳಗಾಗಿ ಜನರು ವ್ಯಾಪಕವಾಗಿ ಸಾಯುವುದನ್ನು ಕ್ಷಾಮ ಎಂದು ಕರೆಯಲಾಗುತ್ತಿದೆ. 1943ರಲ್ಲಿ ಭಾರತದ ಬಂಗಾಳ ಪ್ರಾಂತ್ಯದಲ್ಲಿ ಭೀಕರ ಕ್ಷಾಮ ಸಂಭವಿಸಿತ್ತು. ಆಗ ಅಲ್ಲಿ ಸುಮಾರು 60 ಲಕ್ಷ ಜನರು ಕ್ಷಾಮದಿಂದಾಗಿ ಅಸುನೀಗಿದ್ದರು. ಅಲ್ಲಿಂದೀಚೆಗೆ ಅಂತಹ ಭೀಕರ ಕ್ಷಾಮ ಭಾರತದಲ್ಲಿ ಸಂಭವಿಸದಿದ್ದರೂ, ಬಿಹಾರ, ರಾಜಸ್ಥಾನ, ಮಧ್ಯಪ್ರದೇಶ, ಒರಿಸ್ಸಾದಂತಹ ಹಿಂದುಳಿದ ರಾಜ್ಯಗಳ ಕೆಲವು ಪ್ರದೇಶಗಳಲ್ಲಿ ಆಹಾರದ ಕೊರತೆಯಿಂದ ಜನರು ಸಾವಿಗೀಡಾಗುತ್ತಿರುವುದು ಆಗಾಗ್ಗೆ ಮಾಧ್ಯಮಗಳಲ್ಲಿ ವರದಿಯಾಗುತ್ತಿದೆ.

ಇತ್ತೀಚಿನ ವರ್ಷಗಳಲ್ಲಿ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಲಾಗಿದೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಬಲಪಡಿಸಲಾಗಿದೆ. ಅಲ್ಲದೆ ಬಡತನ ನಿವಾರಣಾ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಮೂಲಕ ಜನರ ಕೊಳ್ಳುವ ಶಕ್ತಿಯನ್ನು ಹೆಚ್ಚಿಸಲಾಗಿದೆ. ಹಾಗಾಗಿ ಭಾರತದಲ್ಲಿ ಹಸಿವಿನ ಪ್ರಮಾಣದಲ್ಲಿ ಇಳಿಕೆಯಾಗುತ್ತಿದೆ.



**ಆಹಾರ ಭದ್ರತೆ ಮತ್ತು ಬಡತನ ನಿರ್ಮೂಲನೆ**

ಮಾನವನ ಬದುಕಿಗೆ ಆಹಾರ ಅತ್ಯಂತ ಅವಶ್ಯಕ. ಆದರೆ ಬಡವರಲ್ಲಿ ಆಹಾರದ ಅಭದ್ರತೆಯಿದೆ. ಬಡತನವನ್ನು ನಿರ್ಮೂಲನೆ ಮಾಡಬೇಕಾದರೆ ಮೊದಲು ಬಡವರಿಗೆ ಆಹಾರದ ಭದ್ರತೆಯನ್ನು ಒದಗಿಸುವುದು ಅತಿ ಅಗತ್ಯವಾಗಿದೆ. ಹಾಗಾದರೆ ಆಹಾರ ಭದ್ರತೆ ಎಂದರೇನು ?

**ಆಹಾರ ಭದ್ರತೆ :** ದೇಶದಲ್ಲಿರುವ ಎಲ್ಲ ಜನರಿಗೆ ಸಮರ್ಪಕವಾದ ಆಹಾರವನ್ನು ಸದಾಕಾಲ ದೊರಕಿಸಿಕೊಡುವ ಖಾತರಿ ನೀಡುವ ವ್ಯವಸ್ಥೆಗೆ ಆಹಾರ ಭದ್ರತೆ ಎನ್ನುತ್ತೇವೆ. ಆಹಾರದ ಭದ್ರತೆಯು ಮುಂದಿನ ಮೂರು ಭರವಸೆಗಳನ್ನು ಒದಗಿಸುತ್ತದೆ.

1. ದೇಶದಲ್ಲಿರುವ ಎಲ್ಲ ಜನರಿಗೆ ಸಾಕಾಗುವಷ್ಟು ಆಹಾರ ದೊರಕಿಸುವುದು.
2. ಎಲ್ಲ ಜನರಿಗೂ ಗುಣಮಟ್ಟದ ಆಹಾರವನ್ನು ಕೊಳ್ಳುವ ಸಾಮರ್ಥ್ಯ ಹೆಚ್ಚಿಸುವುದು.
3. ಬಡವರು ಆಹಾರವನ್ನು ಪಡೆಯಲು ಇರುವ ಅಡೆತಡೆಗಳನ್ನು ನಿವಾರಿಸುವುದು.

ಭಾರತದಲ್ಲಿ 70 ರ ದಶಕದ ಪ್ರಾರಂಭದಲ್ಲಿಯೇ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ವೈಜ್ಞಾನಿಕ ಬೇಸಾಯ ಕ್ರಮಗಳನ್ನು ಜಾರಿಗೆ ತರಲಾಯಿತು. ಇದರಿಂದ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಗಣನೀಯ ಹೆಚ್ಚಳವಾಯಿತು. ಇದನ್ನು 'ಹಸಿರು ಕ್ರಾಂತಿ' ಎಂದು ಗುರುತಿಸಲಾಗಿದೆ. ಭಾರತವು ಇಂದು ಹಸಿರು ಕ್ರಾಂತಿಯ ಫಲವಾಗಿ ಆಹಾರದ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಿದೆ.

> ವಿಜ್ಞಾನದ ಕೊಡುಗೆಗಳಾದ ಹೆಚ್ಚು ಇಳುವರಿಯ ಬೀಜ, ಸುಧಾರಿತ ಗೊಬ್ಬರ, ಕ್ರಿಮಿನಾಶಕಗಳು, ಆಧುನಿಕ ಯಂತ್ರೋಪಕರಣಗಳು ಮುಂತಾದುವುಗಳನ್ನು ಬಳಸಿಕೊಂಡು ಮಾಡಲಾಗುವ ಬೇಸಾಯವೇ ವೈಜ್ಞಾನಿಕ ಬೇಸಾಯ.

ದೇಶದಲ್ಲಿ ಉತ್ಪಾನೆಯಾಗುತ್ತಿರುವ ಹೆಚ್ಚುವರಿ ಆಹಾರ ಧಾನ್ಯಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸಲು, ಸಂಗ್ರಹಿಸಿದ ಆಹಾರ ಧಾನ್ಯಗಳನ್ನು ದೇಶದ ಎಲ್ಲ ಭಾಗದ ಮತ್ತು ಎಲ್ಲ ವರ್ಗದ ಜನರಿಗೆ ಸಮರ್ಪಕವಾಗಿ ವಿತರಣೆಮಾಡಲು ಸರ್ಕಾರವು ವ್ಯಾಪಕವಾದ ಆಹಾರ ಭದ್ರತಾ ವ್ಯವಸ್ಥೆಯನ್ನು ಜಾರಿಗೆ ತಂದಿದೆ. ಆಹಾರ ಭದ್ರತಾ ವ್ಯವಸ್ಥೆಯು ಎರಡು ಘಟಕಗಳನ್ನು ಒಳಗೊಂಡಿದೆ. ಅವುಗಳೆಂದರೆ,

1. ಕಾಪು ದಾಸ್ತಾನು

2. ಸಾರ್ವಜನಿಕ ವಿತರಣಾ ವ್ಯವಸ್ಥೆ

**ಕಾಪು ದಾಸ್ತಾನು :** ಸರ್ಕಾರವು ರೈತರಿಂದ ಸುಗ್ಗಿಕಾಲದಲ್ಲಿ ಹೆಚ್ಚುವರಿ ಆಹಾರ ಧಾನ್ಯಗಳನ್ನು ಭಾರತೀಯ ಆಹಾರ ನಿಗಮ (FCI) ದ ಮೂಲಕ ಕೊಂಡು ಸಂಗ್ರಹಿಸುತ್ತದೆ. ಹೀಗೆ ಆಹಾರ ಧಾನ್ಯಗಳನ್ನು ಸಂಗ್ರಹಿಸುವುದಕ್ಕೆ ಕಾಪು ದಾಸ್ತಾನು ಎನ್ನುತ್ತಾರೆ. ಭಾರತೀಯ ಆಹಾರ ನಿಗಮವು ಮುಖ್ಯವಾಗಿ ಭತ್ತ ಮತ್ತು ಗೋಧಿಯನ್ನು ಸಂಗ್ರಹಿಸುತ್ತದೆ. ಇದು ರೈತರಿಂದ ಆಹಾರಧಾನ್ಯಗಳನ್ನು ಪೂರ್ವ ನಿರ್ಧರಿತ ಬೆಲೆಗೆ ಕೊಳ್ಳುತ್ತದೆ. ಇದಕ್ಕೆ ಕನಿಷ್ಠ ಬೆಂಬಲ ಬೆಲೆ ಎನ್ನುತ್ತಾರೆ. ಸರ್ಕಾರವು ಪ್ರತಿವರ್ಷ ಬಿತ್ತನೆಗೆ ಮುಂಚಿತವಾಗಿ ಕೆಲವು ಕೃಷಿ ಉತ್ಪನ್ನಗಳ ಕನಿಷ್ಠ ಬೆಂಬಲ ಬೆಲೆಯನ್ನು ಘೋಷಣೆ ಮಾಡುತ್ತದೆ. ಇದು ಕೃಷಿಕರಿಗೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಪ್ರೇರಕವಾಗಿದೆ. ಕಾಪು ದಾಸ್ತಾನು ಮಾಡುವುದರಿಂದ ನೈಸರ್ಗಿಕ ವಿಕೋಪಗಳಿಂದ ಉಂಟಾಗಬಹುದಾದ ಆಹಾರದ ಕೊರತೆಯನ್ನು ತಪ್ಪಿಸಲು ಸಾಧ್ಯವಾಗಿದೆ.


ಕಾಪು ದಾಸ್ತಾನಿನ ಚಿತ್ರ

**ಸಾರ್ವಜನಿಕ ವಿತರಣಾ ವ್ಯವಸ್ಥೆ :** ಭಾರತೀಯ ಆಹಾರ ನಿಗಮವು ಸಂಗ್ರಹಿಸಿದ ಆಹಾರ ಧಾನ್ಯಗಳನ್ನು ಸರ್ಕಾರ ನಿಯಂತ್ರಿತ ನ್ಯಾಯಬೆಲೆ ಅಂಗಡಿಗಳ ಮೂಲಕ ಸಮಾಜದ ಬಡವರ್ಗಗಳ ಜನರಿಗೆ ಕಡಿಮೆ ಬೆಲೆಯಲ್ಲಿ ವಿತರಿಸುತ್ತಿದೆ. ಇದನ್ನು ಸಾರ್ವಜನಿಕ ವಿತರಣಾ ವ್ಯವಸ್ಥೆ ಎನ್ನುತ್ತಾರೆ. ನ್ಯಾಯ ಬೆಲೆ ಅಂಗಡಿಗಳ ಮೂಲಕ ಆಹಾರ ಧಾನ್ಯಗಳು, ಸಕ್ಕರೆ, ಸೀಮೆಎಣ್ಣೆ, ಅಡುಗೆ ಎಣ್ಣೆ ಮುಂತಾದ ಅವಶ್ಯಕ ಸಾಮಗ್ರಿಗಳನ್ನು ವಿತರಿಸಲಾಗುತ್ತದೆ. ಈ ಸರಕುಗಳನ್ನು ಮಾರುಕಟ್ಟೆ ಬೆಲೆಗಿಂತ ಅತ್ಯಂತ ಕಡಿಮೆ ಬೆಲೆಗೆ ಮಾರಾಟಮಾಡಲಾಗುತ್ತದೆ. ಸರ್ಕಾರವು ಬಹುತೇಕ ಎಲ್ಲ ನಗರ, ಪಟ್ಟಣ ಮತ್ತು ಹಳ್ಳಿಗಳಲ್ಲಿ ನ್ಯಾಯ ಬೆಲೆ ಅಂಗಡಿಗಳನ್ನು ತೆರೆಯಲು ಅವಕಾಶ ಮಾಡಿಕೊಟ್ಟಿದೆ. ದೇಶದಲ್ಲಿಂದು ಸುಮಾರು 4.7 ಲಕ್ಷ ನ್ಯಾಯಬೆಲೆ ಅಂಗಡಿಗಳಿದ್ದು, ಸುಮಾರು 16 ಕೋಟಿ ಕುಟುಂಬಗಳು ಇದರ ಸೌಲಭ್ಯ ಪಡೆಯುತ್ತಿವೆ.

ಸರ್ಕಾರವು ಬಡ ಕುಟುಂಬಗಳನ್ನು ಗುರುತಿಸಿ, ಅವುಗಳಿಗೆ ಬಡತನ ರೇಖೆಗಿಂತ ಕೆಳಗಿನ (BPL) ಪಡಿತರ ಚೀಟಿಗಳನ್ನು ವಿತರಿಸಿದೆ. ಪಡಿತರ ಚೀಟಿ ಹೊಂದಿರುವ ಕುಟುಂಬಕ್ಕೆ ಪ್ರತಿ ತಿಂಗಳು ನಿಗದಿತ ಪ್ರಮಾಣದ ಆಹಾರ ಧಾನ್ಯಗಳನ್ನು ವಿತರಿಸಲಾಗುವುದು.

ಆಹಾರ ಭದ್ರತಾ ವ್ಯವಸ್ಥೆಯ ಅಡಿಯಲ್ಲಿ ಸರ್ಕಾರವು ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆ(ICDS) ಯನ್ನು ಜಾರಿಗೆ ತಂದಿದೆ. ಈ ಯೋಜನೆಯ ಮೂಲಕ ಮಕ್ಕಳಲ್ಲಿನ ಅಪೌಷ್ಠಿಕತೆಯನ್ನು ಹೋಗಲಾಡಿಸಲು ಕ್ರಮ ಕೈಗೊಳ್ಳಲಾಗಿದೆ. ಶಾಲೆಗಳಲ್ಲಿ ಮಧ್ಯಾಹ್ನದ ಬಿಸಿ ಊಟ ಯೋಜನೆಯನ್ನು ಜಾರಿಗೆ ತಂದು, ಓದುತ್ತಿರುವ ಎಲ್ಲ ಮಕ್ಕಳಿಗೆ ದಿನದಲ್ಲಿ ಹೊಟ್ಟೆತುಂಬ ಕನಿಷ್ಠ ಒಂದು ಊಟವನ್ನಾದರೂ ಒದಗಿಸಲು ಕ್ರಮ ಕೈಗೊಳ್ಳಲಾಗಿದೆ. ಅತ್ಯಂತ ಬಡ ಕುಟುಂಬಗಳನ್ನು ಗುರುತಿಸಿ, ಅವರಿಗೆ ಅಂತ್ಯೋದಯ ಅನ್ನ ಯೋಜನೆಯ ಅಡಿಯಲ್ಲಿ ಅತ್ಯಂತ ಕಡಿಮೆ ಬೆಲೆಯಲ್ಲಿ ಆಹಾರ ಧಾನ್ಯಗಳನ್ನು ವಿತರಿಸಲಾಗುತ್ತಿದೆ. ಹೀಗೆ ಸರ್ಕಾರವು ಬಡವರಲ್ಲಿನ ಹಸಿವು ಮತ್ತು ಅಪೌಷ್ಠಿಕತೆಯನ್ನು ಹೋಗಲಾಡಿಸಲು ಹಲವು ರೀತಿಯ ಪ್ರಯತ್ನಗಳನ್ನು ಮಾಡುತ್ತಿದೆ.

### ಬಡತನ ನಿರ್ಮೂಲನೆ

ಸರ್ಕಾರವು ಬಡಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿ, ಅವರ ಕೊಳ್ಳುವ ಶಕ್ತಿಯನ್ನು ಹೆಚ್ಚಿಸಲು ಆ ಮೂಲಕ ಬಡತನವನ್ನು ನಿರ್ಮೂಲನೆ ಮಾಡಲು ಹಲವಾರು ಕ್ರಮಗಳನ್ನು ಜಾರಿಗೊಳಿಸಿದೆ. ಸರ್ಕಾರದ ಈ ಕ್ರಮಗಳನ್ನು ಮುಖ್ಯವಾಗಿ ನಾಲ್ಕು ಗುಂಪುಗಳನ್ನಾಗಿ ವರ್ಗೀಕರಿಸಬಹುದಾಗಿದೆ. ಅವುಗಳೆಂದರೆ,


**ಡಾ॥ ಅಮಾರ್ತ್ಯಸೇನ್**

**1. ಆರ್ಥಿಕ ಅಭಿವೃದ್ಧಿ ಕ್ರಮಗಳು :** ಆರ್ಥಿಕ ಅಭಿವೃದ್ಧಿ ಮತ್ತು ಬಡತನದ ನಡುವೆ ಸಂಬಂಧವಿದೆ. ದೇಶವು ಆರ್ಥಿಕವಾಗಿ ಅಭಿವೃದ್ಧಿಯನ್ನು ಸಾಧಿಸಿದಂತೆ ಬಡತನದ ಪ್ರಮಾಣವು ಕಡಿಮೆಯಾಗುತ್ತದೆ. ಸರ್ಕಾರವು ಪಂಚವಾರ್ಷಿಕ ಯೋಜನೆಗಳ ಮೂಲಕ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಪ್ರಯತ್ನಿಸುತ್ತಿದೆ. ಜೊತೆಗೆ ಅಭಿವೃದ್ಧಿಯ ಫಲ ಎಲ್ಲ ವರ್ಗದ ಜನರಿಗೆ ದೊರಕುವಂತೆ ನೋಡಿಕೊಳ್ಳುತ್ತಿದೆ.

**2. ನಿರ್ದಿಷ್ಠ ಬಡತನ ನಿರ್ಮೂಲನ ಕಾರ್ಯಕ್ರಮಗಳ ಜಾರಿ :** ಸರ್ಕಾರವು 60 ರ ದಶಕದಿಂದೀಚೆಗೆ ಗ್ರಾಮೀಣ ಭಾಗದಲ್ಲಿನ ಜನಸಮುದಾಯಕ್ಕೆ ಅಗತ್ಯವಾಗಿರುವ ಉದ್ಯೋಗಾವಕಾಶಗಳನ್ನು ಒದಗಿಸಿಕೊಡಲು ಹಲವಾರು ಉದ್ಯೋಗ ನಿರ್ಮಾಣ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಅವುಗಳನ್ನು ಮುಖ್ಯವಾಗಿ ಎರಡು ಗುಂಪುಗಳನ್ನಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ,

1998ರ ನೊಬೆಲ್ ಪ್ರಶಸ್ತಿ ಪಡೆದ ಭಾರತೀಯ ಅರ್ಥಶಾಸ್ತ್ರಜ್ಞರಾದ ಡಾ॥ ಅಮಾರ್ತ್ಯಸೇನ್‌ರವರು, ಒಂದು ದೇಶದಲ್ಲಿನ ಎಲ್ಲ ಜನರಿಗೆ ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳನ್ನು ಒದಗಿಸುವ ಮೂಲಕ ಅಲ್ಲಿನ ಬಡತನವನ್ನು ಹೋಗಲಾಡಿಸಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.

● **ಸ್ವ-ಉದ್ಯೋಗ ಕಾರ್ಯಕ್ರಮಗಳು :** ದೇಶದಲ್ಲಿರುವ ಬಡಜನರು ಮತ್ತು ವಿದ್ಯಾವಂತ ನಿರುದ್ಯೋಗಿಗಳನ್ನು ಗುರುತಿಸಿ, ಅವರಿಗೆ ಅಗತ್ಯವಿರುವ ಸಾಲವನ್ನು ಒದಗಿಸಿ, ಸ್ವಂತ ಉದ್ಯೋಗವನ್ನು ಕೈಗೊಳ್ಳುವಂತೆ ಮಾಡಲು ಹಲವಾರು ಸ್ವ ಉದ್ಯೋಗ ಯೋಜನೆಗಳನ್ನು ಜಾರಿಗೆ ತರಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ,

1. 1980 ರಲ್ಲಿ ಜಾರಿಗೆ ತಂದ 'ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ' (IRDP)

2. 1999 ರಲ್ಲಿ ಜಾರಿಯಾಗಿರುವ 'ಸ್ವರ್ಣಜಯಂತಿ ಗ್ರಾಮ ಸ್ವ–ಉದ್ಯೋಗ ಯೋಜನೆ'(SGSY)

● **ಕೂಲಿ ಉದ್ಯೋಗ ಕಾರ್ಯಕ್ರಮಗಳು** : ಸ್ವಂತ ಆಸ್ತಿಯಿಲ್ಲದ ಹಾಗೂ ಕೌಶಲ್ಯ ರಹಿತ ಬಡಜನರಿಗೆ ದಿನಗೂಲಿ ಆಧಾರದ ಉದ್ಯೋಗ ಒದಗಿಸಲು ಹಲವಾರು 'ಕೂಲಿ ಉದ್ಯೋಗ ಕಾರ್ಯಕ್ರಮ'ಗಳನ್ನು ಜಾರಿಗೆ ತರಲಾಗಿದೆ. ಗ್ರಾಮೀಣ ಭಾಗದಲ್ಲಿ ಕೆರೆ–ಕಟ್ಟೆಗಳು, ರಸ್ತೆ, ಶಾಲೆ, ಆಸ್ಪತ್ರೆ ಮುಂತಾದ ಸಮುದಾಯದ ಆಸ್ತಿಗಳನ್ನು ನಿರ್ಮಿಸುವ ಮೂಲಕ ಇವರಿಗೆ ಕೂಲಿ ಉದ್ಯೋಗ ಒದಗಿಸಿಕೊಡಲಾಗುತ್ತದೆ.

2006 ರಲ್ಲಿ **'ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ'**(MGNREGP) ವನ್ನು ಜಾರಿಗೆ ತರಲಾಗಿದೆ. ಇದು ಸದ್ಯದಲ್ಲಿ ಜಾರಿಯಲ್ಲಿರುವ ಅತಿ ಮಹತ್ವಾಕಾಂಕ್ಷಿ ಕೂಲಿ ಉದ್ಯೋಗ ಕಾರ್ಯಕ್ರಮ ವಾಗಿದೆ. ಈ ಕಾರ್ಯಕ್ರಮದಲ್ಲಿ ಪ್ರತಿ ಬಡಕುಟುಂಬದ ಇಚ್ಛೆಯುಳ್ಳ ಕೆಲಸಗಾರರಿಗೆ ವರ್ಷದಲ್ಲಿ ಕನಿಷ್ಠ 100 ದಿನಗಳ ದಿನಗೂಲಿ ಕೆಲಸವನ್ನು ಒದಗಿಸುವ ಮೂಲಕ ಅವರ ಜೀವನಕ್ಕೆ ಭದ್ರತೆಯನ್ನು ಒದಗಿಸುತ್ತಿದೆ. ಬಡವರಾಗಿದ್ದು, ಕನಿಷ್ಠ ಕೂಲಿಗೆ ಕೆಲಸಮಾಡಲು ಸಿದ್ಧರಿರುವವರು ಈ ಯೋಜನೆಯಡಿಯಲ್ಲಿ ತಮ್ಮ ಗ್ರಾಮ ಪಂಚಾಯ್ತಿಗಳಲ್ಲಿ ಹೆಸರು ನೊಂದಾಯಿಸಬಹುದು. ನೊಂದಾಯಿತ ಉದ್ಯೋಗಾಕಾಂಕ್ಷಿಗಳಿಗೆ 15 ದಿನಗಳಲ್ಲಿ ಉದ್ಯೋಗ ಒದಗಿಸಲಾಗದಿದ್ದರೆ, ಅವರಿಗೆ ಸರ್ಕಾರ ನಿಗದಿಪಡಿಸಿರುವ ದಿನದ ನಿರುದ್ಯೋಗ ಭತ್ಯೆಯನ್ನು ನೀಡಲಾಗುವುದು.



**3. ಕನಿಷ್ಠ ಮೂಲ ಅವಶ್ಯಕತೆಗಳ ಪೂರೈಕೆ :** ಗ್ರಾಮೀಣ ಭಾಗದ ಬಡ ಜನರಿಗೆ ಅಗತ್ಯವಿರುವ ಆಹಾರ, ವಸತಿ, ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ನೈರ್ಮಲ್ಯ ಮುಂತಾದ ಕನಿಷ್ಠ ಮೂಲ ಸೌಲಭ್ಯಗಳನ್ನು ಒದಗಿಸಿ, ಅವರ ಜೀವನದ ಗುಣಮಟ್ಟವನ್ನು ಹೆಚ್ಚಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ನ್ಯಾಯ ಬೆಲೆ ಅಂಗಡಿಗಳ ಮೂಲಕ ಬಡಜನರಿಗೆ ಕಡಿಮೆ ಬೆಲೆಯಲ್ಲಿ ಆಹಾರ ಧಾನ್ಯಗಳನ್ನು ವಿತರಿಸಲಾಗುತ್ತಿದೆ. 'ಯಶಸ್ವಿನಿ ಯೋಜನೆ'ಯ ಅಡಿಯಲ್ಲಿ ಬಡಜನರಿಗೆ ಆರೋಗ್ಯ ವಿಮಾ ಸೌಲಭ್ಯ ಒದಗಿಸಲಾಗುತ್ತಿದೆ. 'ಇಂದಿರಾ ಆವಾಜ್ ಯೋಜನೆ' ಮತ್ತು 'ವಾಲ್ಮೀಕಿ–ಅಂಬೇಡ್ಕರ್ ಆವಾಜ್ ಯೋಜನೆ' ಮೂಲಕ ಮನೆಯಿಲ್ಲದ ಬಡಜನರಿಗೆ ಮನೆಗಳನ್ನು ನಿರ್ಮಿಸಿಕೊಡಲಾಗುತ್ತಿದೆ. 'ನಿರ್ಮಲ ಗ್ರಾಮ' ಯೋಜನೆಯ ಅಡಿಯಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಡಲಾಗುತ್ತಿದೆ. **2000** ರಲ್ಲಿ 'ಪ್ರಧಾನ ಮಂತ್ರಿ ಗ್ರಾಮೋದಯ ಯೋಜನೆ'(PMGY)ಯನ್ನು ಜಾರಿಗೆ ತರಲಾಗಿದೆ. ಈ ಯೋಜನೆಯ ಅಡಿಯಲ್ಲಿ ಗ್ರಾಮೀಣ ಬಡಜನರಿಗೆ ಪ್ರಾಥಮಿಕ ಶಿಕ್ಷಣ, ಪ್ರಾಥಮಿಕ ಆರೋಗ್ಯ, ವಸತಿ, ಕುಡಿಯುವ ನೀರು, ಗ್ರಾಮೀಣ ವಿದ್ಯುದೀಕರಣ ಮುಂತಾದ ಸೇವೆಗಳನ್ನು ಒದಗಿಸಲಾಗುತ್ತಿದೆ.

**4. ಸಾಮಾಜಿಕ ಭದ್ರತಾ ಕ್ರಮಗಳು :** ಸಮಾಜದ ಅತಿ ಬಡಕುಟುಂಬಗಳ ಅಸಹಾಯಕರು, ವಯಸ್ಸಾದವರು, ಅಂಗವಿಕಲರು ಮುಂತಾದವರಿಗೆ ಸರ್ಕಾರ ಒದಗಿಸುವ ರಕ್ಷಣೆಗೆ ಸಾಮಾಜಿಕ ಭದ್ರತೆ ಎನ್ನುತ್ತೇವೆ. ಅನಾಥರಾದ ಮುದುಕರಿಗೆ 'ಸಂಧ್ಯಾ ಸುರಕ್ಷಾ ಯೋಜನೆ' ಯ ಮೂಲಕ ಪ್ರತಿ ತಿಂಗಳು

ವೃದ್ಧಾಪ್ಯ ವೇತನ ನೀಡಲಾಗುತ್ತಿದೆ. ದುಡಿಯಲು ಅಸಮರ್ಥರಾದ ಅಂಗವಿಕಲರು ಮತ್ತು ಅಶಕ್ತರಿಗೆ ಅಶಕ್ತ ಮಾಶಾಸನ ನೀಡಲಾಗುತ್ತಿದೆ. ಬಡ ವಿಧವೆಯರಿಗೆ ವಿಧವಾ ಮಾಶಾಸನ ನೀಡಲಾಗುತ್ತಿದೆ.

ಹೀಗೆ ಸರ್ಕಾರವು ಹಲವಾರು ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಮೂಲಕ ಬಡಜನರನ್ನು ಬಡತನ ರೇಖೆಯ ಮೇಲೆತ್ತಲು ಪ್ರಯತ್ನಿಸುತ್ತಿದೆ. ಇದರ ಪರಿಣಾಮವಾಗಿ ಬಡತನದ ಪ್ರಮಾಣ ಕ್ರಮೇಣ ಕಡಿಮೆಯಾಗುತ್ತಿದೆ. ಸರ್ಕಾರವು ಇಷ್ಟೆಲ್ಲಾ ಸೌಲಭ್ಯಗಳನ್ನು ಒದಗಿಸಿದಾಗಲೂ ಬಡತನದಲ್ಲಿ ಬಳಲುವುದು ಪಾಪವಲ್ಲವೆ.?

## ಅಭ್ಯಾಸಗಳು

**I ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟಿರುವ ಜಾಗಗಳನ್ನು ಭರ್ತಿ ಮಾಡಿರಿ.**

1 ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಘಟನೆ (NSSO) ಯ ಪ್ರಕಾರ 2004–05 ರಲ್ಲಿ ಭಾರತದಲ್ಲಿ ಶೇ __________ ಭಾಗದಷ್ಟು ಬಡಜನರಿದ್ದರು.

2 ಭಾರತದಲ್ಲಿ ಬಡಜನರನ್ನು ಗುರುತಿಸುವುದಕ್ಕಾಗಿ ಮೊಟ್ಟಮೊದಲ ಬಾರಿಗೆ ಬಡತನ ರೇಖೆಯನ್ನು ಬಳಕೆಗೆ ತಂದವರು __________

3 ಭಾರತ ಸರ್ಕಾರವು ಆಹಾರ ಧಾನ್ಯಗಳನ್ನು ಕೊಂಡು ಸಂಗ್ರಹಿಸಲು __________ ಸಂಸ್ಥೆಯನ್ನು ಸ್ಥಾಪಿಸಿದೆ.

4 ಬಡಜನರಿಗೆ ಒದಗಿಸಲಾಗಿರುವ ಆರೋಗ್ಯ ವಿಮೆಗೆ __________ ಎಂದು ಹೆಸರಿಸಲಾಗಿದೆ.

5 ವೃದ್ಧಾಪ್ಯ ವೇತನಕ್ಕಾಗಿ ಜಾರಿಗೊಂಡಿರುವ ಯೋಜನೆಯ ಹೆಸರು __________ .

6 ಸರ್ಕಾರವು ಬಿತ್ತನೆ ಪೂರ್ವದಲ್ಲಿ ಆಹಾರ ಧಾನ್ಯಗಳ ಕನಿಷ್ಠ ಬೆಲೆಯನ್ನು ನಿರ್ಧರಿಸುತ್ತದೆ. ಇದಕ್ಕೆ __________ ಎಂದು ಕರೆಯಲಾಗುತ್ತದೆ.

**II ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

1 ಬಡತನದ ಅರ್ಥ ತಿಳಿಸಿ.

2 ಮಾನವನ ಕನಿಷ್ಠ ಮೂಲಭೂತ ಅವಶ್ಯಕತೆಗಳಾವುವು ?

3 ಬಡತನ ರೇಖೆ ಎಂದರೇನು ?

4 ಹಸಿವಿನ ಪ್ರಮಾಣವನ್ನು ಅಳೆಯಲು ರೂಪಿಸಲಾಗಿರುವ ಸೂಚಕ ಯಾವುದು ?

5 ಆಹಾರ ಭದ್ರತೆಯ ಅರ್ಥ ತಿಳಿಸಿ.

6 ಕಾಪು ದಾಸ್ತಾನು ಎಂದರೇನು ?

## III ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿ.

1 ಭಾರತದಲ್ಲಿ ಬಡತನವನ್ನು ಹೇಗೆ ಗುರುತಿಸಲಾಗುತ್ತಿದೆ ?

2 ಬಡತನದ ಸೂಚಕಗಳಾವುವು ?

3 ಭಾರತವು ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಿದ್ದರೂ, ಹಸಿವು ಮತ್ತು ಕ್ಷಾಮವನ್ನು ಹೋಗಲಾಡಿಸಲಾಗಿಲ್ಲ. ಏಕೆ ?

4 ಭಾರತದಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಕಾರ್ಯನಿರ್ವಹಣೆಯನ್ನು ತಿಳಿಸಿರಿ.

5 ಬಡತನ ನಿರ್ಮೂಲನೆಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳನ್ನು ಪಟ್ಟಿ ಮಾಡಿರಿ.

6. ಬಡಜನರಿಗೆ ಒದಗಿಸಲಾಗುತ್ತಿರುವ ಸಾಮಾಜಿಕ ಭದ್ರತಾ ಕ್ರಮಗಳನ್ನು ತಿಳಿಸಿ.

7. ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಕಾರ್ಯಕ್ರಮವು ಗ್ರಾಮೀಣ ಬಡತನ ಹೋಗಲಾಡಿಸುವಲ್ಲಿ ಹೇಗೆ ಸಹಾಯಕವಾಗಿದೆ ?

## IV ಚಟುವಟಿಕೆಗಳು.

1. ಹಾದಿ ಬದಿಯ ಖಾಲಿ ಜಾಗಗಳಲ್ಲಿ ತಾತ್ಕಾಲಿಕ ಟೆಂಟುಗಳನ್ನು ನಿರ್ಮಿಸಿಕೊಂಡು ಬದುಕುವ ಅಲೆಮಾರಿ ಜನರನ್ನು ಗಮನಿಸಿ. ಅವರ ಊಟ, ವಸತಿ, ಅವರ ಮಕ್ಕಳ ಶಿಕ್ಷಣದ ಬಗ್ಗೆ ಚರ್ಚಿಸಿ.

2. ನಗರ/ಪಟ್ಟಣಗಳಲ್ಲಿರುವ ಕೊಳಗೇರಿಗಳಿಗೆ ಭೇಟಿ ನೀಡಿರಿ. ಅವರಿಗೆ ದೊರೆಯುತ್ತಿರುವ ನಾಗರಿಕ ಸೌಲಭ್ಯಗಳನ್ನು ಪಟ್ಟಿಮಾಡಿರಿ. ಅವರ ಸ್ಥಿತಿಗತಿ ಸುಧಾರಿಸಲು ನೀವು ಸೂಚಿಸಬಹುದಾದ ಸಲಹೆಗಳೇನು?

3. ನಿಮ್ಮ ಹತ್ತಿರದ ಗ್ರಾಮ ಪಂಚಾಯ್ತಿಗೆ ಭೇಟಿನೀಡಿ, ಬಡವರನ್ನು ಹೇಗೆ ಗುರುತಿಸಲಾಗುತ್ತಿದೆ ಎಂಬುದನ್ನು ತಿಳಿಯಿರಿ.

## V ಯೋಜಿತ ಕಾರ್ಯ (Project Work).

ನಿಮ್ಮ ಗ್ರಾಮದಲ್ಲಿರುವ ನ್ಯಾಯಬೆಲೆ ಅಂಗಡಿಗೆ ಭೇಟಿ ನೀಡಿರಿ. ಅಲ್ಲಿ ಈ ಕೆಳಕಂಡ ಅಂಶಗಳ ಬಗ್ಗೆ ಮಾಹಿತಿ ಸಂಗ್ರಹಿಸಿರಿ.

1. ಯಾವ ಯಾವ ಸರಕುಗಳನ್ನು ವಿತರಿಸುತ್ತಾರೆ?

2. ಯಾವ ಬೆಲೆಯಲ್ಲಿ ವಿತರಿಸುತ್ತಾರೆ ? ಅಲ್ಲಿನ ಬೆಲೆಗೂ ಮತ್ತು ದಿನಸಿ ಅಂಗಡಿಯಲ್ಲಿ ಮಾರುವ ಅದೇ ಸರಕಿನ ಬೆಲೆಗೂ ಎಷ್ಟು ವ್ಯತ್ಯಾಸವಿದೆ ?

3. ಎಷ್ಟು ಕುಟುಂಬಗಳಿಗೆ ಇಲ್ಲಿಂದ ಸರಕುಗಳನ್ನು ವಿತರಿಸುತ್ತಾರೆ.

# ವ್ಯವಹಾರ ಅಧ್ಯಯನ

## ಅಧ್ಯಾಯ–1

# ವಾಣಿಜ್ಯದ ವಿಕಸನ ಮತ್ತು ಬೆಳವಣಿಗೆ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ವ್ಯವಹಾರ ಅಧ್ಯಯನದ ಮೂಲಭೂತ ಅಂಶಗಳಾದ ಆರ್ಥಿಕ ಚಟುವಟಿಕೆಗಳು ಮತ್ತು ಅವುಗಳ ವಿಧಗಳ ಬಗ್ಗೆ ತಿಳಿದುಕೊಳ್ಳುವುದು.
- ವ್ಯವಹಾರದ ವಿಕಸನವು ಬೆಳೆದುಬಂದ ಹಂತಗಳನ್ನು ತಿಳಿದುಕೊಳ್ಳುವುದು.
- ಆರ್ಥಿಕ ಬೆಳವಣಿಗೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಪಾತ್ರ ಮತ್ತು ಪ್ರಾಮುಖ್ಯತೆ ಬಗ್ಗೆ ತಿಳಿಯುವುದು.
- ಇಪ್ಪತ್ತೊಂದನೇ ಶತಮಾನದಲ್ಲಿ ವಾಣಿಜ್ಯದ ಬೆಳವಣಿಗೆಯಾಗುತ್ತಿರುವುದನ್ನು ತಿಳಿಯುವುದು.

ಸಮಾಜ ವಿಜ್ಞಾನದ ಈ ಭಾಗದಲ್ಲಿ ವ್ಯವಹಾರ ಅಧ್ಯಯನದ ಕೆಲವು ಮೂಲ ವಿಷಯಗಳನ್ನು ತಿಳಿಯೋಣ. ಆರ್ಥಿಕ ಚಟುವಟಿಕೆಗಳು ವ್ಯವಹಾರ ಅಧ್ಯಯನಕ್ಕೆ ಮೂಲಭೂತ ಅಂಶಗಳಾಗಿವೆ. ಮುಂದಿನ ಅಧ್ಯಾಯಗಳಲ್ಲಿ ಆರ್ಥಿಕ ಚಟುವಟಿಕೆಗಳು ಮತ್ತು ಅವಕ್ಕೆ ಸಂಬಂಧಪಟ್ಟ ವ್ಯವಹಾರ ಅಧ್ಯಯನದ ಕೆಲವು ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿದುಕೊಳ್ಳೋಣ.

**ಆರ್ಥಿಕ ಚಟುವಟಿಕೆಗಳು:** ಮಾನವನಿಗೆ ಅನೇಕ ಬಯಕೆಗಳಿರುತ್ತವೆ. ಇವನ್ನು ಪೂರೈಸಿಕೊಳ್ಳಲು ಅನೇಕ ವಸ್ತುಗಳ ಮತ್ತು ಸೇವೆಗಳ ಅವಶ್ಯಕತೆ ಇದೆ. ವ್ಯವಸಾಯ ಮತ್ತು ಕೈಗಾರಿಕೆಗಳಿಂದ ವಸ್ತುಗಳ ಉತ್ಪಾದನೆಯಾಗುತ್ತದೆ. ಈ ವಸ್ತುಗಳ ವಿತರಣೆಯಾಗಬೇಕಾದರೆ ಉತ್ಪಾದನಾ ಘಟಕಗಳಿಗೆ ಹಾಗೂ ಗ್ರಾಹಕರಿಗೆ ಅನೇಕ ಸೇವೆಗಳು ಕೂಡ ಅವಶ್ಯವಾಗಿವೆ. ವಸ್ತುಗಳ ಉತ್ಪಾದನೆ, ಅವುಗಳ ವಿತರಣೆ ಹಾಗೂ ಸೇವೆಗಳನ್ನು ಒದಗಿಸುವ ಚಟುವಟಿಕೆಗಳನ್ನು ಆರ್ಥಿಕ ಚಟುವಟಿಕೆಗಳೆನ್ನುತ್ತೇವೆ.

ಆರ್ಥಿಕ ಚಟುವಟಿಕೆಗಳನ್ನು ಮೂರು ವಿಧಗಳಾಗಿ ವಿಂಗಡಿಸಬಹುದು. ಯಾವುವೆಂದರೆ,

1. ವ್ಯವಹಾರ 2. ವೃತ್ತಿ 3. ಉದ್ಯೋಗ

1. ವ್ಯವಹಾರವು ಮುಖ್ಯವಾಗಿ ಸರಕು ಮತ್ತು ಸೇವೆಗಳ ಉತ್ಪಾದನೆ ಮತ್ತು ಅವುಗಳನ್ನು ಗ್ರಾಹಕರಿಗೆ ಒದಗಿಸುವ ಚಟುವಟಿಕೆಯಾಗಿದೆ. ಉದಾ: ಅಂಗಡಿಗಳು
2. ವೃತ್ತಿಯು ಮುಖ್ಯವಾಗಿ ವಿಶಿಷ್ಟವಾದ ತಾಂತ್ರಿಕ ಹಾಗೂ ತಜ್ಞ ಪರಿಣಿತ ಸೇವೆಗಳನ್ನು ಸಲ್ಲಿಸುವ ಚಟುವಟಿಕೆಯಾಗಿದೆ. ಉದಾ: ವಕೀಲರು, ಲೆಕ್ಕಪರಿಶೋಧಕರು, ವೈದ್ಯರು, ಆಡಳಿತ ಸಲಹೆಗಾರರು, ಇತ್ಯಾದಿ.
3. ಉದ್ಯೋಗ ಅಥವಾ ಸೇವೆಗಳು ವೇತನ ಅಥವಾ ಕೂಲಿಯ ಪ್ರತಿಫಲಕ್ಕಾಗಿ ಉದ್ಯೋಗದಾತನು ವಹಿಸುವ ಕಾರ್ಯವನ್ನು ಉದ್ಯೋಗಿಯು ನಿರ್ವಹಿಸುವ ಚಟುವಟಿಕೆಯಾಗಿದೆ. ಉದಾ: ಬೇಸಾಯ ಕಾರ್ಮಿಕರು, ಕೈಗಾರಿಕಾ ಕಾರ್ಮಿಕರು.

ಉದ್ಯೋಗದಾತನನ್ನು ಉದ್ಯಮಪತಿ ಅಥವಾ ಯಜಮಾನನೆಂದೂ ಕರೆಯುತ್ತಾರೆ. ಇವನು ವೇತನ ಅಥವಾ ಕೂಲಿ ಕೊಟ್ಟು ಕೆಲಸ ಮಾಡಿಸಿಕೊಳ್ಳುವವನು. ಉದ್ಯೋಗಿ ಎಂದರೆ ಉದ್ಯೋಗದಾತ ಹೇಳಿದ ಕೆಲಸವನ್ನು ವೇತನಕ್ಕಾಗಿ ಮಾಡುವವನು. ಇವನನ್ನು ನೌಕರನೆಂದು ಕರೆಯುತ್ತಾರೆ.

**ವಿನಿಮಯ:** ವಸ್ತುಗಳು ಮತ್ತು ಸೇವೆಗಳು ಗ್ರಾಹಕರಿಗೆ ವಿತರಣೆಯಾಗುವುದಕ್ಕೆ ವಿನಿಮಯ ಎನ್ನುತ್ತೇವೆ. ವಿನಿಮಯವು ಉತ್ಪಾದನೆ ಮತ್ತು ಬಳಕೆಗಳ ಮಧ್ಯೆ ಒಂದು ಕೊಂಡಿಯಾಗಿದೆ. ಯಾವುದೋ ಜಾಗದಲ್ಲಿ ಉತ್ಪಾದನೆಯಾಗುವ ವಸ್ತುಗಳು ಮತ್ತಾವುದೋ ಜಾಗದಲ್ಲಿ ಬಳಕೆಯಾಗಲು ಹೋಗಿ ಸೇರಬೇಕು. ವಸ್ತುಗಳ ಉತ್ಪಾದನೆಯ ಪ್ರಕ್ರಿಯೆಯಲ್ಲಿ ಉತ್ಪಾದಕರು ಮಾರುಕಟ್ಟೆ ಪರಿಶೀಲನೆ, ಸಾಗಾಣಿಕೆ, ಬೆಲೆಯ ನಿರ್ಧಾರ, ವಸ್ತುಗಳ ಸಂಗ್ರಹಣೆ, ವಸ್ತುಗಳ ಬಗ್ಗೆ ಜಾಹೀರಾತು, ಹಣಕಾಸಿನ ಸೌಲಭ್ಯಗಳು ಮುಂತಾದುವನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ. ಈ ಎಲ್ಲ ಅಂಶಗಳು ವಸ್ತುಗಳ ವಿನಿಮಯ ಚಟುವಟಿಕೆಯಲ್ಲಿ ಅಡಕವಾಗಿವೆ. ಈಗ ವಸ್ತುಗಳ ವಿನಿಮಯ ಸುಲಭವಾಗಿದೆ. ಯಾವುದೇ ವಸ್ತುವನ್ನು ಬೇಕಾದರೂ ಹಣಕ್ಕೆ ವಿನಿಮಯ ಮಾಡಿಕೊಳ್ಳಬಹುದು. ಈ ವಿನಿಮಯ ಪದ್ಧತಿಯೇ ವ್ಯಾಪಾರಕ್ಕೆ ನಾಂದಿಯಾಯಿತೆಂದು ಹೇಳಬಹುದು.

ಬಳಕೆಯನ್ನು ಅನುಭೋಗವೆಂದೂ ಕರೆಯುತ್ತಾರೆ. ಅನುಭೋಗವೆಂದರೆ ವಸ್ತುಗಳನ್ನು ಉಪಯೋಗಿಸುವ ಮತ್ತು ಸೇವೆಗಳನ್ನು ಪಡೆಯುವ ಒಂದು ಕಲೆಯಾಗಿದೆ. ಅನುಭೋಗಿಸುವ ವ್ಯಕ್ತಿಯನ್ನು ಅನುಭೋಗಿ ಅಥವಾ ಗ್ರಾಹಕನೆಂದು ಕರೆಯುತ್ತಾರೆ.

**ವ್ಯವಹಾರದ ವಿಕಸನ ಮತ್ತು ಬೆಳವಣಿಗೆ:**

ವ್ಯವಹಾರವೆಂದರೆ ಮನುಷ್ಯನ ಯಾವುದೇ ಆರ್ಥಿಕ ಚಟುವಟಿಕೆ ಎನ್ನಬಹುದು. ವ್ಯವಹಾರವು ಉತ್ಪಾದನೆ, ವ್ಯಾಪಾರ, ಕೈಗಾರಿಕೆ, ಬ್ಯಾಂಕಿಂಗ್, ವಿಮೆ ಏಜೆನ್ಸಿ, ಜಾಹಿರಾತು, ಸಾರಿಗೆ ಮತ್ತು ಇತರ ಅಂಶಗಳಿಂದ ಕೂಡಿದ್ದು ವಸ್ತು ಮತ್ತು ಸೇವೆಗಳನ್ನು ಗ್ರಾಹಕರಿಗೆ ಒದಗಿಸುವ ಚಟುವಟಿಕೆಯಾಗಿದೆ.

ಒಂದು ಚಟುವಟಿಕೆಯ ಹುಟ್ಟು ಮತ್ತು ಅದು ಕ್ರಮೇಣ ಬೆಳೆದು ಬಂದ ದಾರಿಯನ್ನು 'ವಿಕಸನ' ಎನ್ನುತ್ತೇವೆ. ವಾಣಿಜ್ಯದ ವಿಕಸನವನ್ನು ವ್ಯವಹಾರದ ಇತಿಹಾಸ ಎಂದೂ ಕರೆಯಬಹುದು. ವಾಣಿಜ್ಯವು ವ್ಯವಹಾರದ ಒಂದು ಭಾಗವಾಗಿದ್ದು ಇದರ ಚಟುವಟಿಕೆ ವಸ್ತುಗಳ ಮತ್ತು ಸೇವೆಗಳ ವಿತರಣೆಯಾಗಿದೆ.

ವ್ಯವಹಾರದ ವಿಕಸನವು ಅನೇಕ ಹಂತಗಳನ್ನು ದಾಟಿ ಇಂದಿನ ಸ್ಥಿತಿಗೆ ಬಂದು ನಿಂತಿದೆ. ಈ ಹಂತಗಳಲ್ಲಿ ಮುಖ್ಯವಾದವು ಯಾವುವೆಂದರೆ :

1. ಬೇಟೆಗಾರಿಕೆ ಮತ್ತು ಮೀನು ಹಿಡಿಯುವ ಹಂತ
2. ಪ್ರಾಣಿ ಸಾಕಾಣಿಕೆಯ ಹಂತ
3. ಕೃಷಿ ಅಥವಾ ಬೇಸಾಯದ ಹಂತ
4. ಕುಶಲ ಕರ್ಮಿಗಳ ಹಂತ
5. ವಸ್ತು ವಿನಿಮಯ ಹಂತ
6. ಹಣದ ಆರ್ಥಿಕತೆಯ ಹಂತ
7. ಪಟ್ಟಣದ ಆರ್ಥಿಕ ಹಂತ
8. ಅಂತರರಾಷ್ಟ್ರೀಯ ವ್ಯಾಪಾರದ ಹಂತ.

ಈ ಹಂತಗಳ ಸಂಕ್ಷಿಪ್ತ ವಿವರ ಈ ಕೆಳಕಂಡಂತಿದೆ.

**1. ಬೇಟೆಗಾರಿಕೆ ಮತ್ತು ಮೀನು ಹಿಡಿಯುವ ಹಂತ:** ಇದನ್ನು ಆರ್ಥಿಕ ಬೆಳವಣಿಗೆಯ ಮೊದಲನೆಯ ಹಂತವೆಂದು ಹೇಳಬಹುದು. ಈ ಅವಧಿಯಲ್ಲಿ ಮಾನವರು ಅಲೆಮಾರಿಗಳಾಗಿದ್ದು ಒಂದು ನಿರ್ದಿಷ್ಟ ಸ್ಥಳದಲ್ಲಿ ನೆಲೆಸಿರಲಿಲ್ಲ. ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಸ್ಥಳಾಂತರ ಮಾಡುತ್ತಿದ್ದರು. ಪ್ರಾಣಿಗಳನ್ನು

ಬೇಟೆಯಾಡುತ್ತಿದ್ದರು. ನದಿ, ಕೊಳಗಳಲ್ಲಿ ಮೀನನ್ನು ಹಿಡಿಯುತ್ತಿದ್ದರು. ಗೆಡ್ಡೆ ಗೆಣಸು, ಹಣ್ಣು ಮತ್ತು ಕಾಯಿಗಳನ್ನು ಆರಿಸುತ್ತಿದ್ದರು. ಪ್ರಾಣಿಗಳ ಮಾಂಸ, ಗೆಡ್ಡೆ ಗೆಣಸುಗಳು, ಮೀನು ಅವರ ಆಹಾರವಾಗಿತ್ತು. ಚಳಿ ಗಾಳಿ ಮಳೆಗಳಿಂದ ರಕ್ಷಿಸಿಕೊಳ್ಳಲು ಪ್ರಾಣಿಗಳ ಚರ್ಮ ಉಪಯೋಗಿಸುತ್ತಿದ್ದರು. ಗುಹೆಗಳಲ್ಲಿ ಹಾಗೂ ಮರದ ಪೊಟರೆಗಳಲ್ಲಿ ವಾಸಿಸುತ್ತಿದ್ದರು. ಈ ಹಂತದಲ್ಲಿ ಯಾವುದೇ ಆರ್ಥಿಕ ಚಟುವಟಿಕೆಗಳು ಕಂಡು ಬರುತ್ತಿರಲಿಲ್ಲ.

**2. ಪ್ರಾಣಿ ಸಾಕಣಿಕೆಯ ಹಂತ:** ಈ ಹಂತದಲ್ಲಿ ಮಾನವರು ಪ್ರಾಣಿಗಳನ್ನು ಸಾಕುವುದನ್ನು ಕಲಿತರು. ಮೊದಲು ದನಗಳು, ಕುರಿಗಳು, ಮೇಕೆಗಳು ಮುಂತಾದ ಪ್ರಾಣಿಗಳನ್ನು ಸಾಕಲು ಪ್ರಾರಂಭಿಸಿದರು. ಈ ಪ್ರಾಣಿಗಳು ಅವರಿಗೆ ಆಹಾರ ಮತ್ತು ಹೊದಿಕೆಗಳನ್ನು ಪೂರೈಸುತ್ತಿದ್ದವು. ಪ್ರಾಣಿಗಳ ಮೇವಿಗಾಗಿ ಹುಲ್ಲುಗಾವಲುಗಳನ್ನು ಹುಡುಕಿಕೊಂಡು ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ವಲಸೆ ಹೋಗುತ್ತಿದ್ದರು. ಈ ಹಂತದಲ್ಲಿ ಮಾನವರು ಸ್ವಲ್ಪ ಉತ್ತಮ ಮಟ್ಟಕ್ಕೆ ಏರಿದರು. ಆದರೂ ವಾಣಿಜ್ಯದ ಬೆಳವಣಿಗೆ ಕಂಡು ಬರುತ್ತಿರಲಿಲ್ಲ.

**3. ಕೃಷಿ ಅಥವಾ ಬೇಸಾಯ ಹಂತ:** ಪ್ರಾಣಿ ಸಾಕಾಣಿಕೆಯ ಹಂತದ ಹಲವಾರು ವರ್ಷಗಳ ನಂತರ ಮಾನವರು ಕೆಲವು ಬೆಳೆಗಳನ್ನು ಬೆಳೆಯುವುದನ್ನು ಕಲಿತರು. ಒಂದು ನಿರ್ದಿಷ್ಟ ಜಾಗದಲ್ಲಿ ವಾಸಿಸುವುದಕ್ಕೆ ಮೊದಲು ಮಾಡಿದರು. ಗುಂಪುಗಳಲ್ಲಿ ವಾಸಿಸುವುದು ಮೊದಲಾಯಿತು. ವಾಣಿಜ್ಯ ಚಟುವಟಿಕೆಗಳು ಪ್ರಾರಂಭವಾದವು. ಗ್ರಾಮಗಳು ಮತ್ತು ಸಮುದಾಯಗಳು ಹುಟ್ಟಿಕೊಂಡವು. ಶ್ರಮದ ವಿಭಜನೆ ಪ್ರಾರಂಭವಾಯಿತು.

**4. ಕುಶಲ ಕರ್ಮಿಗಳ ಹಂತ:** ಬೇಸಾಯಗಾರರಿಗೆ ಹಲವು ಉಪಕರಣಗಳು ಬೇಕಾದವು. ವಾಸಕ್ಕೆ ಮನೆಗಳನ್ನು ಕಟ್ಟಿಕೊಳ್ಳಬೇಕಾಯಿತು. ಇದಕ್ಕಾಗಿ ಕೆಲವು ಜನರು ತಮ್ಮ ಮನೆಗಳಲ್ಲಿ ವ್ಯವಸಾಯಕ್ಕೆ ಬೇಕಾದ ಉಪಕರಣಗಳನ್ನು ಮಾಡುವುದು, ಕೆಲವರು ಮನೆಗಳನ್ನು ಕಟ್ಟುವುದು ಮುಂತಾದ ಕಸುಬುಗಳನ್ನು ಪ್ರಾರಂಭಿಸಿದರು. ಇವರನ್ನು ಕುಶಲ ಕರ್ಮಿಗಳೆಂದು ಕರೆದರು. ಇವರು ಬೇಸಾಯಗಾರರಿಗೆ ಸಲಕರಣೆಗಳನ್ನು ಒದಗಿಸಿ ಅವರಿಂದ ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ಪಡೆಯುತ್ತಿದ್ದರು. ವಸ್ತು ವಿನಿಮಯ ಪದ್ಧತಿ ರೂಢಿಗೆ ಬಂದಿತು. ಇಂದೂ ಸಹ ಗ್ರಾಮಾಂತರ ಪ್ರದೇಶಗಳಲ್ಲಿ ಕುಶಲ ಕರ್ಮಿಗಳನ್ನು ಕಾಣುತ್ತೇವೆ. ಕಾಲಕ್ರಮದಲ್ಲಿ ಈ ಕುಶಲ ಕರ್ಮಿಗಳು ತಮ್ಮ ಪ್ರಗತಿಗಾಗಿ ತಮ್ಮದೇ ಆದ ವೃತ್ತಿ ಸಂಘಗಳನ್ನು ಸ್ಥಾಪಿಸಿಕೊಂಡರು. ಈ ವೃತ್ತಿ ಸಂಘಗಳು ಬಹಳ ಪ್ರಾಮುಖ್ಯತೆ ಪಡೆದವು.

**5. ವಸ್ತು ವಿನಿಮಯ ಪದ್ಧತಿಯ ಹಂತ:** ಶ್ರಮ ವಿಭಜನೆಯಿಂದ ಹೆಚ್ಚು ವೇಗವಾಗಿ ವಸ್ತುಗಳನ್ನು ಉತ್ಪಾದಿಸಲು ಸಾಧ್ಯವಾಯಿತು. ಈ ರೀತಿ ಹೆಚ್ಚಾಗಿ ಉತ್ಪಾದಿಸಿದ ವಸ್ತುಗಳ ಬದಲಿಗೆ ಬೇಕಾದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ವಸ್ತುಗಳನ್ನು ನೇರವಾಗಿ ವಸ್ತುಗಳಿಗೆ ವಿನಿಮಯ ಮಾಡಿಕೊಳ್ಳುವ ಪದ್ಧತಿಗೆ **'ವಸ್ತು ವಿನಿಮಯ ಪದ್ಧತಿ'** ಎನ್ನುತ್ತಾರೆ. ಈ ಹಂತದಲ್ಲಿ ಅನೇಕ ಸಮಸ್ಯೆಗಳು ಎದುರಾದವು. ಅವುಗಳಲ್ಲಿ ಮುಖ್ಯವಾದವು ಈ ಕೆಳಕಂಡಂತಿವೆ.

**1. ಬಯಕೆಗಳ ಮರು ಹೊಂದಾಣಿಕೆಯ ಕೊರತೆ:** ಉದಾ: ಒಬ್ಬ ರೈತನಲ್ಲಿ ಭತ್ತ ಹೆಚ್ಚಾಗಿದ್ದು ಅವನಿಗೆ ಗೋಧಿ ಬೇಕಾದಲ್ಲಿ, ಗೋಧಿ ಇರುವವನು ಭತ್ತವನ್ನು ಗೋಧಿಗೆ ವಿನಿಮಯಿಸಿಕೊಂಡರೆ ಇದನ್ನು ಬಯಕೆಗಳ ಸರಿಹೊಂದುವಿಕೆ ಎನ್ನುತ್ತೇವೆ. ಆದರೆ ಅನೇಕ ವೇಳೆ ಒಂದು ಪದಾರ್ಥಕ್ಕೆ ಬದಲಾಗಿ ಇನ್ನೊಂದು ಪದಾರ್ಥ ಪಡೆಯಲು ಬಯಕೆಗಳು ಸರಿ ಹೊಂದುತ್ತಿರಲಿಲ್ಲ ಉದಾ: ಭತ್ತದ ರೈತನಿಗೆ ಗೋಧಿ ಬೇಕಾಗಿದ್ದು ಗೋಧಿ ಉಳ್ಳ ರೈತನಿಗೆ ಜೋಳ ಬೇಕಾದಲ್ಲಿ ಭತ್ತಕ್ಕೆ ಬದಲಾಗಿ ಗೋಧಿ ಸಿಕ್ಕುತ್ತಿರಲಿಲ್ಲ.

**2. ಮೌಲ್ಯದ ಅಳತೆ ಸಮರ್ಪಕವಾಗಿ ಇಲ್ಲದೆ ಇರುವುದು:** ಒಂದು ಮಾಪನ ಭತ್ತಕ್ಕೆ ಎಷ್ಟು ಮಾಪನ ಗೋಧಿ ಅಥವಾ ಒಂದು ಹಸುವಿಗೆ ಎಷ್ಟು ಕುರಿಗಳು ಎಂಬ ಕಿಮ್ಮತ್ತನ್ನು ನಿಗದಿ ಪಡಿಸಲು ಸಾಧ್ಯವಿರಲಿಲ್ಲ.

**3. ವಸ್ತುಗಳನ್ನು ವಿಭಜಿಸುವ ಕೊರತೆ.** ಒಂದು ಹಸುವಿಗೆ ಸರಿ ಹೊಂದುವಂತೆ ಕುರಿಗಳನ್ನು ವಿಭಜಿಸಲು ಸಾಧ್ಯವಿರಲಿಲ್ಲ.

**4. ವಸ್ತುಗಳ ಸಾಗಾಣಿಕೆಯ ಮತ್ತು ಸಂಗ್ರಹದ ಸಮಸ್ಯೆ:** ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಸ್ತುಗಳನ್ನು ಸಾಗಿಸುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ವಸ್ತುಗಳನ್ನು ಹೆಚ್ಚುಕಾಲ ಸಂಗ್ರಹಿಸಿಡುವುದು ಕೂಡ ಸಮಸ್ಯೆಯಾಗುತ್ತಿತ್ತು.

**6. ಹಣದ ಆರ್ಥಿಕ ವ್ಯವಸ್ಥೆಯ ಹಂತ:** ವಸ್ತು ವಿನಿಮಯದ ಸಮಸ್ಯೆಗಳನ್ನು ನಿವಾರಿಸಲು ಅನೇಕ ಮಾಧ್ಯಮಗಳನ್ನು ಉಪಯೋಗಿಸಲಾಯಿತು. ಉದಾಃ ಪ್ರಾಣಿಗಳ ಚರ್ಮ, ಕವಡೆಗಳು ಮುಂತಾದವುಗಳನ್ನು ವಿನಿಮಯ ಮಾಧ್ಯಮವಾಗಿ ಉಪಯೋಗಿಸಲಾಗುತ್ತಿತ್ತು. ನಂತರ ಲೋಹಗಳು ರೂಢಿಗೆ ಬಂದವು. ಲೋಹಗಳನ್ನು ಒಂದು ನಿರ್ದಿಷ್ಟ ತೂಕ ಹಾಗೂ ಆಕಾರಕ್ಕೆ ತಂದು ಅವುಗಳನ್ನು ಮಾಧ್ಯಮವಾಗಿ ಉಪಯೋಗಿಸುತ್ತಿದ್ದರು. ಕ್ರಮೇಣ ತಾಮ್ರ, ಬೆಳ್ಳಿ ಮತ್ತು ಚಿನ್ನದ ನಾಣ್ಯಗಳು ರೂಢಿಗೆ ಬಂದವು. ಇಲ್ಲೂ ಕೂಡ ಸಾಗಾಣಿಕೆ ಕಷ್ಟವಾಯಿತು. ಹೀಗಾಗಿ ಕಾಗದದ ಹಣ ಚಾಲನೆಗೆ ಬಂದಿತು. ಈ ಕಾಗದದ ಹಣಕ್ಕೆ ಕೇಂದ್ರ ರಿಸರ್ವ ಬ್ಯಾಂಕ್ ಪೂರ್ಣ ಜವಾಬ್ದಾರಿ ಹೊತ್ತಿದ್ದು ಇದು ಸಂಕೇತದ ಹಣವಾಗಿರುತ್ತದೆ. ಚೆಕ್ಕುಗಳು, ಡ್ರಾಫ್ಟ್‌ಗಳು, ವಾಗ್ದಾನ ಪತ್ರಗಳು, ಕ್ರೆಡಿಟ್ ಕಾರ್ಡ್ ಮತ್ತು ಡೆಬಿಟ್ ಕಾರ್ಡ್ ಮುಂತಾದ ಬ್ಯಾಂಕ್ ಹಣ ಚಾಲ್ತಿಯಲ್ಲಿದೆ.

**7. ಪಟ್ಟಣಗಳ ಆರ್ಥಿಕತೆಯ ಹಂತ:** ವಿನಿಮಯಕ್ಕೆ ಬದಲಾಗಿ ಹಣ ಬಳಸುವ ಪದ್ಧತಿ ರೂಢಿಗೆ ಬಂದ ಮೇಲೆ ವಾಣಿಜ್ಯದ ಪ್ರಗತಿ ತೀವ್ರಗತಿಯಲ್ಲಿ ಸಾಗಲು ಪ್ರಾರಂಭವಾಯಿತು. ಜನರು ಹೆಚ್ಚು ಹೆಚ್ಚಾಗಿ ವಸ್ತುಗಳನ್ನು ಉತ್ಪಾದಿಸಲು ಪ್ರಾರಂಭಿಸಿದರು. ಇವರೆಲ್ಲರೂ ಒಟ್ಟಾಗಿ ವಸ್ತುಗಳ ವಿನಿಮಯಕ್ಕಾಗಿ ಒಂದೆಡೆ ಸೇರುತ್ತಿದ್ದರು. ಇವು ಸ್ಥಳೀಯ ಮಾರುಕಟ್ಟೆಗಳಾದವು. ಕ್ರಮೇಣ ಈ ಮಾರುಕಟ್ಟೆಗಳು ಪಟ್ಟಣಗಳಾಗಿ ಪರಿವರ್ತಿತಗೊಂಡವು ಹಾಗೂ ಉತ್ಪಾದನಾ ವಸ್ತುಗಳನ್ನು ಪೂರೈಸುವ ಕೇಂದ್ರಗಳಾದವು. ವ್ಯಾಪಾರಗಾರರು ಅಸ್ತಿತ್ವಕ್ಕೆ ಬಂದರು. ಇವರು ಕುಶಲ ಕರ್ಮಿಗಳನ್ನು ಒಂದೆಡೆಗೆ ಬರ ಮಾಡಿಕೊಂಡು ಕಚ್ಚಾ ಪದಾರ್ಥಗಳನ್ನು ಸಂಗ್ರಹಿಸಿ ಅವರಿಂದ ಕೆಲಸ ಮಾಡಿಸಿಕೊಳ್ಳಲು ಪ್ರಾರಂಭಿಸಿದರು. ತಯಾರಾದ ವಸ್ತುಗಳನ್ನು ಗ್ರಾಮಗಳಿಗೆ ಸರಬರಾಜು ಮಾಡುತ್ತಿದ್ದರು. ಈ ಹಂತದಲ್ಲಿ ವಾಣಿಜ್ಯವು ಬಹುವಾಗಿ ಅಭಿವೃದ್ಧಿ ಹೊಂದಿತು ಹಾಗೂ ಮಾರುಕಟ್ಟೆಗಳು ಉದ್ದಗಲಕ್ಕೂ ಬೆಳೆದವು.

**8. ಅಂತರರಾಷ್ಟ್ರೀಯ ವ್ಯಾಪಾರ ಹಂತ:** ಕ್ರಿ.ಶ. 15 ಮತ್ತು 16ನೇ ಶತಮಾನಗಳಲ್ಲಿ ಭೌಗೋಳಿಕ ಅನ್ವೇಷಣೆಗಳು ಪ್ರಾರಂಭವಾದವು. ಕೊಲಂಬಸ್ ಅಮೆರಿಕವನ್ನು ಕಂಡುಹಿಡಿದನು. ವಾಸ್ಕೋಡಿಗಾಮನು ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಕಂಡು ಹಿಡಿದನು. ಪೋರ್ಚುಗೀಸ್ ದೇಶದ ಮೆಗಲನ್ನನು ಸ್ಪೇನ್ ದೇಶದ ದೊರೆಯ ಸಹಾಯದಿಂದ ವಿಶ್ವಪರ್ಯಟನೆಗಾಗಿ ಹಡಗಿನಲ್ಲಿ ಸ್ಪೇನ್‌ನ್ನು ಬಿಟ್ಟು ದಕ್ಷಿಣ ಅಮೇರಿಕಾದ ದಕ್ಷಿಣ ಭೂಶಿರವನ್ನು ದಾಟಿ ಫೆಸಿಪಿಕ್ ಸಾಗರವನ್ನು ಸೇರಿದನು. ಅಲ್ಲಿಂದ ಫಿಲಿಫೈನ್ಸ್ ದ್ವೀಪಗಳನ್ನು ಸೇರಿ ಅಲ್ಲಿ ಕೊಲ್ಲಲ್ಪಟ್ಟನು. ಆದರೆ ಅವನ ಹಡಗು 'ವಿಕ್ಟೋರಿಯ' ಮೂರು ವರ್ಷಗಳ ನಂತರ ಸ್ಪೇನ್ ದೇಶಕ್ಕೆ ಹಿಂದಿರುಗಿತು. ಇದು ವಿಶ್ವಪರ್ಯಟನೆ ಮಾಡಿದ ಮೊದಲ ಹಡಗಾಯಿತು.

ಬ್ರಿಟನ್ನಿನಲ್ಲಾದ ಕೈಗಾರಿಕಾ ಕ್ರಾಂತಿ ಹಾಗೂ ಭೌಗೋಳಿಕ ಅನ್ವೇಷಣೆಗಳು ವಾಣಿಜ್ಯದ ಬೆಳವಣಿಗೆಗೆ ಬಹಳವಾಗಿ ಸಹಾಯ ಮಾಡಿದವು. ಉತ್ಪಾದನೆಯು ಬೃಹತ್ ಪ್ರಮಾಣದಲ್ಲಿ ಸ್ಥಳೀಯ ಬೇಡಿಕೆಗೆ ಮಾತ್ರವಲ್ಲದೆ ಇತರ ದೇಶಗಳ ಬೇಡಿಕೆಗಾಗಿಯೂ ಉತ್ಪಾದಿಸಲು ಪ್ರಾರಂಭವಾಯಿತು. ಗುಣಮಟ್ಟದ ವಸ್ತುಗಳು ಯಂತ್ರಗಳ ಸಹಾಯದಿಂದ ಅಧಿಕ ಪ್ರಮಾಣದಲ್ಲಿ ಉತ್ಪಾದನೆಯಾಗಲು ಆರಂಭವಾಗಿ ಅಂತರರಾಷ್ಟ್ರೀಯ ಮಾರುಕಟ್ಟೆ ಪ್ರಾರಂಭವಾಯಿತು. ಸಾರಿಗೆ ಮತ್ತು ಸಂಪರ್ಕ ಸಾಧನೆಗಳಲ್ಲುಂಟಾದ ತೀವ್ರಗತಿಯ ಬದಲಾವಣೆ ಮಾರುಕಟ್ಟೆ ವಿಕಸನಗೊಳ್ಳಲು ಸಾಧ್ಯವಾಯಿತು. ವಸ್ತುಗಳ ಉತ್ಪಾದನೆ ಕೇವಲ ಒಂದು ದೇಶಕ್ಕೆ ಸೀಮಿತವಾಗದೆ ವಿಶ್ವದ ಮಾರುಕಟ್ಟೆಗೂ ವ್ಯಾಪಿಸಿತು.

**ಆರ್ಥಿಕ ಬೆಳವಣಿಗೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಪಾತ್ರ ಮತ್ತು ಪ್ರಾಮುಖ್ಯತೆ**

ವ್ಯಾಪಾರವೆಂದರೆ ಸರಕುಗಳನ್ನು ಕೊಳ್ಳುವುದು ಮತ್ತು ಮಾರುವುದೇ ಆಗಿದೆ. ವಾಣಿಜ್ಯವೆಂದರೆ ವ್ಯಾಪಾರ ಸುಗಮವಾಗಿ ನಡೆಯಲು ಪೂರಕವಾದ ಇತರೆ ಅಂಶಗಳನ್ನು ಒಳಗೊಂಡಿದೆ. ಈ ಪೂರಕ ಅಂಶಗಳಾವುವೆಂದರೆ ಸಾಗಾಣಿಕೆ, ವಿಮೆ, ಬ್ಯಾಂಕಿಂಗ್, ಉಗ್ರಾಣ ವ್ಯವಸ್ಥೆ, ಜಾಹೀರಾತು ಮುಂತಾದವು. ಇವುಗಳನ್ನು ವಾಣಿಜ್ಯ ಸೇವೆಗಳೆಂದು ಕರೆಯಬಹುದು. ವ್ಯಾಪಾರಗಾರರು ಗ್ರಾಹಕರ ಇಷ್ಟಗಳನ್ನು ಅರಿತು ಅನುದಿನವೂ ಅವರಿಗೆ ಬೇಕಾದ ಸರಕುಗಳನ್ನು ಸರಬರಾಜು ಮಾಡುತ್ತಾರೆ. ಹಾಗೆಯೇ ಇತರೇ ಅನೇಕ ಸೇವೆಗಳನ್ನು ಒದಗಿಸುತ್ತಾರೆ. ವ್ಯಾಪಾರ ಸುಗಮವಾಗಿ ಸಾಗಲು ಸಹಕರಿಸುವ ಸೇವೆಗಳಾದ ಸಾಗಾಣಿಕೆಯು ಸರಕುಗಳನ್ನು ಉತ್ಪಾದನೆಯ ಕೇಂದ್ರಗಳಿಂದ ವ್ಯಾಪಾರಿಗಳಿಗೆ ಮತ್ತು ಅವರ ಮೂಲಕ ಗ್ರಾಹಕರಿಗೆ ತಲುಪಲು ಸಹಾಯ ಮಾಡುತ್ತದೆ. ಉತ್ಪಾದಕರಿಗೆ ಅಥವಾ ವ್ಯಾಪಾರಿಗಳಿಗೆ ಬೇಕಾದ ಹಣ ಸೌಲಭ್ಯವನ್ನು ಬ್ಯಾಂಕುಗಳು ಒದಗಿಸುತ್ತವೆ. ಸಾಗಾಟದ ಸಮಯದಲ್ಲಾಗಲಿ, ಶೇಖರಣೆಯ ಸಮಯದಲ್ಲಾಗಲಿ ಸರಕುಗಳು ನಾಶ ಹೊಂದಿದರೆ ಅದರಿಂದ ಉಂಟಾದ ನಷ್ಟವನ್ನು ವಿಮಾ ಕಂಪನಿಗಳು ತುಂಬಿ ಕೊಡುವುದರ ಮೂಲಕ ಸೇವೆ ಸಲ್ಲಿಸುತ್ತವೆ. ಯಾವುದೋ ಕಾಲದಲ್ಲಿ ಉತ್ಪಾದನೆಯಾದ ವಸ್ತುಗಳು ಮತ್ತಾವುದೋ ಕಾಲದಲ್ಲಿ ಗ್ರಾಹಕರಿಗೆ ಬೇಕಾಗುತ್ತದೆ. ಇದಕ್ಕಾಗಿ ಉಗ್ರಾಣಗಳು ವಸ್ತುಗಳನ್ನು ವೈಜ್ಞಾನಿಕ ತಂತ್ರಜ್ಞಾನಗಳಿಂದ ರೂಪಿಸಲ್ಪಟ್ಟು ಸರಕುಗಳ ಶೇಖರಣೆಗೆ ಸಹಾಯ ಮಾಡುತ್ತವೆ. ಗ್ರಾಹಕರಿಗೆ ವಸ್ತುಗಳ ಬಗ್ಗೆ ಬೇಕಾದ ಮಾಹಿತಿಯನ್ನು ಜಾಹೀರಾತು ಸಂಸ್ಥೆಗಳು ನಿರ್ವಹಿಸುತ್ತವೆ. ಈ ಎಲ್ಲ ಸೇವೆಗಳು ವಾಣಿಜ್ಯ ಕ್ಷೇತ್ರಕ್ಕಷ್ಟೇ ಸೀಮಿತವಾಗಿರದೆ ಸಮಾಜಕ್ಕೂ ಕೂಡ ಅನೇಕ ರೀತಿಗಳಿಂದ ಸೇವೆಗಳನ್ನು ಸಲ್ಲಿಸುತ್ತವೆ.

**ವಾಣಿಜ್ಯದ ಪ್ರಾಮುಖ್ಯತೆಯನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ:** ವಾಣಿಜ್ಯವು ಗ್ರಾಹಕರಿಗೆ ಬೇಕಾದ ವಸ್ತುಗಳನ್ನು ಸರಿಯಾದ ಸಮಯಕ್ಕೆ ಒದಗಿಸುವ ಜವಾಬ್ದಾರಿ ಹೊತ್ತಿದೆ. ಕೈಗಾರಿಕೆಗಳು ಸ್ಥಾಪನೆಯಾಗಬೇಕಾದರೆ ಅದಕ್ಕೆ ಬೇಕಾದ ಸವಲತ್ತುಗಳನ್ನು ಒದಗಿಸುತ್ತದೆ. ಪ್ರಪಂಚದ ಬೇರೆ ಬೇರೆ ಪ್ರದೇಶಗಳಲ್ಲಿ ಹಂಚಿರುವ ಜನರನ್ನು ಒಟ್ಟುಗೂಡಿಸುತ್ತದೆ. ಬೆಲೆಗಳನ್ನು ಹತೋಟಿಯಲ್ಲಿಡಲು ಸಹಕರಿಸುತ್ತದೆ. ವಿಷಯಗಳ ವಿನಿಮಯದ ಮೂಲಕ ಸಾಂಸ್ಕೃತಿಕ ಬೆಳವಣಿಗೆಗೆ ಸಹಾಯ ಮಾಡುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ದೇಶದ ಆರ್ಥಿಕ ಬೆಳವಣಿಗೆಗೆ ಸಹಾಯ ಮಾಡುತ್ತದೆ. ಸರ್ಕಾರದ ಆದಾಯಕ್ಕೆ ಕರ ತೆರಿಗೆ ಮತ್ತು ಸುಂಕಗಳನ್ನು ನೀಡುವುದರ ಮೂಲಕ ತನ್ನ ಪಾಲನ್ನು ನೀಡುತ್ತದೆ.

**ಇಪ್ಪತ್ತೊಂದನೆ ಶತಮಾನದಲ್ಲಿ ವಾಣಿಜ್ಯದ ಬೆಳವಣಿಗೆ**

21ನೇ ಶತಮಾನವನ್ನು ಮಾಹಿತಿ ತಂತ್ರಜ್ಞಾನ ಯುಗವೆಂದು ಕರೆಯುತ್ತಾರೆ. ಅಂತರ್ಜಾಲ, ಬ್ಯಾಂಕಿಂಗ್, ವಿಮಾಸೇವೆಯ ಖಾಸಗೀಕರಣ, ಟೆಲಿ ಮಾರುಕಟ್ಟೆ ಹಾಗೂ ವಿದ್ಯುನ್ಮಾನ ಜಾಹೀರಾತು ವ್ಯವಸ್ಥೆಯು ಗ್ರಾಹಕನು ವಸ್ತು ಮತ್ತು ಸೇವೆಗಳನ್ನು ಅತಿ ಶೀಘ್ರವಾಗಿ ಪಡೆಯಲು ಸಹಾಯಕವಾಗಿವೆ.

ಗ್ರಾಹಕರು ವಿಶ್ವದ ಯಾವುದೇ ಭಾಗದಲ್ಲಿ ಉತ್ಪಾದಿಸಿದ ತನಗೆ ಬೇಕಾದ ವಸ್ತುಗಳನ್ನು ಟೆಲಿ ಮಾರುಕಟ್ಟೆಯ ಮುಖಾಂತರ ಅತಿ ವೇಗವಾಗಿ ಕೊಂಡುಕೊಳ್ಳಬಹುದಾಗಿದೆ. ಇಂದಿನ ಉತ್ಪಾದಕರು ವಿದ್ಯುನ್ಮಾನ ಜಾಹೀರಾತು ವ್ಯವಸ್ಥೆಯ ಮೂಲಕ ವಿಶ್ವದೆಲ್ಲೆಡೆಯಿಂದ ಗ್ರಾಹಕರನ್ನು ಆಕರ್ಷಿಸಬಹುದಾಗಿದೆ. ಬಹುರಾಷ್ಟ್ರೀಯ ಕಂಪನಿಗಳು ಅನೇಕ ರಾಷ್ಟ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಇವುಗಳಿಂದ ಉತ್ಪಾದನೆಯಾದ ವಸ್ತುಗಳನ್ನು ವಿಶ್ವ ಮಾರುಕಟ್ಟೆಗೆ ಸರಬರಾಜು ಮಾಡಲು ಸಾಧ್ಯವಾಗಿದೆ. ಈ ಕಂಪನಿಗಳು ಬೃಹತ್ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸುತ್ತಿದ್ದು ವಿಶೇಷ ಗುಣಮಟ್ಟದ ವಸ್ತುಗಳನ್ನು ಪೈಪೋಟಿ ದರದಲ್ಲಿ ಗ್ರಾಹಕರಿಗೆ ಪೂರೈಸುತ್ತಿವೆ. ಒಟ್ಟಿನಲ್ಲಿ ವಾಣಿಜ್ಯದ ಅಭಿವೃದ್ಧಿಯು ದಾಪುಗಾಲು ಹಾಕುತ್ತ ನಡೆಯುತ್ತಿದೆ.

## ಅಭ್ಯಾಸಗಳು

**I ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಜಾಗಗಳನ್ನು ಸರಿಯಾದ ಪದಗಳಿಂದ ತುಂಬಿರಿ.**

1 ಗ್ರಾಹಕರಿಗೆ ಸಲ್ಲಿಸುವ ತಾಂತ್ರಿಕ ಅಥವಾ ವಿಶಿಷ್ಟ ವೈಯುಕ್ತಿಕ ಸೇವೆಗಳ ಆರ್ಥಿಕ ಚಟುವಟಿಕೆಯನ್ನು ________ ಎನ್ನುತ್ತಾರೆ.

2 ಪ್ರಾಚೀನ ಕಾಲದಲ್ಲಿ ವಸ್ತುಗಳ ವಿನಿಮಯ ____________ ಜೊತೆಯಲ್ಲಿ ಆಗುತ್ತಿತ್ತು.

3 ಕಾಗದದ ಹಣಕ್ಕೆ ದೇಶದ ____________ ಪೂರ್ಣ ಜವಾಬ್ದಾರಿ ಹೊತ್ತಿರುತ್ತದೆ.

4 ವಾಣಿಜ್ಯ ವಿಕಸನದ ________ ಹಂತದಲ್ಲಿ ಗ್ರಾಮ ಮತ್ತು ಸಮುದಾಯಗಳು ಹುಟ್ಟಿಕೊಂಡವು.

5 ಅಂತರರಾಷ್ಟ್ರೀಯ ವ್ಯಾಪಾರ ಹಂತಕ್ಕೆ ಮುಖ್ಯ ಕಾರಣ ______________ ಪ್ರಾರಂಭವಾಗಿದ್ದು.

6 ವ್ಯಾಪಾರ ಮತ್ತು ವಾಣಿಜ್ಯ ಸರ್ಕಾರಕ್ಕೆ ____________ ಗಳನ್ನು ಕೊಡುವುದರಿಂದ ಆರ್ಥಿಕ ಬೆಳವಣಿಗೆಗೆ ಸಹಾಯವಾಗುತ್ತದೆ.

**II ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1 ಆರ್ಥಿಕ ಚಟುವಟಿಕೆಗಳೆಂದರೇನು?

2 ವ್ಯಾಪಾರ ಮತ್ತು ವಾಣಿಜ್ಯಗಳ ಅರ್ಥ ತಿಳಿಸಿ.

3 ಪದಾರ್ಥಗಳ ನೇರ ವಿನಿಮಯ ಪದ್ಧತಿ ಎಂದರೇನು?

4 ಉದ್ಯೋಗ ಎಂದರೇನು?

5 ವ್ಯಾಪಾರ ಪೂರಕಗಳೆಂದರೇನು? ಅವು ಯಾವುವು?

6 ವೃತ್ತಿ ಸಂಘಗಳೆಂದರೇನು?

## III ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಉತ್ತರ ಬರೆಯಿರಿ.

1 ನಮ್ಮ ದೈನಂದಿನ ಜೀವನದಲ್ಲಿ ವಸ್ತುಗಳ ಉತ್ಪಾದನೆ ಮತ್ತು ವಿತರಣೆ ಹೇಗೆ ಮುಖ್ಯ ಪಾತ್ರ ವಹಿಸುತ್ತದೆ?

2 ವಿವಿಧ ಬಗೆಯ ಆರ್ಥಿಕ ಚಟುವಟಿಕೆಗಳನ್ನು ವಿವರಿಸಿ.

3 ವಸ್ತು ವಿನಿಮಯ ಪದ್ಧತಿಯ ಸಮಸ್ಯಗಳಾವುವು? ಹಣ ಮಾಧ್ಯಮ ಇದನ್ನು ಹೇಗೆ ನಿವಾರಿಸುತ್ತದೆ?

4 ವಾಣಿಜ್ಯ ವಿಕಸನದ ಹಂತಗಳಲ್ಲಿ ಮುಖ್ಯವಾದುವು ಯಾವುವು? ಸಂಕ್ಷಿಪ್ತವಾಗಿ ಯಾವುದಾದರೂ ಒಂದನ್ನು ವಿವರಿಸಿ.

## IV ಚಟುವಟಿಕೆ.

1. ನಿಮ್ಮ ಊರಿನಲ್ಲಿ ಕಂಡುಬರುವ ಕುಶಲ ಕರ್ಮಿಗಳನ್ನು ಪಟ್ಟಿಮಾಡಿ ಯಾರಾದರೂ ಒಬ್ಬರ ಕೆಲಸವನ್ನು ಸಮಂಜಸವಾಗಿ ತಿಳಿದುಕೊಳ್ಳಿ. ನಿಮ್ಮ ಅನುಭವಗಳನ್ನು ಕುರಿತು ಒಂದು ಪ್ರಬಂಧ ಬರೆಯಿರಿ.





ಸರಳ ಜೀವನ ಮತ್ತು ಮೇಲ್ಮಟ್ಟದ ವಿಚಾರ ಮನುಷ್ಯನನ್ನು ಮಹಾನ್ ಆಗಿ ಮಾಡುತ್ತದೆ.

–ಗಾಂಧೀಜಿ

# ಅಧ್ಯಾಯ-2

# ವ್ಯವಹಾರ -ಅರ್ಥ ಮತ್ತು ಪ್ರಾಮುಖ್ಯತೆ

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ವ್ಯವಹಾರದ ಉದ್ದೇಶಗಳನ್ನು ಅರ್ಥೈಸಿಕೊಳ್ಳುವುದು.
- ವ್ಯಾಪಾರದ ವಿಭಾಗಗಳಾದ, ದೇಶೀಯ ವ್ಯಾಪಾರ, ವಿದೇಶೀ ವ್ಯಾಪಾರ ಮತ್ತು ಪುನರ್‌ರಫ್ತು ವ್ಯಾಪಾರಗಳ ಅರ್ಥ ವಿಧಗಳು, ಹಾಗೂ ಮಹತ್ವ ತಿಳಿಯುವುದು.
- ಗೃಹ ಕೈಗಾರಿಕೆಗಳು ಮತ್ತು ಸಣ್ಣ ಕೈಗಾರಿಕೆಗಳ ಉತ್ಪಾದನಾ ಕಾರ್ಯ ಇವುಗಳ ಸಮಸ್ಯೆಗಳನ್ನು ತಿಳಿಯುವುದು.
- ವ್ಯವಹಾರದ ನೀತಿ ತತ್ವಗಳನ್ನು ಗುರುತಿಸುವುದು.

ವ್ಯವಹಾರವು ಒಂದು ಪ್ರಮುಖ ಆರ್ಥಿಕ ಚಟುವಟಿಕೆಯಾಗಿದೆ. ಇದು ಮುಖ್ಯವಾಗಿ ವಸ್ತುಗಳ ಉತ್ಪಾದನೆ ಮತ್ತು ಸೇವೆಗಳನ್ನು ಗ್ರಾಹಕರಿಗೆ ಪೂರೈಸುವುದೇ ಆಗಿದೆ.

ವ್ಯವಹಾರವು ಮುಖ್ಯವಾಗಿ ಎರಡು ಉದ್ದೇಶಗಳಿಂದ ಕೂಡಿದೆ. ಯಾವುವೆಂದರೆ :

(1) ಆರ್ಥಿಕ ಉದ್ದೇಶಗಳು (2) ಸಾಮಾಜಿಕ ಉದ್ದೇಶಗಳು

**1. ಆರ್ಥಿಕ ಉದ್ದೇಶಗಳು:** ನಾವು ಸಾಮಾನ್ಯವಾಗಿ ವ್ಯವಹಾರದ ಮುಖ್ಯ ಉದ್ದೇಶ ಲಾಭಗಳಿಸುವುದೇ ಆಗಿದೆ ಎಂದುಕೊಂಡಿದ್ದೇವೆ. ಆದರೆ ವ್ಯವಹಾರದ ಉದ್ದೇಶ ಒಂದು ನ್ಯಾಯಯುಕ್ತ ಲಾಭಗಳಿಕೆಯಾಗಿದ್ದು ಇದು ವ್ಯವಹಾರವು ಸಮರ್ಪಕವಾಗಿ ನಡೆಯಲು ಸಾಕಾಗುವ ವೆಚ್ಚವನ್ನು ಭರಿಸಿ ವ್ಯವಹಾರಸ್ಥನು ಸುಖಮಯ ಜೀವನ ಸಾಗಿಸುವಷ್ಟಿರಬೇಕು. ವ್ಯವಹಾರವು ವಸ್ತುಗಳನ್ನು ಮತ್ತು ಸೇವೆಗಳನ್ನು ಗ್ರಾಹಕರಿಗೆ ಪೂರೈಸುತ್ತದೆ ಮತ್ತು ಗ್ರಾಹಕರನ್ನು ಸೃಷ್ಟಿಸುತ್ತದೆ (Creates). ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ವಸ್ತುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಉತ್ಪಾದಿಸುತ್ತದೆ. ಗ್ರಾಹಕರಿಗೆ ಕಾಲಕಾಲಕ್ಕೆ ಬೇಕಾದ ಹೊಸ ಹೊಸ ಬದಲಾವಣೆಗಳಿಗನುಸಾರವಾಗಿ ವಸ್ತುಗಳನ್ನು ಉತ್ಪಾದಿಸಿ ಪೂರೈಸುತ್ತದೆ. ಹೊಸ ಹೊಸ ಸಂಶೋಧನೆಗಳ ಮೂಲಕ ಉತ್ಪಾದನೆಯಲ್ಲಿ ಬದಲಾವಣೆಗಳನ್ನು ತರುತ್ತದೆ. ಹೊಸ ಉತ್ಪಾದನೆಗಳ ಬಗ್ಗೆ ಗ್ರಾಹಕರಿಗೆ ಜಾಹಿರಾತಿನ ಮೂಲಕ ತಿಳಿಸುತ್ತದೆ.

**2. ಸಾಮಾಜಿಕ ಉದ್ದೇಶಗಳು:** ವ್ಯವಹಾರವು ದೇಶದ ಪ್ರಗತಿಗೆ ಬೇಕಾದ ವಸ್ತುಗಳನ್ನು ಉತ್ಪಾದಿಸುತ್ತದೆ ಮತ್ತು ಒದಗಿಸುತ್ತದೆ. ಅನೇಕ ಜನರಿಗೆ ಉದ್ಯೋಗಗಳನ್ನು ಕಲ್ಪಿಸಿ ಅವರಿಗೆ ಸಂಬಳ ಅಥವಾ ಮಜೂರಿಗಳ ಮೂಲಕ ವರಮಾನ ಕೊಟ್ಟು ಅವರ ಜೀವನ ಮಟ್ಟ ಸುಧಾರಿಸಲು ಸಹಾಯ ಮಾಡುತ್ತದೆ. ಕರ ಮತ್ತು ತೆರಿಗೆಗಳನ್ನು ಪಾವತಿ ಮಾಡುವುದರ ಮೂಲಕ ಸರ್ಕಾರದ ಆದಾಯ ಹೆಚ್ಚಿಸಿ ರಾಷ್ಟ್ರದ ಅಭಿವೃದ್ಧಿಗೆ ಸಹಾಯ ಮಾಡುತ್ತದೆ. ಶಾಲಾ ಕಾಲೇಜುಗಳನ್ನು, ಆಸ್ಪತ್ರೆಗಳನ್ನು, ಸಮುದಾಯ ಭವನಗಳನ್ನು ಪ್ರಾರಂಭಿಸಿ ಅವುಗಳನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿರುತ್ತದೆ. ಉದ್ಯಾನವನ, ಕ್ರೀಡಾಂಗಣಗಳ ನಿರ್ವಹಣೆ ಮುಂತಾದವುಗಳ ಮೂಲಕ ಸಮಾಜ ಕಲ್ಯಾಣಕ್ಕಾಗಿ ಶ್ರಮಿಸುತ್ತದೆ.

**ವ್ಯಾಪಾರ, ಕೈಗಾರಿಕೆ ಮತ್ತು ಸೇವೆಗಳು:** ವ್ಯಾಪಾರವು ವಾಣಿಜ್ಯದ ಒಂದು ಭಾಗವಾಗಿದೆ. ಸರಕುಗಳನ್ನು ಕೊಳ್ಳುವುದು ಮತ್ತು ಗ್ರಾಹಕರಿಗೆ ಮಾರುವುದನ್ನು ವ್ಯಾಪಾರವೆನ್ನುತ್ತೇವೆ.

ಈ ವ್ಯಾಪಾರವನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು.

ಅವು ಯಾವುವೆಂದರೆ: (1) ಆಂತರಿಕ ಅಥವಾ ದೇಶೀಯ ವ್ಯಾಪಾರ

(2) ವಿದೇಶ ಅಥವಾ ಅಂತರರಾಷ್ಟ್ರೀಯ ವ್ಯಾಪಾರ

(3) ಪುನರ್ ರಫ್ತು ವ್ಯಾಪಾರ (Entrepot Trade)

**1. ಆಂತರಿಕ ಅಥವಾ ದೇಶೀಯ ವ್ಯಾಪಾರ:** ಒಂದು ದೇಶದ ಎಲ್ಲೆಗಳ ಒಳಗಡೆ ನಡೆಯುವ ವ್ಯಾಪಾರವನ್ನು ಆಂತರಿಕ ವ್ಯಾಪಾರವೆನ್ನುತ್ತೇವೆ. ಈ ವ್ಯಾಪಾರವು ಚಿಲ್ಲರೆ ಮಾರಾಟಗಾರರು ಮತ್ತು ಸಗಟು ವ್ಯಾಪಾರಗಾರರಿಂದ ನಡೆಯುತ್ತದೆ.

**ಚಿಲ್ಲರೆ ಮಾರಾಟಗಾರರು:** ಇವರು ಸಾಮಾನ್ಯವಾಗಿ ಗ್ರಾಹಕರು ನೆಲೆಸಿರುವ ಜಾಗಗಳಲ್ಲಿ ತಮ್ಮ ವ್ಯಾಪಾರ ನಡೆಸುತ್ತಾರೆ. ಇವರು ಸಗಟು ವ್ಯಾಪಾರಿಗಳಿಂದ ದೊಡ್ಡ ಪ್ರಮಾಣದಲ್ಲಿ ಸರಕುಗಳನ್ನು ಕೊಂಡು ಸಣ್ಣ ಪ್ರಮಾಣದಲ್ಲಿ ಗ್ರಾಹಕರಿಗೆ ಮಾರುತ್ತಾರೆ. ಇವರಿಂದ ನಮಗೆ ಅನೇಕ ಉಪಯೋಗಗಳಿವೆ. ಅವುಗಳು ಯಾವುವೆಂದರೆ, ಚಿಲ್ಲರೆ ವ್ಯಾಪಾರಿಗಳು ವಸ್ತುಗಳ ವಿತರಣೆಯ ಕೊನೆಯ ಕೊಂಡಿಯಾಗಿದ್ದಾರೆ, ಬೇರೆ ಬೇರೆ ಉತ್ಪಾದಕರಿಂದ ಉತ್ಪಾದನೆಯಾಗುವ ವಸ್ತುಗಳನ್ನು ಸಗಟು ವ್ಯಾಪಾರಿಗಳಿಂದ ಕೊಂಡು ಗ್ರಾಹಕರಿಗೆ ಒದಗಿಸುತ್ತಾರೆ. ಅನೇಕ ಸಾರಿ ಉಂಟಾಗುವ ವ್ಯಾಪಾರ ನಷ್ಟಗಳನ್ನು ತಾವೇ ಭರಿಸುತ್ತಾರೆ, ವಸ್ತುಗಳನ್ನು ಅವುಗಳ ಪ್ರಮಾಣಕ್ಕನುಗುಣವಾಗಿ ವಿಂಗಡಿಸಿ ಗ್ರಾಹಕರ ಇಷ್ಟದಂತೆ ಅವರಿಗೆ ಒದಗಿಸುತ್ತಾರೆ, ಗ್ರಾಹಕರಿಗೆ ಸಾಲ ಸೌಲಭ್ಯಗಳನ್ನು ಕೊಡುತ್ತಾರೆ. ಮಾರುಕಟ್ಟೆಗೆ ಹೊಸದಾಗಿ ಬಂದ ವಸ್ತುಗಳ ಬಗ್ಗೆ ಗ್ರಾಹಕರಿಗೆ ಮಾಹಿತಿ ನೀಡುತ್ತಾರೆ ಮತ್ತು ಯಾವುದೇ ಒಂದು ನಿರ್ದಿಷ್ಟ ವಸ್ತು ದೊರೆಯದಿದ್ದಲ್ಲಿ ಪರ್ಯಾಯ ವಸ್ತುಗಳ ಬಗ್ಗೆ ತಿಳಿಸುತ್ತಾರೆ. ಈ ಚಿಲ್ಲರೆ ವ್ಯಾಪಾರವು ಬೇರೆ ಬೇರೆ ರೀತಿಗಳಲ್ಲಿ ನಡೆಯುತ್ತದೆ. ಅವುಗಳಲ್ಲಿ ಮುಖ್ಯವಾದವು ಯಾವುವೆಂದರೆ, ಖಾಯಂ ಅಂಗಡಿಗಳು ಮತ್ತು ಸಂಚಾರಿ ವ್ಯಾಪಾರಿಗಳು.

**ಖಾಯಂ ಅಂಗಡಿಗಳು:** ಇವರು ಒಂದು ನಿರ್ದಿಷ್ಟ ಜಾಗದಲ್ಲಿ ಅಂಗಡಿಗಳನ್ನು ತೆರೆದು ವಸ್ತುಗಳನ್ನು ಮಾರುತ್ತಾರೆ. (ವ್ಯಾಪಾರಿಗಳನ್ನು ವರ್ತಕರೆಂದೂ ಕರೆಯುವ ರೂಢಿ ಇದೆ)



**ಖಾಯಂ ಅಂಗಡಿಗಳು**

**ಸಂಚಾರಿವ್ಯಾಪಾರಿಗಳು:** ಇವರು ಒಂದು ನಿರ್ದಿಷ್ಟ ಜಾಗದಲ್ಲಿ ವ್ಯಾಪಾರ ಮಾಡುವುದಿಲ್ಲ. ಇವರಲ್ಲಿ ಮುಖ್ಯವಾದವೆಂದರೆ. ತಲೆಹೊರೆ ವ್ಯಾಪಾರಿಗಳು, ತಳ್ಳುಗಾಡಿ ವ್ಯಾಪಾರಿಗಳು, ರಸ್ತೆ ಬದಿ ವ್ಯಾಪಾರಿಗಳು (ಮಾರುಕಟ್ಟೆ ವ್ಯಾಪಾರಿಗಳು) ಮತ್ತು ಸಂತೆ ವ್ಯಾಪಾರಿಗಳು

**ತಲೆಹೊರೆ ವ್ಯಾಪಾರಿಗಳು:** ಇವರು ಸರಕುಗಳನ್ನು ತಲೆಯ ಮೇಲೆ ಹೊತ್ತು ಬೀದಿ ಬೀದಿಗಳಲ್ಲಿ ಸುತ್ತಿ ಮನೆ ಬಾಗಿಲುಗಳಿಗೆ ಬಂದು ಸರಕುಗಳನ್ನು ಮಾರುತ್ತಾರೆ. ಇವರು ಸಾಮಾನ್ಯವಾಗಿ ಒಂದೇ ರೀತಿಯ ಸರಕುಗಳನ್ನು ಮಾರುತ್ತಾರೆ. ಉದಾ: ತರಕಾರಿ ಮಾರುವವರು, ಹೂ ಮಾರುವವರು.



ತಲೆಹೊರೆ ವ್ಯಾಪಾರಿ



ತಳ್ಳುಗಾಡಿ ವ್ಯಾಪಾರಿ

**ತಳ್ಳುಗಾಡಿ ವ್ಯಾಪಾರಿಗಳು:** ಇವರು ಅನೇಕ ಸರಕುಗಳನ್ನು ತಳ್ಳು ಗಾಡಿಗಳಲ್ಲಿ ತುಂಬಿ ಬೀದಿ ಬೀದಿಗಳಲ್ಲಿ ಸುತ್ತಿ ಮನೆ ಬಾಗಿಲುಗಳಿಗೆ ಬಂದು ಸರಕುಗಳನ್ನು ಮಾರುತ್ತಾರೆ.

**ರಸ್ತೆ ಬದಿ ವ್ಯಾಪಾರಿಗಳು:** ಇವರು ಹೆಚ್ಚು ಜನಜಂಗುಳಿ ಇರುವ ಬೀದಿಗಳ ಮೂಲೆಗಳಲ್ಲಿ ಅಥವಾ ರಸ್ತೆ ಬದಿಗಳಲ್ಲಿ ತಮ್ಮ ಸರಕುಗಳನ್ನು ಹರಡಿಕೊಂಡು ವ್ಯಾಪಾರ ಮಾಡುತ್ತಾರೆ.



ರಸ್ತೆ ಬದಿ ವ್ಯಾಪಾರಿ

**ಸಂತೆ ವ್ಯಾಪಾರಿಗಳು:** ಕೆಲವು ಊರುಗಳಲ್ಲಿ ವಾರಕ್ಕೊಮ್ಮೆ ಸಂತೆ ನಡೆಯುತ್ತದೆ. ವಿವಿಧ ವಸ್ತುಗಳ ವ್ಯಾಪಾರಿಗಳು ತಮ್ಮ ವಸ್ತುಗಳನ್ನು ಸಂತೆಗಳಿಗೆ ಕೊಂಡೊಯ್ದು ಅಲ್ಲಿಗೆ ಬರುವ ಸುತ್ತ ಮುತ್ತಲಿನ ಗ್ರಾಮಗಳ ಜನರಿಗೆ ವಸ್ತುಗಳನ್ನು ಮಾರುತ್ತಾರೆ. ಇಲ್ಲಿನ ಮತ್ತೊಂದು ವೈಶಿಷ್ಟ್ಯವೇನೆಂದರೆ ಗ್ರಾಮಗಳ ಜನರು ತಾವು ಬೆಳೆದ ಅಥವಾ ಉತ್ಪಾದಿಸಿದ ವಸ್ತುಗಳನ್ನು ಸಂತೆಗಳಿಗೆ ಕೊಂಡೊಯ್ದು ಮಾರುತ್ತಾರೆ. ಉದಾ:– ತರಕಾರಿ, ಮೊಟ್ಟೆ, ಬೆಣ್ಣೆ, ತುಪ್ಪ, ಕಬ್ಬಿಣದ ಉಪಕರಣಗಳು, ಬುಟ್ಟಿಗಳು, ಕಂಬಳಿ ಮುಂತಾದವು. ಇವುಗಳಿಂದ ಬಂದ ಹಣದಿಂದ ತಮಗೆ ಬೇಕಾದ



ಸಂತೆ ವ್ಯಾಪಾರಿಗಳು

ವಸ್ತುಗಳನ್ನು ಕೊಳ್ಳುತ್ತಾರೆ. ಇದಲ್ಲದೆ ಕೆಲವು ಊರುಗಳಲ್ಲಿ ವರ್ಷಕ್ಕೊಮ್ಮೆ ಜಾತ್ರೆಗಳು ನಡೆಯುತ್ತವೆ. ಅಲ್ಲಿಯೂ ಕೂಡ ವಸ್ತುಗಳ ಮಾರಾಟಗಾರರು ಬಂದು ತಮ್ಮ ವಸ್ತುಗಳನ್ನು ಗ್ರಾಹಕರಿಗೆ ಮಾರುತ್ತಾರೆ.

**ಸಗಟು ವ್ಯಾಪಾರ: (Whole Sale Trade)** ಈ ವ್ಯಾಪಾರದಲ್ಲಿ ವ್ಯಾಪಾರಿಗಳು ಸರಕುಗಳನ್ನು ಹೆಚ್ಚು ಪ್ರಮಾಣದಲ್ಲಿ ಉತ್ಪಾದಕರಿಂದ ಕೊಂಡು, ಸಣ್ಣ ಪ್ರಮಾಣದಲ್ಲಿ ಚಿಲ್ಲರೆ ವ್ಯಾಪಾರಿಗಳಿಗೆ ಮಾರುತ್ತಾರೆ. ಸಗಟು ವ್ಯಾಪಾರಿಗಳು ಯಾವುದಾದರು ಒಂದು ಅಥವಾ ಎರಡು ಬಗೆಯ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಇವರು ಚಿಲ್ಲರೆ ವ್ಯಾಪಾರಿಗಳಿಗೆ ಅನೇಕ ರೀತಿಗಳಲ್ಲಿ ಸಹಾಯ ಮಾಡುತ್ತಾರೆ. ಸಣ್ಣ ಪ್ರಮಾಣದಲ್ಲಿ ಕಾಲಕಾಲಕ್ಕೆ ತಕ್ಕಂತೆ ಸರಕುಗಳನ್ನು ಒದಗಿಸುವುದೇ ಅಲ್ಲದೆ ಅವರಿಗೆ ಸಾಲ ಸೌಲಭ್ಯಗಳನ್ನು ಒದಗಿಸುತ್ತಾರೆ. ಅವರ ಪರವಾಗಿ ಜಾಹಿರಾತು ಮಾಡುತ್ತಾರೆ. ಮಾರುಕಟ್ಟೆಯ ವಿವರಗಳನ್ನು ಕೊಡುತ್ತಾರೆ. ಹೆಚ್ಚು ಲಾಭದ ಪ್ರಮಾಣ ಇಟ್ಟಿರುವುದಿಲ್ಲ. ಉತ್ಪಾದಕರಿಗೂ ಕೂಡ ಮಾರುಕಟ್ಟೆಯ ವಿವರಗಳನ್ನು, ಬೆಲೆಯ ಏರಿಳಿತಗಳನ್ನು, ಗ್ರಾಹಕರ ಇಷ್ಟಗಳನ್ನು ತಿಳಿಸುತ್ತಾರೆ. ಉತ್ಪಾದಕರ ಪರವಾಗಿಯೂ ಕೂಡ ಜಾಹಿರಾತು ಮಾಡುತ್ತಾರೆ ಮತ್ತು ಉತ್ಪಾದನಾ ವಸ್ತುಗಳನ್ನು ಶೇಖರಿಸಿಟ್ಟುಕೊಳ್ಳಲು ಸಹಾಯ ಮಾಡುತ್ತಾರೆ.

**ವಿದೇಶ ವ್ಯಾಪಾರ:** ಎರಡು ದೇಶಗಳ ನಡುವೆ ನಡೆಯುವ ವ್ಯಾಪಾರವನ್ನು ವಿದೇಶ ವ್ಯಾಪಾರವೆನ್ನುತ್ತೇವೆ. ವಿದೇಶಿ ವ್ಯಾಪಾರವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಯಾವುವೆಂದರೆ, ಆಮದು ರಫ್ತು ಮತ್ತು ಪುನರ್ ರಫ್ತು.

- **ಆಮದು:** ಒಂದು ದೇಶವು ತನ್ನ ಬಳಕೆಗಾಗಿ ಬೇರೆ ದೇಶಗಳಿಂದ ಸರಕುಗಳನ್ನು ಕೊಂಡರೆ ಅದನ್ನು ಆಮದು ಎನ್ನುತ್ತೇವೆ.
- **ರಫ್ತು:** ಒಂದು ದೇಶವು ಬೇರೆ ದೇಶಗಳಿಗೆ ಆ ದೇಶಗಳ ಬಳಕೆಗಾಗಿ ವಸ್ತುಗಳನ್ನು ಮಾರಿದರೆ ಅದನ್ನು ರಫ್ತು ಎನ್ನುತ್ತೇವೆ.
- **ಪುನರ್ ರಫ್ತು:** ಕೆಲವು ದೇಶಗಳು ಬೇರೆ ದೇಶಗಳಿಂದ ವಸ್ತುಗಳನ್ನು ಕೊಂಡು ಅವನ್ನು ಮತ್ತೊಂದು ದೇಶಕ್ಕೆ ಮಾರುತ್ತಾರೆ ಅದನ್ನು ಪುನರ್‌ರಫ್ತು ಎನ್ನುತ್ತೇವೆ. ಉದಾಃ- ಸಿಂಗಾಪುರ, ಮಧ್ಯ ಏಷ್ಯದ ಕೆಲವು ದೇಶಗಳು. ಇತ್ತೀಚೆಗೆ ಪ್ರಪಂಚದ ಅನೇಕ ದೇಶಗಳು ಈ ರೀತಿಯ ವ್ಯಾಪಾರ ಮಾಡುತ್ತಿವೆ.

**ವಿದೇಶಿ ವ್ಯಾಪಾರದ ಅವಶ್ಯಕತೆ**

ಪ್ರಪಂಚದ ಯಾವುದೇ ದೇಶವಾಗಲಿ ಎಲ್ಲ ಸಂಪನ್ಮೂಲಗಳಲ್ಲೂ ಸ್ವಯಂಪೂರ್ಣತೆ ಹೊಂದಿಲ್ಲ. ಕೆಲವು ದೇಶಗಳಲ್ಲಿ ಕೆಲವು ಸಂಪನ್ಮೂಲಗಳು ಹೇರಳವಾಗಿ ದೊರೆಯುತ್ತವೆ. ಆ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಕೆಲವೇ ವಸ್ತುಗಳನ್ನು ಅಧಿಕವಾಗಿ ಉತ್ಪಾದನೆ ಮಾಡುತ್ತಾರೆ. ದೇಶದ ಬೇಡಿಕೆಯು ಮುಗಿದ ಬಳಿಕ ಉಳಿದ ವಸ್ತುಗಳನ್ನು ಬೇರೆ ದೇಶಗಳಿಗೆ ರಫ್ತು ಮಾಡುತ್ತಾರೆ. ಹಾಗೆಯೇ ಯಾವ ದೇಶಗಳಲ್ಲಿ ಸಂಪನ್ಮೂಲಗಳ ಅಭಾವವಿದೆಯೋ ಆ ದೇಶಗಳು ತಮಗೆ ಅಭಾವವಿರುವ ವಸ್ತುಗಳನ್ನು ಬೇರೆ ದೇಶಗಳಿಂದ ಆಮದು ಮಾಡಿಕೊಳ್ಳುತ್ತಾರೆ. ಇದರಿಂದಾಗಿ ಪ್ರತಿದೇಶಕ್ಕೂ ವಿದೇಶ ವ್ಯಾಪಾರದ ಅವಶ್ಯಕತೆ ಇದೆ. ಹಾಗೂ ಇದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದು ಅವಶ್ಯಕತೆ ಪಡೆದಿದೆ. ವಿದೇಶ ವ್ಯಾಪಾರವು ದೇಶಗಳ ಪರಸ್ಪರ ಸೌಹಾರ್ದಯುತ ಸಂಬಂಧ ಸಹಾಯ ಮಾಡುತ್ತದೆ.

**ಕೈಗಾರಿಕೆ: (ಉದ್ಯಮಗಳು)** ಕೈಗಾರಿಕೆಯು ಒಂದು ಆರ್ಥಿಕ ಚಟುವಟಿಕೆಯಾಗಿದೆ. ಕೈಗಾರಿಕೆ ವಸ್ತುಗಳ ಉತ್ಪಾದನೆ, ಖನಿಜಗಳನ್ನು ತೆಗೆಯುವುದು ಮತ್ತು ಕೆಲವು ಸೇವೆಗಳನ್ನು ಒದಗಿಸುವ ಚಟುವಟಿಕೆಗಳನ್ನು ಹೊಂದಿದೆ. ಕೈಗಾರಿಕೆಗಳನ್ನು ಪ್ರಾಥಮಿಕ ಉದ್ಯಮಗಳು ಮತ್ತು ದ್ವಿತೀಯ ಉದ್ಯಮಗಳೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು. (ಕೈಗಾರಿಕೆಗಳನ್ನು ಉದ್ಯಮಗಳೆಂದೂ ಕರೆಯುತ್ತಾರೆ.)




**ಪ್ರಾಥಮಿಕ ಉದ್ಯಮಗಳು:** ಈ ಉದ್ಯಮಗಳು ನಿಸರ್ಗದ ನೆರವಿನಿಂದ ವಸ್ತುಗಳನ್ನು ಉತ್ಪಾದಿಸುತ್ತವೆ. ಉದಾ: ಕೃಷಿ, ಮೀನುಗಾರಿಕೆ, ಹೈನುಗಾರಿಕೆ, ಗಣಿಗಾರಿಕೆ ಮುಂತಾದವು. ಈ ಉದ್ಯಮಗಳನ್ನು ತಳಿವೈಜ್ಞಾನಿಕ (Genetic) ಮತ್ತು ಕಚ್ಚಾವಸ್ತುಗಳನ್ನು ಹೊರತೆಗೆಯುವ ಗಣಿ ಉದ್ಯಮಗಳೆಂದು ವಿಭಾಗಿಸಬಹುದು.

**(ಅ) ತಳಿ ವೈಜ್ಞಾನಿಕ ಉದ್ಯಮಗಳು:** ಈ ಉದ್ಯಮ ಕೆಲವು ವಿಧದ ಧಾನ್ಯಗಳು, ಸಸ್ಯಗಳು ಹಾಗೂ ಪ್ರಾಣಿಗಳ ಪುನರ್‌ಉತ್ಪಾದನೆಯಲ್ಲಿ ತೊಡಗಿರುತ್ತವೆ. ಇವುಗಳ ಮಾರಾಟದಿಂದ ಲಾಭಗಳಿಸುವ ಮೂಲಕ ಸಂಪತ್ತನ್ನು ವೃದ್ಧಿಗೊಳಿಸುತ್ತದೆ. ಉದಾಃ ತೋಟಗಾರಿಕೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ ಮುಂತಾದವು.

**(ಆ) ಗಣಿ ಉದ್ಯಮಗಳು:** ಈ ಉದ್ಯಮವು ಭೂಮಿಯ ಮೇಲ್ಮೆಯ ತಳದಿಂದ ವಿವಿಧ ರೂಪದ ಕಚ್ಚಾವಸ್ತುಗಳನ್ನು ಹೊರತೆಗೆಯುವುದರಲ್ಲಿ ನಿರತವಾಗಿರುತ್ತದೆ. (ಇದನ್ನು ಮುಗಿದುಹೋಗುವ ಉದ್ಯಮವೆಂದು ಕರೆಯುತ್ತಾರೆ.) ಉದಾಃ ವಿವಿಧ ಅದಿರುಗಳನ್ನು ಹೊರತೆಗೆಯುವುದು, ತೈಲ ಭಾವಿಗಳು ಮುಂತಾದವು.

**ದ್ವಿತೀಯ ಉದ್ಯಮಗಳು:** ಈ ಉದ್ಯಮಗಳು ಶ್ರಮ ಪ್ರಧಾನವಾಗಿದ್ದು ಮಾನವನ ಪಾತ್ರ ಮುಖ್ಯವಾಗಿರುತ್ತದೆ. ಈ ಉದ್ಯಮಗಳನ್ನು ಉತ್ಪಾದನಾ ಉದ್ಯಮಗಳು ಮತ್ತು ನಿರ್ವಹಣ ಉದ್ಯಮಗಳೆಂದು ವಿಭಾಗಿಸಬಹುದು.

**(ಅ) ಉತ್ಪಾದನ ಉದ್ಯಮಗಳು:** ಈ ಉದ್ಯಮಗಳು ಕಚ್ಚಾ ಪದಾರ್ಥಗಳನ್ನು ಅಥವಾ ತಯಾರಿಸಿದ ವಸ್ತುಗಳನ್ನು ಅಂತಿಮ ಉತ್ಪನ್ನವಾಗಿ ಪರಿವರ್ತಿಸುತ್ತವೆ. ಈ ಉದ್ಯಮಗಳು ಹೆಚ್ಚಾಗಿ ಮಾನವ ಶ್ರಮವನ್ನು ಬಳಸಿಕೊಳ್ಳುತ್ತವೆ ಹಾಗೂ ಗ್ರಾಹಕರ ಬಹುಪಾಲು ಅಗತ್ಯಗಳನ್ನು ಪೂರೈಸುತ್ತವೆ. ಉದಾಃ ಕಬ್ಬಿಣದ ಅದಿರನ್ನು ಉಕ್ಕಾಗಿ ಪರಿವರ್ತಿಸುವುದು, ಕಬ್ಬನ್ನು ಸಕ್ಕರೆಯಾಗಿ ಪರಿವರ್ತಿಸುವುದು ಇತ್ಯಾದಿ.......

**(ಆ) ನಿರ್ವಹಣೆ ಉದ್ಯಮಗಳು:** ಈ ಉದ್ಯಮಗಳು ರಸ್ತೆ, ಕಾಲುವೆ, ಸೇತುವೆ ಮುಂತಾದ ಮೂಲ ಸೌಕರ್ಯಗಳನ್ನು ನಿರ್ಮಿಸಲು ಶ್ರಮಿಸುತ್ತವೆ. ಇದರಿಂದ ಪ್ರಧಾನ ಆರ್ಥಿಕ ಚಟುವಟಿಕೆಗಳಾದ ಸಾರಿಗೆ ಸಂಪರ್ಕ ಇತ್ಯಾದಿಗಳು ತೀವ್ರ ಗತಿಯಲ್ಲಿ ಬೆಳವಣಿಗೆಯಾಗುತ್ತವೆ.

**ಗೃಹಕೈಗಾರಿಕೆಗಳು ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳು:**

ಗೃಹಕೈಗಾರಿಕೆಗಳನ್ನು ಗುಡಿಕೈಗಾರಿಕೆಗಳೆಂದೂ ಕರೆಯುತ್ತಾರೆ. ಇವುಗಳನ್ನು ಕುಶಲ ಕರ್ಮಿಗಳು ತಮ್ಮ ಮನೆಗಳಲ್ಲೇ ನಡೆಸುತ್ತಾರೆ. ಇವರಿಗೆ ತಮ್ಮ ಕುಟುಂಬದ ಇತರ ಸದಸ್ಯರು ಮತ್ತು ಕೆಲಸ ಕಲಿಯುವವರು (Apprentice) ಸಹಾಯ ಮಾಡುತ್ತಾರೆ. ಇವು ಪ್ರಧಾನವಾಗಿ ಹಳ್ಳಿಗಳಲ್ಲಿ ಕೇಂದ್ರೀಕೃತವಾಗಿರುತ್ತವೆ. ಈ ಕೈಗಾರಿಕೆಗಳು ಸಾಮಾನ್ಯವಾಗಿ ಸ್ಥಳೀಯ ಮಾರುಕಟ್ಟೆಗೆ ವಸ್ತುಗಳನ್ನು ಉತ್ಪಾದಿಸುತ್ತವೆ. ಈಕೈಗಾರಿಕೆಗಳಲ್ಲಿ ಉತ್ಪಾದನೆಯಾಗುವ ಕೆಲವು ವಸ್ತುಗಳೆಂದರೆ ಬಿದಿರಿನ ಬುಟ್ಟಿಗಳು, ಮರಮುಟ್ಟುಗಳು, ಚಾಪೆಗಳು, ಕಲ್ಲಿನ ಕೆತ್ತನೆಗಳು, ಕಮ್ಮಾರಿಕೆ, ಮಡಿಕೆಗಳನ್ನು ಮಾಡುವುದು ಮುಂತಾದವು.



ಗೃಹಕೈಗಾರಿಕೆಗಳು

**ಸಣ್ಣ ಪ್ರಮಾಣದ ಕೈಗಾರಿಕೆಗಳು:** ಒಂದು ನಿರ್ದಿಷ್ಟ ಕಟ್ಟಡಗಳಲ್ಲಿ ಸ್ಥಾಪಿತವಾಗಿರುತ್ತವೆ. ಕೂಲಿ ಕಾರ್ಮಿಕರನ್ನು ನೇಮಿಸಿಕೊಳ್ಳುತ್ತವೆ. ಕಚ್ಚಾ ವಸ್ತುಗಳನ್ನು ಸಂಗ್ರಹಿಸಿ ಸಣ್ಣ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸುತ್ತವೆ. ಸಣ್ಣ ಯಂತ್ರಗಳನ್ನು ಮತ್ತು ವಿದ್ಯುಚ್ಛಕ್ತಿಯನ್ನು ಬಳಸುತ್ತವೆ. ಇಲ್ಲಿ ಉತ್ಪಾದನೆಯಾಗುವ ವಸ್ತುಗಳು ಸ್ಥಳೀಯ ಮಾರುಕಟ್ಟೆಗೆ ಅಲ್ಲದೆ ವಿದೇಶ ಮಾರುಕಟ್ಟೆಗಳಿಗೂ ಸರಬರಾಜಾಗುತ್ತವೆ. ಇಲ್ಲಿ ಉತ್ಪಾದನೆಯಾಗುವ ಕೆಲವು ವಸ್ತುಗಳಿಗೆ ಉದಾಹರಣೆಗಳೆಂದರೆ ರಾಸಾಯನಿಕ ವಸ್ತುಗಳು, ಇಂಜಿನಿಯರಿಂಗ್ ವಸ್ತುಗಳು, ಪಾದರಕ್ಷೆಗಳು, ಬೈಸಿಕಲ್ಲುಗಳು, ರೇಡಿಯೋ, ಹೊಲಿಗೆಯಂತ್ರಗಳು ಮುಂತಾದವು.



**ವ್ಯವಹಾರದ ಸುಗಮ ನಿರ್ವಹಣೆಗೆ ಸೇವೆಗಳು:** ವ್ಯವಹಾರವು ಸುಗಮವಾಗಿ ನಡೆಯಲು ವ್ಯಾಪಾರ ಪೂರಕ ಸೇವೆಗಳು ರೂಢಿಗೆ ಬಂದವು. ಇವುಗಳನ್ನು ವಾಣಿಜ್ಯ ಸಾಧನಗಳೆಂದು ಅಥವಾ ವಾಣಿಜ್ಯದ ಸೇವೆಗಳೆಂದೂ ಕರೆಯುತ್ತಾರೆ. ಸರಕುಗಳನ್ನು ಉತ್ಪಾದಕ ಸ್ಥಳಗಳಿಂದ ಗ್ರಾಹಕರಿಗೆ ದೊರೆಯುವಂತಾಗಲು ಕೆಲವು ಅಡಚಣೆಗಳಿವೆ. ಅವುಗಳಲ್ಲಿ ಮುಖ್ಯವಾದುವೆಂದರೆ ಸ್ಥಳದ ಅಡಚಣೆ, ನಷ್ಟಭಯದ ಅಡಚಣೆ, ಸಮಯದ ಅಭಾವ, ಹಣಕಾಸಿನ ಕೊರತೆ, ತಿಳುವಳಿಕೆಯ ಅಭಾವ ಮುಂತಾದವು. ಈ ಅಡಚಣೆಗಳ ನಿವಾರಣೆಗೆ ಕೆಲವು ಸೇವೆಗಳು ಸೌಕರ್ಯ ಕಲ್ಪಿಸುತ್ತವೆ. ಇವುಗಳನ್ನು ವ್ಯಾಪಾರದ ಪೂರಕಗಳೆಂದು ಕರೆಯುತ್ತಾರೆ.

**ಸ್ಥಳದ ಅಡಚಣೆ – ಸಾರಿಗೆ:** ಸ್ಥಳದ ಅಡಚಣೆಯನ್ನು ನಿವಾರಿಸಲು ಸಾಗಾಟದ ವ್ಯವಸ್ಥೆಯ ಸಾರಿಗೆ ಸೇವೆಗಳನ್ನು ಬಳಸಲಾಗುತ್ತದೆ. ರಸ್ತೆಸಾರಿಗೆ, ರೈಲುಸಾರಿಗೆ, ಜಲಸಾರಿಗೆ ಮತ್ತು ವಾಯುಸಾರಿಗೆ ಸಾಗಾಟದ ಬೇರೆ ಬೇರೆ ಮಾಧ್ಯಮಗಳಾಗಿವೆ. ಈ ಮಾಧ್ಯಮಗಳು ಉತ್ಪಾದಕರಿಂದ ವ್ಯಾಪಾರಿಗಳಿಗೆ ಹಾಗೂ ವ್ಯಾಪಾರಿಗಳಿಂದ ಗ್ರಾಹಕರಿಗೆ ಉತ್ಪಾದಿಸಿದ ವಸ್ತುಗಳನ್ನು ವಿತರಣೆ ಮಾಡಲು ಸಹಾಯ ಮಾಡುತ್ತದೆ.

**ಹಣಕಾಸಿನ ಸೇವೆ ಬ್ಯಾಂಕುಗಳು:** ಉತ್ಪಾದಕರಿಂದ ಅನುಭೋಗಿಗಳಿಗೆ ಸರಕುಗಳನ್ನು ವಿತರಣೆ ಮಾಡುವ ಕಾರ್ಯದಲ್ಲಿ ಹಣಕಾಸಿನ ಸಮಸ್ಯೆ ಉಂಟಾಗುತ್ತದೆ. ಹಣಕಾಸಿನ ಪೂರೈಕೆ ಎಲ್ಲ ಹಂತಗಳಿಗೂ ಅತ್ಯಾವಶ್ಯಕವಾಗಿದೆ. ಸರಕುಗಳನ್ನು ಹಣಕ್ಕೆ ವಿನಿಮಯ ಮಾಡಿಕೊಳ್ಳಲು ಸಹ ಹಣದ ಮಾಧ್ಯಮ ಅವಶ್ಯಕವಾಗಿದೆ. ಈ ಸಮಸ್ಯೆಗಳು ಬ್ಯಾಂಕುಗಳು ಮತ್ತು ಮತ್ತಿತರ ಹಣಕಾಸು ಸಂಸ್ಥೆಗಳಿಂದ ನಿವಾರಣೆಯಾಗುತ್ತವೆ. ಬ್ಯಾಂಕುಗಳು ವ್ಯಾಪಾರಿಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಹಣಕಾಸಿನ ಸೌಲಭ್ಯ ಒದಗಿಸುತ್ತಾರೆ ಮತ್ತು ವ್ಯವಹಾರ ಸುಗಮವಾಗಿ ನಡೆಯುವಂತೆ ಸೇವೆ ಸಲ್ಲಿಸುತ್ತವೆ.

**ನಷ್ಟದ ಭಯ – ವಿಮಾ ಕಂಪನಿಗಳು:** ಸರಕುಗಳನ್ನು ಉತ್ಪಾದಕರಿಂದ ಅನುಭೋಗಿಗಳಿಗೆ ಸಾಗಿಸುವಾಗ ಅಥವಾ ಅವುಗಳನ್ನು ಉಗ್ರಾಣಗಳಲ್ಲಿ ಶೇಖರಿಸಿಟ್ಟಾಗ ಅವು ನಾಶ ಹೊಂದುವುದು, ಹಾನಿಗೊಳಗಾಗುವುದು ಅಥವಾ ಗುಣಮಟ್ಟದಲ್ಲಿ ಕ್ಷೀಣತೆ ಮುಂತಾದ ಅನೇಕ ಅಪಾಯಗಳಿಗೊಳಗಾಗುತ್ತವೆ. ಈ ನಷ್ಟದ ತೊಡಕುಗಳನ್ನು ನಿವಾರಿಸಲು ವಿಮಾ ಸೌಲಭ್ಯಗಳಿವೆ. ಇವುಗಳಲ್ಲಿ ಮುಖ್ಯವಾದುವು. ಅಗ್ನಿವಿಮೆ ಮತ್ತು ಜಲವಿಮೆ. ಈ ರೀತಿಯಲ್ಲಿ ವಿಮಾ ಕಂಪನಿಗಳು ವ್ಯಾಪಾರ ಸುಗಮ ರೀತಿಯಲ್ಲಿ ನಡೆಯಲು ಸೇವೆಗಳನ್ನು ಸಲ್ಲಿಸುತ್ತವೆ.

**ಸಮಯದ ಅಡಚಣೆ – ಶೇಖರಣೆ:** ಸರಕುಗಳ ಉತ್ಪಾದನೆ ಮತ್ತು ಅನುಭೋಗ ಬೇರೆ ಬೇರೆ ಸಮಯಗಳಲ್ಲಾಗುತ್ತವೆ. ಆದರೆ ಇವುಗಳನ್ನು ಕಾಲ ಕಾಲಕ್ಕೆ ಅನುಭೋಗಿಗಳಿಗೆ ಒದಗಿಸಲು ಶೇಖರಿಸಿಡಬೇಕಾಗುತ್ತದೆ. ಇದಕ್ಕಾಗಿ ಉಗ್ರಾಣ ವ್ಯವಸ್ಥೆ ಸೇವೆ ಒದಗಿಸುತ್ತವೆ. ಈ ಉಗ್ರಾಣಗಳು ವೈಜ್ಞಾನಿಕ ರೀತಿಯಲ್ಲಿ ನಿರ್ಮಾಣವಾಗಿರುತ್ತವೆ. ಕೆಲವು ಉಗ್ರಾಣಗಳಲ್ಲಿ ಶೈತ್ಯಾಗಾರದ ವ್ಯವಸ್ಥೆಯು ಇರುತ್ತದೆ.

**ಜ್ಞಾನದ ಕೊರತೆ – ಜಾಹಿರಾತು:** ಉತ್ಪಾದಕರಿಂದ ಅನುಭೋಗಿಗಳಿಗೆ ಸರಕುಗಳನ್ನು ವಿತರಣೆ ಮಾಡುವ ಸಂದರ್ಭದಲ್ಲಿ ಅನೇಕ ವೇಳೆ ಸರಕುಗಳ ಬಗ್ಗೆ ಜ್ಞಾನ ಅಥವ ತಿಳುವಳಿಕೆ ಕೊಡಬೇಕಾಗುತ್ತದೆ. ಹೊಸ ಹೊಸ ಸರಕುಗಳ ಉತ್ಪಾದನೆಯಲ್ಲಿ ಅಥವಾ ಪರ್ಯಾಯ ವಸ್ತುಗಳನ್ನು ಉಪಯೋಗಿಸಬಹುದಾದ ಸಂದರ್ಭಗಳಲ್ಲೂ ಜಾಹಿರಾತು ಸೇ ಜ್ಞಾನ ಅಥವಾ ತಿಳುವಳಿಕೆ ಕೊಟ್ಟು ವ್ಯಾಪಾರಕ್ಕೆ ಸೇವೆ ಮಾಡುವ ಒಂದು ಅಂಗವಾಗಿದೆ.

## ವ್ಯವಹಾರದ ನೀತಿತತ್ವಗಳು (Business Ethics)

ಸಾಮಾನ್ಯವಾಗಿ ವ್ಯಾಪಾರ ಮತ್ತು ವಾಣಿಜ್ಯದ ಮುಖ್ಯ ಉದ್ದೇಶ ಲಾಭಗಳಿಕೆಯಾಗಿದೆ ಎಂದು ತಿಳಿದಿದ್ದೇವೆ. ಆದರೆ ಈ ಗ್ರಹಿಕೆ ಸರಿಯಲ್ಲ. ವ್ಯವಹಾರದ ಮುಖ್ಯ ಉದ್ದೇಶ ವ್ಯವಹಾರ ನಡೆಸಲು ಸಮಂಜಸವಾದ ಮತ್ತು ನ್ಯಾಯಯುಕ್ತ ಲಾಭಗಳಿಕೆ ಆಗಿರಬೇಕು. ಇವುಗಳು ಬಹಳ ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿರುವ ವೃತ್ತಿಗಳಾಗಿವೆ. ಇವು ಗ್ರಾಹಕರಿಗೆ ವಸ್ತುಗಳನ್ನು ಮತ್ತು ಸೇವೆಗಳನ್ನು ಒದಗಿಸುತ್ತವೆ. ವ್ಯಾಪಾರಗಾರರು ತಮ್ಮ ವ್ಯವಹಾರ ನಡೆಸಲು ಸಾಕಾಗುವಷ್ಟು ಲಾಭ ಮಾತ್ರ ಇಟ್ಟುಕೊಳ್ಳಬೇಕು. ಹೀಗೆ ಮಾಡುವುದರಿಂದ ವ್ಯವಹಾರ 'ವೃತ್ತಿಧರ್ಮ' ಪಾಲಿಸಿದಂತಾಗುತ್ತದೆ. ಸಮಾಜಕ್ಕೆ ತಮ್ಮ ಸೇವೆ ಮಾಡಿದಂತಾಗುತ್ತದೆ. ಆದರೆ ಇಂದು ಹಣಗಳಿಕೆಗಾಗಿ ಲಾಭಕೋರತನ ವ್ಯವಹಾರದೊಳಕ್ಕೆ ಹೊಕ್ಕಿದೆ. ಕೆಲವು ವ್ಯಾಪಾರಗಾರರು ಅಹಿತಕರ ವ್ಯವಹಾರ ಪದ್ಧತಿಗಳನ್ನು ಅನುಸರಿಸುತ್ತಾರೆ. ಈ ಅಹಿತಕರ ಪದ್ಧತಿಗಳಲ್ಲಿ ಮುಖ್ಯವಾದುವು ವಸ್ತುಗಳ ಕಲಬೆರಿಕೆ, ಹೆಚ್ಚು ಲಾಭ, ತೂಕ ಮತ್ತು ಅಳತೆಗಳಲ್ಲಿ

ಮೋಸ, ಅಕ್ರಮ ದಾಸ್ತಾನು ಮಾಡಿ ಕೃತಕ ಅಭಾವ ಪರಿಸ್ಥಿತಿ ಏರ್ಪಡಿಸುವುದು, ಕಾಳ ಸಂತೆ (Black Marketing) ಯಲ್ಲಿ ವಸ್ತುಗಳನ್ನು ಮಾರುವುದು ಮುಂತಾದುವು. ಈ ವಿಧಾನಗಳಿಂದ ಗ್ರಾಹಕರಿಗೆ ಅನೇಕ ತೊಂದರೆಗಳುಂಟಾಗುತ್ತವೆ. ವ್ಯಾಪಾರದಲ್ಲಿ ಈ ರೀತಿಯ ಮೋಸ ವಿಧಾನಗಳನ್ನು ಅನುಸರಿಸದೆ ವ್ಯಾಪಾರ ನೀತಿ ತತ್ವಗಳನ್ನು ಅನುಸರಿಸಬೇಕು. ಸಮಾಜದ ಹಿತವೇ ತಮ್ಮ ಹಿತವೆಂದು ಭಾವಿಸಬೇಕು.

ನಮ್ಮ ದೇಶದಲ್ಲಿ ಈ ಅನಿಷ್ಟ ಪದ್ಧತಿಗಳನ್ನು ದೂರ ಮಾಡಲು ಸರ್ಕಾರ ಸಾರ್ವಜನಿಕ ವಿತರಣಾ ಪದ್ಧತಿಯನ್ನು ರೂಢಿಗೆ ತಂದಿದೆ. ಅಗತ್ಯ ವಸ್ತುಗಳ ಸರಬರಾಜಿನ ಬಗ್ಗೆ ಕಾನೂನನ್ನು ರಚಿಸಿದೆ. ಕೈಗಾರಿಕಾ ವಸ್ತುಗಳ ಮೇಲಿನ ಕಾನೂನಿನ ಪ್ರಕಾರ ಪ್ರತಿ ಉತ್ಪಾದನಾ ವಸ್ತುಗಳ ಪೊಟ್ಟಣಗಳ ಮೇಲೆ ಉತ್ಪಾದನಾ ತಾರೀಖು ಬಳಕೆಯ ದಿನ ಮಿತಿ (Date of Expiry) ತೂಕ ಅಥವಾ ಅಳತೆ ಮತ್ತು ಗರಿಷ್ಠ ಬೆಲೆಯನ್ನು ಮುದ್ರಿಸಬೇಕು. ಪದಾರ್ಥಗಳ ಗುಣಮಟ್ಟ ಕಾಪಾಡಲು ಭಾರತೀಯ ಮಾನಕ ಸಂಸ್ಥೆ (Bureau of Indian Standarads) ಯನ್ನು ಸ್ಥಾಪಿಸಿದೆ. ಈ ಸಂಸ್ಥೆ ಪದಾರ್ಥಗಳ ಗುಣಮಟ್ಟ ಪರೀಕ್ಷಿಸಿ ಗುಣಮಟ್ಟ ಸರಿಯಾಗಿರುವ ವಸ್ತುಗಳ ಮೇಲೆ (ISI) ಚಿನ್ಹೆ ಮುದ್ರಿಸುತ್ತವೆ. ವ್ಯವಸಾಯ ಉತ್ಪನ್ನ ವಸ್ತುಗಳ ಮೇಲೆ ಗುಣಮಟ್ಟ ತಿಳಿಯಲು ಅಗ್‌ಮಾರ್ಕ್ ಚಿನ್ಹೆ ಮುದ್ರಿಸುವುದನ್ನು ಕಡ್ಡಾಯಗೊಳಿಸಲಾಗಿದೆ. ಸರ್ಕಾರ ಅಗತ್ಯ ವಸ್ತುಗಳನ್ನು ಒದಗಿಸಲು ಗ್ರಾಹಕರ ಸಹಕಾರಿ ಸಂಘಗಳನ್ನು, ಜನತಾ ಬಜಾರುಗಳನ್ನು ಸ್ಥಾಪಿಸಿದೆ. ಏನೆಲ್ಲ ಕ್ರಮಗಳನ್ನು ಕೈಗೊಂಡರೂ ವ್ಯಾಪಾರಿಗಳಲ್ಲಿ ಸಮಾಜದ ಹಿತದೃಷ್ಟಿಯಿಂದ "ವೃತ್ತಿಧರ್ಮ"ದ ಆಚರಣೆ ಇಲ್ಲವಾದಲ್ಲಿ ವ್ಯಾಪಾರವು ದ್ರೋಹ ಅಥವಾ ಮೋಸದ ಚಿಂತನೆಯಾಗುತ್ತದೆ. ಇದು ಒತ್ತಾಯದಿಂದ ಬರುವಂತಹದಲ್ಲ, ಆತ್ಮವಿಶ್ವಾಸದಿಂದ ಬರಬೇಕಾಗುತ್ತದೆ. ವ್ಯಾಪಾರವು ದ್ರೋಹದ ಚಿಂತನೆ ಆಗಬಾರದು. ವ್ಯಾಪಾರವು ಸಾರ್ವಜನಿಕ ಹಿತದೃಷ್ಟಿಯಿಂದ ನಡೆಯಬೇಕು.

## ಅಭ್ಯಾಸಗಳು

**I ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಜಾಗಗಳನ್ನು ಸರಿಯಾದ ಪದಗಳಿಂದ ತುಂಬಿರಿ.**

1 ಪುನರ್ ರಫ್ತು ವ್ಯಾಪಾರಕ್ಕೆ ———— ಪಟ್ಟಣವು ಒಂದು ಮುಖ್ಯ ನಿದರ್ಶನವಾಗಿದೆ.

2 ಗೃಹ ಕೈಗಾರಿಕೆಗಳು ಸಾಮಾನ್ಯವಾಗಿ ———— ಗಳಲ್ಲಿ ಕೇಂದ್ರಿಕೃತವಾಗಿರುತ್ತವೆ.

3 ರಾಸಾಯನಿಕ ವಸ್ತುಗಳ ತಯಾರಿಕೆ ಸಾಮಾನ್ಯವಾಗಿ ———— ಕೈಗಾರಿಕೆಗಳಲ್ಲಿ ಆಗುತ್ತದೆ.

4 ವ್ಯಾಪಾರದ ಮುಖ್ಯ ಉದ್ದೇಶ ———— ಲಾಭಗಳಿಸುವುದಾಗಿರಬೇಕು.

5 ಪದಾರ್ಥಗಳ ಗುಣಮಟ್ಟ ಕಾಪಾಡಲು ———— ಸಂಸ್ಥೆಯನ್ನು ಸ್ಥಾಪಿಸಲಾಗಿದೆ.

**II ಈ ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ಎರಡರಿಂದ ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1 ಸಂಚಾರಿ ಅಂಗಡಿಗಳ ವಿವಿಧ ವಿಧಗಳಾವುವು?

2 ಸಗಟು ವ್ಯಾಪಾರಿಗಳೆಂದರೆ ಯಾರು?

3 ವಿದೇಶ ವ್ಯಾಪಾರದ ಮೂರು ವಿಧಗಳನ್ನು ತಿಳಿಸಿ.

4 ಗೃಹ ಕೈಗಾರಿಕೆಗಳು ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳು ಉತ್ಪಾದಿಸುವ ವಸ್ತುಗಳನ್ನು ತಿಳಿಸಿ.

5 ಸ್ಥಳದ ಅಭಾವ ಮತ್ತು ನಷ್ಟ ಭಯ ನಿವಾರಿಸಲು ಸ್ಥಾಪಿತವಾಗಿರುವ ಸೇವೆಗಳಾವುವು?

6 ಲಾಭದ ಆಸೆಯಿಂದ ಕೆಲವು ವ್ಯಾಪಾರಗಾರರು ಕೆಲವು ಅಹಿತಕರ ಪದ್ದತಿಗಳನ್ನು ಅನುಸರಿಸುತ್ತಾರೆ. ಇವು ಯಾವುವು?

7 ಲಾಭದ ಆಸೆಯಿಂದ ಕೆಲವು ವ್ಯಾಪಾರಗಾರರು ಅಹಿತಕರ ಪದ್ಧತಿಗಳನ್ನು ಅನುಸರಿಸುತ್ತಾರೆ. ಇವುಗಳನ್ನು ತಪ್ಪಿಸಲು ಕೈಗೊಂಡಿರುವ ಕ್ರಮಗಳಾವುವು.

**III ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೆ ಎಂಟರಿಂದ ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1 ವ್ಯವಹಾರದ ಆರ್ಥಿಕ ಉದ್ದೇಶಗಳೇನು?

2 ವ್ಯವಹಾರದ ಸಾಮಾಜಿಕ ಉದ್ದೇಶಗಳೇನು?

3 ಚಿಲ್ಲರೆ ವ್ಯಾಪಾರಿಗಳಿಂದಾಗುವ ಸೇವೆಗಳನ್ನು ತಿಳಿಸಿ.

4 ವಿವಿಧ ರೀತಿಯ ಚಿಲ್ಲರೆ ವ್ಯಾಪಾರಿಗಳನ್ನು ಪಟ್ಟಿ ಮಾಡಿ ಪ್ರತಿಯೊಂದಕ್ಕೂ ಒಂದೆರಡು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

5 ಉದ್ಯಮಗಳು ಅಥವಾ ಕೈಗಾರಿಕೆಗಳ ಎರಡು ವಿಧಗಳನ್ನು ಸ್ಥೂಲವಾಗಿ ಪರಿಚಯಿಸಿ.

6 ಒಂದು ದೇಶಕ್ಕೆ ವಿದೇಶಿ ವ್ಯಾಪಾರದ ಅವಶ್ಯಕತೆಯನ್ನು ಕುರಿತು ವಿವರಿಸಿ.

**IV ಚಟುವಟಿಕೆ.**

ನಿಮ್ಮ ಸ್ಥಳದ ಹತ್ತಿರದ ಯಾವುದಾದರೂ ಸಂತೆ ಅಥವಾ ಜಾತ್ರೆಗೆ ಭೇಟಿಕೊಡಿ. ಅಲ್ಲಿ ನಡೆಯುವ ವ್ಯವಹಾರಗಳ ಬಗ್ಗೆ ಅರ್ಥೈಸಿಕೊಂಡು ಒಂದು ಪ್ರಬಂಧವನ್ನು ಬರೆಯಿರಿ?



ಅಧ್ಯಾಯ–3

# ವಿವಿಧ ವ್ಯವಹಾರ ಸಂಘಟನೆಗಳ ಉದ್ಭವ (ಉಗಮ)

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ವ್ಯವಹಾರ ಸಂಘಟನೆಗಳ ವಿಧಗಳನ್ನು ಪರಿಚಯಿಸಿಕೊಳ್ಳುವುದು.
- ಪಾಲುಗಾರಿಕೆ ವ್ಯವಹಾರ ಸಂಸ್ಥೆಗಳ ಸ್ವರೂಪ ವಿಧಗಳು ಮತ್ತು ಅನುಕೂಲ, ಅನನುಕೂಲಗಳ ಬಗ್ಗೆ ತಿಳಿಯುವುದು.
- ಪಾಲುಗಾರಿಕೆ ಸಂಸ್ಥೆಗಳ ನೋಂದಣಿಯ ಕ್ರಮವನ್ನು ಅರ್ಥೈಸಿಕೊಳ್ಳುವುದು.
- ಭಾರತದಲ್ಲಿ ಹಿಂದೂ ಅವಿಭಕ್ತ ವ್ಯವಹಾರ ಕುಟುಂಬಗಳ ಬಗ್ಗೆ ಪರಿಚಯಿಸಿಕೊಳ್ಳುವುದು.

ಇಂದು ನಾವು ವಿವಿಧ ರೀತಿಯ ವ್ಯವಹಾರ ಸಂಘಟನೆಗಳನ್ನು ಕಾಣುತ್ತೇವೆ. ಅವುಗಳನ್ನು ನಾಲ್ಕು ವಿಧಗಳಾಗಿ ವಿಂಗಡಿಸಬಹುದು. ಯಾವುವೆಂದರೆ:

1. ಖಾಸಗಿ ರಂಗದ ವ್ಯವಹಾರ ಸಂಘಟನೆಗಳು (Private sector Business organisations)
2. ಸಾರ್ವಜನಿಕ ರಂಗದ ವ್ಯವಹಾರ ಸಂಘಟನೆಗಳು (Public sector Business organisations)
3. ಜಂಟಿ ರಂಗದ ವ್ಯವಹಾರ ಉದ್ಯಮಗಳು (Joint Sector Business organisations)
4. ಸರ್ಕಾರಿ ಸ್ವಾಮ್ಯದ ವ್ಯವಹಾರ ಉದ್ಯಮಗಳು (Public Utilities)

ಈ ಅಧ್ಯಾಯ ಮತ್ತು ಮುಂದಿನ ಅಧ್ಯಾಯದಲ್ಲಿ ಖಾಸಗಿ ರಂಗದ ಸಂಘಟನೆಗಳ ಎರಡು ಮುಖ್ಯ ವಿಧಗಳಾದ ಸಣ್ಣ ಪ್ರಮಾಣದ ಸಂಘಟನೆಗಳು ಮತ್ತು ದೊಡ್ಡ ಪ್ರಮಾಣದ ಸಂಘಟನೆಗಳ ಬಗ್ಗೆ ಸಂಕ್ಷಿಪ್ತ ಪರಿಚಯ ಮಾಡಿಕೊಳ್ಳೋಣ.

ಸಣ್ಣ ಪ್ರಮಾಣದ ಸಂಘಟನೆಗಳಲ್ಲಿ ಮುಖ್ಯವಾದುವು:

- ಏಕವ್ಯಕ್ತಿ ಮಾಲೀಕತ್ವದ ಸಂಸ್ಥೆಗಳು (Sole Trading Concerns)
- ಪಾಲುಗಾರಿಕೆ ಸಂಸ್ಥೆಗಳು (Partnership Firms)
- ಹಿಂದೂ ಅವಿಭಕ್ತ ಕುಟುಂಬ ಸಂಸ್ಥೆಗಳು (Hindu undivided Family Firms)

**ಏಕವ್ಯಕ್ತಿ ಮಾಲೀಕತ್ವದ ಸಂಸ್ಥೆಗಳು:**

ಇವು ಒಬ್ಬನೇ ವ್ಯಕ್ತಿಯಿಂದ ನಡೆಸಲ್ಪಡುತ್ತವೆ. ಆತನೇ ಮಾಲೀಕ, ನಿಯಂತ್ರಕ, ನಷ್ಟಭರಿಸುವವನು ಮತ್ತು ಬಂಡವಾಳ ಹೂಡಿರುವವನು ಆಗಿರುತ್ತಾನೆ.

**ಲಕ್ಷಣಗಳು:** ಇವು ಬಹಳ ಹಿಂದಿನ ಕಾಲದಿಂದಲೂ ರೂಢಿಯಲ್ಲಿರುವ ವ್ಯವಹಾರ ಸಂಸ್ಥೆಗಳಾಗಿವೆ. ಇವುಗಳನ್ನು ಸುಲಭವಾಗಿ ಸ್ಥಾಪಿಸಬಹುದು. ಇವುಗಳ ಮಾಲೀಕತ್ವ ಒಬ್ಬನೇ ವ್ಯಕ್ತಿಗೆ ಸೇರಿರುತ್ತದೆ. ಇವು ಮಾಲೀಕನ ಲಾಭಕ್ಕಾಗಿ ನಿರ್ವಹಿಸಲ್ಪಡುತ್ತವೆ. ಇವುಗಳ ಮಾಲೀಕರು ತಮ್ಮ ಸ್ವಂತ ಬಂಡವಾಳವನ್ನು ಹೂಡಿ, ಸ್ವಂತ ಕೌಶಲ್ಯಗಳನ್ನು ಉಪಯೋಗಿಸಿ ವ್ಯವಹಾರ ನಡೆಸುತ್ತಾರೆ. ಇವುಗಳನ್ನು ಪ್ರಾರಂಭಿಸುವುದಕ್ಕಾಗಲಿ ಅಥವಾ ಮುಚ್ಚುವುದಕ್ಕಾಗಲೀ ಯಾವುದೇ ಕಾನೂನಿನ ನಿಬಂಧನೆಗಳಿರುವುದಿಲ್ಲ. ಇವುಗಳ ಮಾಲೀಕರು ವ್ಯವಹಾರಗಳಲ್ಲಿ ಉಂಟಾಗುವ ಎಲ್ಲ ನಷ್ಟಗಳಿಗೂ ಹೊಣೆಗಾರರಾಗಿರುತ್ತಾರೆ. ಇವರು ತಮ್ಮ ಕುಟುಂಬದ ಸದಸ್ಯರ ಸಹಾಯವನ್ನು ಪಡೆದುಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ತಮ್ಮ ಸಹಾಯಕ್ಕಾಗಿ ಕೆಲಸಗಾರರನ್ನು ನೇಮಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಇವು ಸಣ್ಣ ಪ್ರಮಾಣದಲ್ಲಿರುತ್ತವೆ. ಆದರೆ ಇತ್ತೀಚಿನ ದಿನಗಳಲ್ಲಿ ದೊಡ್ಡ ಪ್ರಮಾಣದಲ್ಲೂ ಈ ವ್ಯವಹಾರ ಸಂಸ್ಥೆಗಳು ಸಂಘಟಿತವಾಗಿರುತ್ತವೆ.

**ಏಕವ್ಯಕ್ತಿ ಮಾಲೀಕತ್ವ ವ್ಯವಹಾರ ಸಂಸ್ಥೆಗಳ ಅನುಕೂಲಗಳು:** ಇವುಗಳನ್ನು ಪ್ರಾರಂಭಿಸಲು ಯಾವುದೇ ಕಾನೂನಿನ ಕಟ್ಟಲೆಗಳ ಅವಶ್ಯಕತೆ ಬೇಕಾಗಿಲ್ಲ. ಸ್ವಂತ ಬಂಡವಾಳದಿಂದಲೇ ಪ್ರಾರಂಭಿಸಬಹುದು. ದಿನ ವಹಿವಾಟುಗಳನ್ನು ನಡೆಸುವುದು ಅಷ್ಟೇನು ಕಷ್ಟವಲ್ಲ. ಸಂಸ್ಥೆ ಗಳಿಸಿದ ಎಲ್ಲ ಲಾಭಗಳನ್ನು ಏಕವ್ಯಕ್ತಿ ಮಾಲೀಕರೆ ಅನುಭವಿಸುತ್ತಾರೆ. ವ್ಯಾಪಾರದ ಮೇಲ್ವಿಚಾರಣೆ ಸ್ವತ: ತಾವೇ ನೋಡಿಕೊಳ್ಳುತ್ತಾರೆ. ಇವರು ಗ್ರಾಹಕರ ಜೊತೆಯಲ್ಲಿ ನೇರ ಸಂಪರ್ಕ ಇಟ್ಟುಕೊಂಡಿರುತ್ತಾರೆ. ಅನೇಕ ಸಾಮಾಜಿಕ ಸೇವೆಗಳನ್ನು ಮಾಡುತ್ತಾರೆ. ಅವುಗಳಲ್ಲಿ ಮುಖ್ಯವಾದುವುವೆಂದರೆ, ಕೆಲವರಿಗೆ ಉದ್ಯೋಗಾವಕಾಶ ಕಲ್ಪಿಸುತ್ತಾರೆ. ಸಂಪತ್ತು ಹಾಗೂ ಆರ್ಥಿಕ ಅಧಿಕಾರ ಶಕ್ತಿಗಳನ್ನು ಹಂಚಲು ಸಹಾಯ ಮಾಡುತ್ತಾರೆ. ಗ್ರಾಹಕರಿಗೆ ಬೇಕಾದ ದೈನಂದಿನ ಇಷ್ಟಗಳನ್ನು ಅರಿತು ವಸ್ತುಗಳನ್ನು ಸರಬರಾಜು ಮಾಡುತ್ತಾರೆ. ಸರ್ಕಾರಕ್ಕೆ ಸಕಾಲದಲ್ಲಿ ತೆರಿಗೆಗಳನ್ನು ಪಾವತಿ ಮಾಡುತ್ತಾರೆ. ಶೀಘ್ರ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆ ಮತ್ತು ವ್ಯವಹಾರದ ಗುಟ್ಟನ್ನು ಕಾಪಾಡಿಕೊಳ್ಳಬಹುದು ಹಾಗೂ ತನ್ನ ಆಲೋಚನೆಗೆ ಬಂದ ಹೊಸ ಕಲ್ಪನೆಗಳನ್ನು ಸಂಪೂರ್ಣವಾಗಿ ಕಾರ್ಯಗತಗೊಳಿಸಬಹುದು.

**ಏಕವ್ಯಕ್ತಿ ಮಾಲೀಕತ್ವ ವ್ಯವಹಾರ ಸಂಸ್ಥೆಗಳ ದೋಷಗಳು:** ಈ ಸಂಸ್ಥೆಗಳು ಕೆಲವು ಪರಿಮಿತಿಗಳಿಂದ ದೂರವಾಗಿಲ್ಲ. ಅವುಗಳಲ್ಲಿ ಮುಖ್ಯವಾದುವೆಂದರೆ – ಬಂಡವಾಳ ಮಿತಿಯಾಗಿದ್ದು ದೊಡ್ಡದಾಗಿ ಬೆಳೆಸಲು ಕಷ್ಟವಾಗುವುದು, ಆಡಳಿತ ಕೌಶಲ್ಯಗಳು ಸೀಮಿತವಾಗಿರುತ್ತವೆ. ಯಾವಾಗಲೂ ಒಬ್ಬರಿಗಿಂತ ಇಬ್ಬರು ಅಥವಾ ಜಾಸ್ತಿ ವ್ಯಕ್ತಿಗಳು ನಿರ್ಧಾರಗಳನ್ನು ತೆಗೆದುಕೊಳ್ಳುವುದು ಸೂಕ್ತವಾಗಿರುತ್ತದೆ. ಎಲ್ಲ ನಷ್ಟ ಅಥವ ಹೊಣೆಗಾರಿಕೆಗಳನ್ನು ಒಬ್ಬನೇ ಹೊರಬೇಕಾಗುತ್ತದೆ. ಮಾಲೀಕನ ನಿಧನ ಅಥವಾ ದಿವಾಳಿಯಿಂದಾಗಿ ಸಂಸ್ಥೆಯನ್ನು ಮುಚ್ಚ ಬೇಕಾದ ಪರಿಸ್ಥಿತಿ ಉಂಟಾಗುತ್ತದೆ.

## ಪಾಲುಗಾರಿಕೆ ವ್ಯವಹಾರ ಸಂಸ್ಥೆಗಳು (Partnership Firms)

ಏಕವ್ಯಕ್ತಿ ಮಾಲೀಕತ್ವದ ಪರಿಮಿತಿಗಳನ್ನು ನಿವಾರಿಸಲು ಹಲವಾರು ವಿಧದ ವ್ಯವಹಾರ ಸಂಸ್ಥೆಗಳು ರೂಢಿಗೆ ಬಂದವು. ಅವುಗಳಲ್ಲಿ ಪಾಲುಗಾರಿಕೆ ಸಂಸ್ಥೆಗಳು ಒಂದಾಗಿವೆ. ಈ ಸಂಸ್ಥೆಗಳಲ್ಲಿ ಒಬ್ಬರಿಗಿಂತ ಹೆಚ್ಚು ಜನ ಕಲೆತು ವ್ಯವಹಾರ ಮಾಡುತ್ತಾರೆ. ಪಾಲುಗಾರಿಕೆ ಸಂಸ್ಥೆಗಳನ್ನು ಪ್ರಾರಂಭಿಸಲು ಹಾಗೂ ನಡೆಸಿಕೊಂಡು ಹೋಗಲು 1932 ರಲ್ಲಿ ಪಾಲುಗಾರಿಕೆ ಸಂಸ್ಥೆಯ ಕಾನೂನು ಜಾರಿಗೆ ಬಂದಿತು. ಈ ಕಾಯ್ದೆಯ 4ನೇ ಸೆಕ್ಷನ್ ಪ್ರಕಾರ ಎಲ್ಲರೂ ಕೈಗೊಂಡಿರುವ ಅಥವಾ ಅದರಲ್ಲಿ ಎಲ್ಲರ ಪರವಾಗಿ ಒಬ್ಬ ವ್ಯವಹರಿಸುತ್ತಿರುವ ವ್ಯವಹಾರದ

ಲಾಭಗಳನ್ನು ಹಂಚಿಕೊಳ್ಳಲು ಒಪ್ಪಿಕೊಂಡಿರುವ ವ್ಯಕ್ತಿಗಳ ನಡುವಿನ ಸಂಬಂಧ ಪಾಲುಗಾರಿಕೆಯಾಗಿದೆ. ಹಣಕಾಸಿನ ವ್ಯವಹಾರ ಮಾಡುವುದಾದರೆ ಗರಿಷ್ಠ ಹತ್ತು ಜನ ಪಾಲುಗಾರರು ಹಾಗೂ ಸಾಮಾನ್ಯ ಪಾಲುಗಾರಿಕೆ ವ್ಯವಹಾರ ಮಾಡುವುದಾದರೆ ಗರಿಷ್ಠ ಇಪ್ಪತ್ತು ಜನ ಪಾಲುಗಾರರಿಗೂ ಸೀಮಿತವಾಗಿರುತ್ತದೆ. ಈ ಸಂಸ್ಥೆಗಳನ್ನು ಪಾಲುದಾರಿಕೆ ಸಂಸ್ಥೆಗಳೆಂದೂ ಪಾಲುಗಾರರನ್ನು ಪಾಲುಗಾರರೆಂದು ಕರೆಯುತ್ತಾರೆ.

**ಪಾಲುಗಾರರ ವಿಧಗಳು:** ಪಾಲುಗಾರರಲ್ಲಿ ಕೆಲವು ವಿಧಗಳಿವೆ. ಅವುಗಳಲ್ಲಿ ಸಾಮಾನ್ಯವಾಗಿ ಕಂಡುಬರುವವದೆಂದರೆ:

**1) ಕ್ರಿಯಾಶೀಲ ಅಥವ ಸಕ್ರಿಯ ಪಾಲುಗಾರರು:** ಇವರು ನಿಗದಿತ ಬಂಡವಾಳ ಹೂಡಿರುತ್ತಾರೆ. ಲಾಭನಷ್ಟಗಳನ್ನು ಅನುಪಾತಕ್ಕನುಗುಣವಾಗಿ ಹಂಚಿಕೊಳ್ಳುತ್ತಾರೆ. ಸಂಸ್ಥೆಯ ದಿನವಹಿ ವಹಿವಾಟುಗಳನ್ನು ಸಕ್ರಿಯವಾಗಿ ನಡೆಸಿಕೊಂಡು ಹೋಗುತ್ತಾರೆ.

**2) ತಟಸ್ಥ ಪಾಲುಗಾರರು:** ಇವರು ಬಂಡವಾಳನ್ನು ಹೂಡಿರುತ್ತಾರೆ. ಆದರೆ ದಿನವಹಿ ವಹಿವಾಟುಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದಿಲ್ಲ. ಅನುಪಾತಕ್ಕನುಗುಣವಾಗಿ ಲಾಭಗಳನ್ನು ಹಂಚಿಕೊಳ್ಳುತ್ತಾರೆ ಹಾಗೆಯೆ ನಷ್ಟ ಅಥವಾ ಜವಾಬ್ದಾರಿಗಳಿಗೂ ಕೂಡ ಹೊಣೆಯಾಗಿರುತ್ತಾರೆ.

**3) ನಾಮಮಾತ್ರ ಪಾಲುಗಾರರು:** ಇವರು ಬಂಡವಾಳವನ್ನು ಹೂಡುವುದಿಲ್ಲ. ಸಕ್ರಿಯವಾಗಿ ದೈನಂದಿನ ವಹಿವಾಟುಗಳಲ್ಲಿ ಭಾಗವಹಿಸುವುದಿಲ್ಲ. [ಯಾವುದೇ ಲಾಭಕ್ಕೂ ಹಕ್ಕುದಾರರಲ್ಲ]. ಆದರೆ ಸಾಲಗಳಿಗೆ ಅನುಪಾತಕ್ಕನುಗುಣವಾಗಿ ಹೊಣೆಯಾಗಿರುತ್ತಾರೆ.

**4) ಅಪ್ರಾಪ್ತ ವಯಸ್ಕ ಪಾಲುದಾರರು:** ಹದಿನೆಂಟು ವರ್ಷ ವಯಸ್ಸಿಗಿಂತ ಕಡಿಮೆ ಇರುವವರು ಪಾಲುಗಾರರಾಗಲು ಸಾಧ್ಯವಿಲ್ಲ. ಆದರೆ ಎಲ್ಲ ಪಾಲುಗಾರರ ಸಮ್ಮತಿಯಂತೆ ಹಾಗೂ ಕರಾರಿನಂತೆ, ಸಂಸ್ಥೆಯ ಹಿತದೃಷ್ಟಿಯಿಂದ ಹದಿನೆಂಟು ವರ್ಷ ಮೀರದವರನ್ನೂ ಪಾಲುಗಾರರಾಗಿ ಸೇರಿಸಿಕೊಳ್ಳಬಹುದು. ಇವರು ಲಾಭಗಳಲ್ಲಿ ಮಾತ್ರ ತಮ್ಮ ಪಾಲನ್ನು ಪಡೆಯುತ್ತಾರೆ. ನಷ್ಟಗಳಿಗೆ ಹೊಣೆಯಾಗುವುದಿಲ್ಲ. ಹೊಸದಾಗಿ ಪ್ರಾರಂಭವಾಗುವ ಸಂಸ್ಥೆಗಳು ಅಪ್ರಾಪ್ತ ವಯಸ್ಕರನ್ನು ಪಾಲುದಾರರಾಗಿ ಸೇರಿಸಿಕೊಳ್ಳಲು ಅವಕಾಶವಿಲ್ಲ.

ಈ ವಿಧಗಳೇ ಅಲ್ಲದೆ ರಹಸ್ಯಪಾಲುದಾರರು, ಸೀಮಿತಪಾಲುಗಾರರು, ಅರೆಪಾಲುಗಾರರು, ಲಾಭದಲ್ಲಿ ಮಾತ್ರ ಪಾಲುಗಾರರು ಮುಂತಾದವರು ಇರುತ್ತಾರೆ.

### ಪಾಲುಗಾರಿಕೆಯ ಕರಾರು (Partnership Deed)

ಈ ಕರಾರು ಪತ್ರ ಸಾಮಾನ್ಯವಾಗಿ ಬರಹದಲ್ಲಿರುತ್ತದೆ. ಕೆಲವು ಸಂದರ್ಭಗಳಲ್ಲಿ ಬಾಯಿ ಮಾತಿನಲ್ಲೂ ಕರಾರನ್ನು ಮಾಡಿಕೊಳ್ಳಬಹುದು. ಬರಹದ ಕರಾರು ದಸ್ತಾವೇಜು ಕಾಗದದಲ್ಲಿ ಬರೆಯಲ್ಪಟ್ಟಿರುತ್ತದೆ ಹಾಗೂ ಸಂಸ್ಥೆಯಿಂದ ಸಂಸ್ಥೆಗೆ ವ್ಯತ್ಯಾಸ ಹೊಂದಿರುತ್ತದೆ. ಈ ಕರಾರಿನಲ್ಲಿ ಸಾಮಾನ್ಯವಾಗಿ ಅಡಕವಾಗಿರುವ ಅಂಶಗಳಾವುವೆಂದರೆ, ಸಂಸ್ಥೆಯ ಹೆಸರು, ಪಾಲುಗಾರರ ಹೆಸರು, ವಿಳಾಸ, ವ್ಯವಹಾರ ನಡೆಯುವ ಸ್ಥಳ, ವ್ಯವಹಾರದ ಸ್ವರೂಪ, ಉಪಶಾಖೆಗಳೇನಾದರೂ ಇದ್ದರೆ ಅವುಗಳ ವಿಳಾಸ, ಪ್ರಾರಂಭವಾಗುವ ದಿನಾಂಕ, ಪ್ರತಿಪಾಲುಗಾರರೂ ಹೂಡಿರುವ ಬಂಡವಾಳ. ಲಾಭನಷ್ಟಗಳನ್ನು ಹಂಚಿಕೊಳ್ಳುವ ಅನುಪಾತ, ಪ್ರತಿ ಪಾಲುಗಾರರ ಕರ್ತವ್ಯಗಳು, ಕೆಲಸಗಳ ಹಂಚಿಕೆ. ಹೊಸಪಾಲುಗಾರರನ್ನೇನಾದರೂ ಸೇರಿಸಿಕೊಳ್ಳಬೇಕಾದಲ್ಲಿ ಅನುಸರಿಸಬೇಕಾದ ನಿಯಮಗಳು, ಪಾಲುಗಾರರಲ್ಲಿ ಯಾರಾದರೂ ನಿವೃತ್ತಿ ಹೊಂದಿದರೆ ಅಥವಾ

ಮರಣಹೊಂದಿದರೆ ಪುನರ್‌ಮೌಲ್ಯ (Goodwill) ನಿರ್ಧರಿಸುವ ವಿಧಾನ, ಪಾಲುಗಾರರಲ್ಲೇನಾದರೂ ಭಿನ್ನಾಭಿಪ್ರಾಯಗಳು ಬಂದಾಗ ಬಗೆಹರಿಸಿಕೊಳ್ಳಲು ಪಾಲಿಸಬೇಕಾದ ವಿಧಾನಗಳು ಮುಂತಾದವು.

**ಪಾಲುಗಾರಿಕೆ ಸಂಸ್ಥೆಯ ಅನುಕೂಲಗಳು**

1. **ಸುಲಭ ರಚನೆ:** ಈ ಸಂಸ್ಥೆಯನ್ನು ನೊಂದಾಯಿಸುವುದು ಪಾಲುಗಾರರ ಐಚ್ಛಿಕ ನಿರ್ಧಾರಕ್ಕೆ ಸೇರಿದ್ದರಿಂದ ಹೆಚ್ಚಿನ ಕಾನೂನಿನ ನಿಬಂಧನೆಗಳಿರುವುದಿಲ್ಲ. ಹೀಗಾಗಿ ಈ ರೀತಿಯ ಸಂಸ್ಥೆಯ ಸುಲಭವಾಗಿ ರಚನೆಯಾಗುತ್ತದೆ.
2. **ಹೆಚ್ಚಿನ ಬಂಡವಾಳ:** ಈ ಸಂಸ್ಥೆಯು ಇಬ್ಬರು ಅಥವ ಹೆಚ್ಚಿನ ವ್ಯಕ್ತಿಗಳಿಂದ ರಚಿಸಲ್ಪಡುವುದರಿಂದ ಬಂಡವಾಳದ ಹೂಡಿಕೆ ಹೆಚ್ಚಾಗಿರುತ್ತದೆ.
3. **ಹೆಚ್ಚಿನ ಪರಿಣತಿ:** ಈ ಸಂಸ್ಥೆಯಲ್ಲಿ ಒಬ್ಬರಿಗಿಂತ ಹೆಚ್ಚಿನ ಮಾಲೀಕರಿದ್ದು ಶ್ರಮದ ವಿಭಜನೆಯ ತತ್ವವನ್ನು ಅಳವಡಿಸುವ ಸಾಧ್ಯತೆ ಇರುತ್ತದೆ. ಇದರಿಂದ ಪರಿಣತಿ ಹೆಚ್ಚಿಸುತ್ತದೆ.
4. **ವಿಶ್ವಾಸಾರ್ಹತೆ** : ಪಾಲುಗಾರರ ಹೊಣೆಗಾರಿಕೆಯು ಅಪರಿಮಿತವಾದುದರಿಂದ, ಅದು ಸಂಸ್ಥೆಯ ವಿಶ್ವಾಸಾರ್ಹತೆಯನ್ನು ಹೆಚ್ಚಿಸುತ್ತದೆ.
5. **ನಷ್ಟದ ಹಂಚಿಕೆ:** ಪಾಲುಗಾರಿಕಾ ಸಂಸ್ಥೆಯಲ್ಲಿ ನಷ್ಟ ಉಂಟಾದಾಗ ಎಲ್ಲ ಪಾಲುಗಾರರೂ ಲಾಭ ಹಂಚಿಕೆಯ ಅನುಪಾತದಲ್ಲಿ ನಷ್ಟವನ್ನು ಹಂಚಿಕೊಳ್ಳುತ್ತಾರೆ ಹಾಗೂ ನಷ್ಟದ ಹೊರೆ ಒಬ್ಬನೇ ಪಾಲುದಾರನ ಮೇಲೆ ಬೀಳುವುದಿಲ್ಲ.
6. **ವ್ಯವಹಾರದ ರಹಸ್ಯ:** ಈ ಸಂಸ್ಥೆಯು ಲೆಕ್ಕಪತ್ರಗಳ ದಾಖಲೆಯನ್ನು ಸಾರ್ವಜನಿಕವಾಗಿ ಪ್ರಕಟಿಸಬೇಕಾಗಿಲ್ಲದಿರುವುದರಿಂದ ವ್ಯವಹಾರದ ರಹಸ್ಯ ಪಾಲನೆ ಸಾಧ್ಯವಾಗುತ್ತದೆ.
7. **ಸರಳ ವಿಸರ್ಜನೆ:** ಈ ಸಂಸ್ಥೆಯನ್ನು ಸುಲಭವಾಗಿ ವಿಸರ್ಜಿಸಬಹುದು. ಯಾವುದೇ ಪಾಲುಗಾರ ಇತರ ಪಾಲುಗಾರರಿಗೆ 14 ದಿನಗಳ ಮುನ್ಸೂಚನೆ ಕೊಡಬಹುದು ಹಾಗೂ ಇತರ ಪಾಲುಗಾರರ ಸಮ್ಮತಿಯ ಮೇಲೆ ವಿಸರ್ಜಿಸಬಹುದು.

**ಪಾಲುಗಾರಿಕೆ ವ್ಯವಹಾರ ಸಂಸ್ಥೆಯ ದೋಷಗಳು**

1. ಕೆಲವು ಸಂದರ್ಭಗಳಲ್ಲಿ ಪಾಲುಗಾರರ ನಡುವೆ ಒಮ್ಮತ ಇಲ್ಲದೆ ಹೋದಾಗ ಅವರವರಲ್ಲಿ ತಾರತಮ್ಯಗಳು ಉಂಟಾಗುತ್ತವೆ.
2. ಪಾಲುಗಾರರ ಸಂಖ್ಯೆಯಲ್ಲಿ ಗರಿಷ್ಠ ಮಿತಿ ಇರುವುದರಿಂದ ಹೆಚ್ಚು ಬಂಡವಾಳದ ಹೂಡಿಕೆಗೆ ಸಾಧ್ಯವಾಗದೆ ಹೋಗುತ್ತದೆ.
3. ನಷ್ಟದ ಹೊಣೆಗಾರಿಕೆ ಅಪರಿಮಿತವಾಗಿದ್ದು ಹೆಚ್ಚು ಜನ ಪಾಲುಗಾರರಾಗಲು ಇಷ್ಟಪಡುವುದಿಲ್ಲ.
4. ಕೆಲವು ಪಾಲುಗಾರರ ಅಜಾಗರೂಕತೆ ಅಥವಾ ಅವಿವೇಕತನದ ನಿರ್ಧಾರಗಳು ಸಂಸ್ಥೆಯ ಹಿನ್ನಡೆಗೆ ಕಾರಣವಾಗುತ್ತದೆ.
5. ಪಾಲುದಾರಿಕೆ ಸಂಸ್ಥೆ ಸ್ಥಿರತೆಯ ಅಭಾವ ಹೊಂದಿರುತ್ತದೆ. ಯಾರಾದರೂ ಒಬ್ಬ ಪಾಲುಗಾರ ಮರಣ ಹೊಂದಿದರೆ ಅಥವಾ ದಿವಾಳಿಯಾದರೆ ಸಂಸ್ಥೆಯನ್ನು ವಿಸರ್ಜಿಸಬೇಕಾಗುತ್ತದೆ.

6. ಪಾಲುಗಾರರು ತಮ್ಮ ಪಾಲನ್ನು ಬೇರೆಯವರಿಗೆ ಸುಲಭವಾಗಿ ವರ್ಗಾಯಿಸಲು ಸಾಧ್ಯವಿಲ್ಲ.
7. ಸರ್ಕಾರದ ಹಿಡಿತ ಹೆಚ್ಚಾಗಿಲ್ಲದೆ ಇರುವುದರಿಂದ ಹಾಗೂ ಲೆಕ್ಕಪತ್ರಗಳನ್ನು ಪ್ರಕಟಪಡಿಸಬೇಕಾಗಿಲ್ಲದೆ ಇರುವುದರಿಂದ ಸಾರ್ವಜನಿಕರ ಬೆಂಬಲ ಸಿಗುವುದಿಲ್ಲ.
8. ಎರಡು ಅಥವಾ ಹೆಚ್ಚು ಪಾಲಗಾರರು ಇರುವುದರಿಂದ ವ್ಯವಹಾರ ಗೌಪ್ಯದೆ ನಿರ್ವಹಣೆ ಕಷ್ಟಸಾಧ್ಯ

### ಪಾಲುಗಾರಿಕೆ ಸಂಸ್ಥೆಗಳ ನೋಂದಣಿ (Registration of Partnership Firms)

ಏಕವ್ಯಕ್ತಿ ಮಾಲಿಕತ್ವದ ಸಂಸ್ಥೆಗಳ ನೋಂದಣಿ ಅವಶ್ಯಕತೆಯಿಲ್ಲ. ಭಾರತದ ಪಾಲುಗಾರಿಕೆ ಸಂಸ್ಥೆಗಳ 1932ನೇ ಕಾಯ್ದೆಯ ಪ್ರಕಾರ ಪಾಲುಗಾರಿಕೆ ಸಂಸ್ಥೆಗಳ ನೋಂದಣಿಗೆ ಅವಕಾಶವಿದೆ. ಆದರೆ ಇದರ ನಿರ್ಬಂಧವಿಲ್ಲ. ನೋಂದಣಿ ಮಾಡುವುದು ಪಾಲುಗಾರರ ನಿರ್ಧಾರಕ್ಕೆ ಬಿಟ್ಟದ್ದು. ನೋಂದಣಿಯನ್ನು ಯಾವ ಸಂದರ್ಭದಲ್ಲಿ ಬೇಕಾದರೂ ಮಾಡುವ ಅವಕಾಶವಿದೆ. ನೋಂದಣಿಗೆ ನಿರ್ದಿಷ್ಟ ನಮೂನೆಯಲ್ಲಿ ಸರಿಯಾದ ವಿವರಗಳನ್ನು ಭರ್ತಿ ಮಾಡಿ, ನಿಗದಿತ ಶುಲ್ಕದೊಂದಿಗೆ ಸರ್ಕಾರದಿಂದ ನೇಮಿಸಲ್ಪಟ್ಟಿರುವ ನೋಂದಣಾಧಿಕಾರಿಗೆ ಸಲ್ಲಿಸಬೇಕು. ನೋಂದಣಾಧಿಕಾರಿಗಳು ವಿವರಗಳನ್ನು ಕೂಲಂಕುಶವಾಗಿ ಪರಿಶೀಲಿಸಿ, ಎಲ್ಲವು ಸರಿಯಾಗಿದೆ ಎಂದು ಖಾತರಿ ಪಡೆದ ಮೇಲೆ ಸಂಸ್ಥೆಗೆ ನೋಂದಣಿ ಪತ್ರವನ್ನು ನೀಡುತ್ತಾರೆ.

### ಸಂಸ್ಥೆಗಳ ನೋಂದಣಿಯಿಂದಾಗುವ ಉಪಯೋಗಗಳು

- ನೋಂದಣಿ ಹೊಂದಿರುವ ಸಂಸ್ಥೆಯು ಒಂದು ನೂರು ರೂಗಳನ್ನು ಮೀರಿದ ಸಾಲದ ವಸೂಲಾತಿಗಾಗಿ ಮೂರನೆ ವ್ಯಕ್ತಿಗಳ ವಿರುದ್ಧ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಬಹುದು.
- ನೋಂದಣಿಯಾಗಿರುವ ಸಂಸ್ಥೆಗಳು ಸಾಲಗಳ ವಸೂಲಿಗಾಗಿ ಇತರೆ ಪಾಲುಗಾರನ ವಿರುದ್ಧವೂ ದಾವೆ ಹೂಡಬಹುದು.
- ನೋಂದಣಿಯಾಗದ ಸಂಸ್ಥೆಯ ವಿರುದ್ಧ ಅಥವಾ ಅದರ ಪಾಲುಗಾರರ ವಿರುದ್ಧ ಮೂರನೇ ವ್ಯಕ್ತಿ ದಾವೆ ಹೂಡಬಹುದು.
- ನೋಂದಣಿಯಾಗದ ಸಂಸ್ಥೆ ಅಥವಾ ಅದರ ಪಾಲುಗಾರರ ವಿರುದ್ಧ ಯಾವುದೇ ಪಾಲುಗಾರನಾಗಲಿ ಸಂಸ್ಥೆಯ ವಿಸರ್ಜನೆಗೆ ಅಥವಾ ಲೆಕ್ಕಪತ್ರಗಳ ಇತ್ಯರ್ಥಕ್ಕಾಗಿ ನ್ಯಾಯಾಲಯದಲ್ಲಿ ದಾವೆ ಹೂಡಬಹುದು.

### ಹಿಂದು ಅವಿಭಕ್ತ ಕುಟುಂಬ ವ್ಯವಹಾರ ಸಂಸ್ಥೆಗಳು

ಈ ರೀತಿಯ ವ್ಯವಹಾರ ಸಂಸ್ಥೆಗಳು ಭಾರತದಲ್ಲಿ ಮಾತ್ರ ಅಸ್ತಿತ್ವದಲ್ಲಿವೆ. ಇವು ಹಿಂದೂ ಕಾನೂನಿನ ಅನ್ವಯ ಜಾರಿಗೆ ಬರುತ್ತವೆ. ಇವು ಹಿಂದೂ ಕುಟುಂಬದ ಎಲ್ಲ ಗಂಡಸರಿಂದ ಕೂಡಿದ ಸಂಸ್ಥೆಗಳಾಗಿರುತ್ತವೆ. ನಿರಂತರವಾಗಿ ಮೂರು ತಲೆಮಾರುಗಳ ಗಂಡು ಸದಸ್ಯರು ಈ ವ್ಯವಹಾರ ಸಂಸ್ಥೆಗಳ ಸದಸ್ಯರಾಗುತ್ತಾರೆ. ಅವಿಭಕ್ತ ಕುಟುಂಬದ ಅತ್ಯಂತ ಹಿರಿಯ ಗಂಡು ಸದಸ್ಯ ವ್ಯವಹಾರದ ಮೇಲ್ವಿಚಾರಣೆ ನೋಡಿಕೊಳ್ಳುತ್ತಾನೆ. ಅವನನ್ನು 'ಕರ್ತ' ಎಂದು ಕರೆಯುತ್ತಾರೆ. ಮಾಲಿಕತ್ವವು ಎಲ್ಲ ಸದಸ್ಯರದಾಗಿದ್ದರೂ ಆಡಳಿತವನ್ನು ಕರ್ತನು ನಿರ್ವಹಿಸುತ್ತಾನೆ. ಕರ್ತನ ಹೊಣೆಗಾರಿಕೆ ಅಪರಿಮಿತವಾಗಿರುತ್ತದೆ. ಇತರೆ ಸದಸ್ಯರ ಹೊಣೆಗಾರಿಕೆ ಅವರು ಹೂಡಿರುವ ಬಂಡವಾಳದ ಪ್ರಮಾಣಕ್ಕೆ ಸೀಮಿತವಾಗಿರುತ್ತದೆ.

## ಅಭ್ಯಾಸಗಳು

**I ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಜಾಗಗಳನ್ನು ಸರಿಯಾದ ಪದಗಳಿಂದ ತುಂಬಿರಿ.**

1 ಒಬ್ಬನೇ ವ್ಯಕ್ತಿಯಿಂದ ನಡೆಸಲ್ಪಡುವ ವ್ಯಾಪಾರಿ ಸಂಸ್ಥೆಯನ್ನು ——— ಎಂದು ಕರೆಯುತ್ತಾರೆ.

2 ಪಾಲುಗಾರಿಕೆ ಸಂಸ್ಥೆಗಳನ್ನು ನಡೆಸಿಕೊಂಡು ಹೋಗಲು ——— ರಲ್ಲಿ ಪಾಲುಗಾರಿಕಾ ಸಂಸ್ಥೆಯ ಕಾನೂನು ಜಾರಿಗೆ ಬಂದಿತು.

3 ಹಣಕಾಸಿನ ವ್ಯವಹಾರ ಮಾಡುವ ಪಾಲುಗಾರಿಕಾ ಸಂಸ್ಥೆಯಲ್ಲಿ ಗರಿಷ್ಠ ——— ಪಾಲುಗಾರರಿಗೆ ಸೀಮಿತವಾಗಿರುತ್ತದೆ.

4 ಹಿಂದೂ ಅವಿಭಕ್ತ ಕುಟುಂಬ ವ್ಯವಹಾರ ಸಂಸ್ಥೆಗಳ ಮೇಲ್ವಿಚಾರಣೆ ನೋಡಿಕೊಳ್ಳುವವನನ್ನು ——— ಎಂದು ಕರೆಯುತ್ತಾರೆ.

5 ಭಾರತದಲ್ಲಿ ಮಾತ್ರ ಅಸ್ಥಿತ್ವದಲ್ಲಿರುವ ಸಣ್ಣ ಪ್ರಮಾಣದ ವ್ಯವಹಾರ ಸಂಸ್ಥೆ ಎಂದರೆ ———ಆಗಿದೆ.

**II ಈ ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ಒಂದೆರಡು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1 ಸಣ್ಣ ಪ್ರಮಾಣದ ವ್ಯವಹಾರ ಸಂಸ್ಥೆಗಳಲ್ಲಿ ಮುಖ್ಯವಾದುವು ಯಾವುವು?

2 ಸಣ್ಣ ಪ್ರಮಾಣದ ವ್ಯವಹಾರ ಸಂಸ್ಥೆಗಳು ಗ್ರಾಹಕರಿಗೆ ಹೇಗೆ ಸಹಾಯ ಮಾಡುತ್ತವೆ?

3 ಪಾಲುಗಾರಿಕೆ ಸಂಸ್ಥೆಯೆಂದರೇನು?

4 ತಟಸ್ಥ ಪಾಲುಗಾರರೆಂದರೆ ಯಾರು ತಿಳಿಸಿ.

5 ಪಾಲುಗಾರಿಕೆ ಸಂಸ್ಥೆಯ ವಿಸರ್ಜನೆ ಹೇಗೆ ಸರಳವಾಗಿದೆ ಬರೆಯಿರಿ.

**III ಈ ಕೆಳಗಿನ ಪ್ರಶ್ನೆಗಳನ್ನು ಸೂಕ್ತ ರೀತಿಯಲ್ಲಿ ಉತ್ತರಿಸಿ.**

1 ಏಕ ಮಾಲೀಕತ್ವ ಸಂಸ್ಥೆಯ ಯಾವುದಾದರೂ ನಾಲ್ಕು ಅನುಕೂಲತೆಗಳನ್ನು ತಿಳಿಸಿ.

2 ಏಕ ಮಾಲೀಕತ್ವ ಸಂಸ್ಥೆಯ ಯಾವುದಾದರೂ ನಾಲ್ಕು ದೋಷಗಳನ್ನು ತಿಳಿಸಿ.

3 ಪಾಲುಗಾರಿಕೆ ಸಂಸ್ಥೆಗಳು ಹೇಗೆ ಪ್ರಾರಂಭವಾಗುತ್ತವೆ? ಸಂಕ್ಷಿಪ್ತವಾಗಿ ವಿವರಿಸಿ.

4 ಪಾಲುಗಾರಿಕೆ ಸಂಸ್ಥೆಗಳ ವಿವಿಧ ರೀತಿಯ ಪಾಲುಗಾರರನ್ನು ತಿಳಿಸಿ.

5 ಪಾಲುಗಾರಿಕೆ ಸಂಸ್ಥೆಗಳ ಯಾವುದಾದರೂ ನಾಲ್ಕು ಅನುಕೂಲತೆಗಳನ್ನು ತಿಳಿಸಿ.

6 ಪಾಲುಗಾರಿಕೆ ಸಂಸ್ಥೆಗಳ ಯಾವುದಾದರೂ ನಾಲ್ಕು ದೋಷಗಳನ್ನು ತಿಳಿಸಿ.

7 ಪಾಲುಗಾರಿಕೆ ಸಂಸ್ಥೆಗಳನ್ನು ನೊಂದಾಯಿಸುವುದರಿಂದಾಗುವ ಅನುಕೂಲತೆಗಳೇನು?

8 ಹಿಂದೂ ಅವಿಭಕ್ತ ಕುಟುಂಬ ಪದ್ಧತಿಯ ವ್ಯವಹಾರ ಸಂಸ್ಥೆಯ ಬಗ್ಗೆ ಬರೆಯಿರಿ.

**IV ಚಟುವಟಿಕೆ.**

ಉತ್ತಮವಾಗಿ ಪ್ರಚುರ ಪಡಿಸಿರುವ ಯಾವುದಾದರೂ ಎರಡು ಜಾಹಿರಾತುಗಳನ್ನು ಸಂಗ್ರಹಿಸಿ.



# ಅಧ್ಯಾಯ–4

## ದೊಡ್ಡ ಪ್ರಮಾಣದ ವ್ಯವಹಾರ ಸಂಘಟನೆಗಳು

**ಈ ಅಧ್ಯಾಯದ ಅಧ್ಯಯನದ ನಂತರ ಈ ಕೆಳಗಿನ ಅಂಶಗಳನ್ನು ತಿಳಿಯುವಿರಿ.**

- ದೊಡ್ಡ ಪ್ರಮಾಣದ ವ್ಯವಹಾರ ಸಂಸ್ಥೆಗಳನ್ನು ಗುರುತಿಸುವುದು.
- ಸಹಕಾರಿ ಸಂಘಗಳ ಲಕ್ಷಣ, ವಿಧಗಳು, ಪ್ರಯೋಜನ, ಮತ್ತು ದೋಷಗಳ ಬಗ್ಗೆ ಅರ್ಥೈಸಿಕೊಳ್ಳುವುದು.
- ಕೂಡು ಬಂಡವಾಳ ಸಂಸ್ಥೆಗಳ ಅಸ್ಥಿತ್ವ, ವಿಧಗಳು, ರಚನೆ, ಅನುಕೂಲ ಮತ್ತು ಅನನುಕೂಲಗಳ ಬಗ್ಗೆ ತಿಳಿಯುವುದು.
- ಬಹುರಾಷ್ಟ್ರೀಯ ಕಂಪನಿಗಳ ಅರ್ಥ, ಲಕ್ಷಣಗಳು, ಪ್ರಯೋಜನ ಮತ್ತು ದೋಷಗಳನ್ನು ತಿಳಿಯುವುದು.

ಏಕವ್ಯಕ್ತಿ ಮಾಲೀಕತ್ವದ ಸಂಸ್ಥೆಗಳು, ಪಾಲುಗಾರಿಕೆ ಸಂಸ್ಥೆಗಳು ಮತ್ತು ಹಿಂದು ಅವಿಭಕ್ತ ಕುಟುಂಬ ವ್ಯವಹಾರ ಸಂಸ್ಥೆಗಳು ಸಾಕಷ್ಟು ಬಂಡವಾಳದ ಕೊರತೆ, ಆಡಳಿತ ಕೌಶಲ್ಯದ ಅಭಾವ, ನಿರಂತರತೆ ಇಲ್ಲದೆ ಇರುವುದು, ಅಪರಿಮಿತವಾದ ಜವಾಬ್ದಾರಿ ಅಥವಾ ಹೊಣೆಗಾರಿಕೆ ಮುಂತಾದ ತೊಂದರೆಗಳನ್ನು ಒಳಗೊಂಡಿವೆ. ಈ ತೊಂದರೆಗಳನ್ನು ಮುಕ್ತಗೊಳಿಸಲು ದೊಡ್ಡಪ್ರಮಾಣದ ವ್ಯವಹಾರ ಸಂಸ್ಥೆಗಳು ರೂಢಿಗೆ ಬಂದವು.

**ದೊಡ್ಡಪ್ರಮಾಣದ ವ್ಯವಹಾರ ಸಂಸ್ಥೆಗಳಲ್ಲಿ ಮುಖ್ಯವಾದವು ಯಾವುವೆಂದರೆ:**

1. ಸಹಕಾರಿ ಸಂಘಗಳು (Co-operative Societies)
2. ಕೂಡು ಬಂಡವಾಳ ಸಂಸ್ಥೆಗಳು (Joint Stock Companies)
3. ಬಹುರಾಷ್ಟ್ರೀಯ ಸಂಸ್ಥೆಗಳು (Multi National Companies)

**1. ಸಹಕಾರಿ ಸಂಘಗಳು (Co-operative Societies):** ಇವು ಪ್ರಪಂಚದಾದ್ಯಂತ ಕಂಡುಬರುತ್ತವೆ. ಇವು ವ್ಯಕ್ತಿಗಳ ಸ್ವಯಂಪ್ರೇರಿತ ಸಂಸ್ಥೆಗಳಾಗಿದ್ದು ಆರ್ಥಿಕವಾಗಿ ಹಿಂದುಳಿದಿರುವವರು ತಮ್ಮ ಸದಸ್ಯರ ಅನುಕೂಲತೆಗಳಿಗಾಗಿ ಸ್ಥಾಪಿಸಿಕೊಂಡಿರುವ ಸಂಸ್ಥೆಗಳಾಗಿವೆ. ಪ್ರಪಂಚದಲ್ಲಿ ಮೊದಲ ಸಹಕಾರಿ ಸಂಘವು 1844ರಲ್ಲಿ ರಾಬರ್ಟ್ ಓವನ್ ಎಂಬುವವರಿಂದ ಇಂಗ್ಲೆಂಡಿನ ಸ್ಥಾಪಿಸಲ್ಪಟ್ಟಿತು. ಇದು ಗ್ರಾಹಕರ ಸಹಕಾರಿ ಸಂಘವಾಗಿತ್ತು. ಸಾಮಾನ್ಯವಾಗಿ ಸಹಕಾರಿ ಸಂಘಗಳು ಆರ್ಥಿಕ ಪ್ರಗತಿ ಸಾಧಿಸಲು ಮತ್ತು ಆರ್ಥಿಕ ಶೋಷಣೆಯಿಂದ ಮುಕ್ತವಾಗಲು ಆರ್ಥಿಕ ಸಮಾನತೆ ಹೊಂದಿರುವ ವ್ಯಕ್ತಿಗಳು ಈ ಸಂಘಗಳನ್ನು ಸ್ಥಾಪಿಸಿಕೊಳ್ಳುತ್ತಾರೆ. ಉದಾ:– (1) ರೈತರು ವ್ಯವಸಾಯ ಸಾಲದ ಸಹಕಾರಿ ಸಂಘಗಳನ್ನು ಸ್ಥಾಪಿಸಿಕೊಂಡು, ಇವುಗಳಿಂದ ಕಡಿಮೆ ಬಡ್ಡಿದರದಲ್ಲಿ ಸಾಲವನ್ನು ಪಡೆದು ಲೇವಾದೇವಿಗಾರರ ಹಿಡಿತದಿಂದ ಪಾರಾಗುತ್ತಾರೆ. (2) ಸಹಕಾರಿ ಮಾರುಕಟ್ಟೆ ಸಂಘಗಳನ್ನು ಸ್ಥಾಪಿಸಿಕೊಂಡು ತಾವು ಬೆಳೆದ ಫಸಲುಗಳಿಗೆ ಮಧ್ಯವರ್ತಿಗಳ ಹಿಡಿತದಿಂದ ಪಾರಾಗಿ ಒಳ್ಳೆಯ ಬೆಲೆ ಬರುವಂತೆ ಮಾಡಿಕೊಳ್ಳುತ್ತಾರೆ.

**ಸಹಕಾರಿ ಸಂಘಗಳ ರಚನೆ :** ಭಾರತದಲ್ಲಿ ಸಹಕಾರಿ ಸಂಘಗಳ ರಚನೆ ಭಾರತದ ಸಹಕಾರಿ ಸಂಘಗಳ ಕಾಯಿದೆ 1912 ರಂತೆ ನಿಯಂತ್ರಿಸಲ್ಪಡುತ್ತದೆ. ಬೇರೆ ಬೇರೆ ರಾಜ್ಯಗಳಲ್ಲಿ ಅಲ್ಲಿರುವ ಕಾಯಿದೆಗಳಿಗನುಸಾರವಾಗಿ ಸಹಕಾರಿ ಸಂಘಗಳ ರಚನೆ ಆಗುತ್ತದೆ.

ಸಹಕಾರಿ ಸಂಘಗಳನ್ನು ರಚಿಸಲು ಕನಿಷ್ಠ ಹತ್ತು ಮಂದಿ ಸದಸ್ಯರಿರಬೇಕು. ಇವರು ಒಂದೆ ಸ್ಥಳದಲ್ಲಿ ನೆಲಸಿರುವವರಾಗಿರಬೇಕು ಅಥವಾ ಯಾವುದಾದರು ಒಂದೇ ವರ್ಗಕ್ಕೆ ಸೇರಿದವರಾಗಿರಬೇಕು ಅಥವಾ ಯಾವುದಾದರು ಒಂದೇ ರೀತಿಯ ವೃತ್ತಿಯನ್ನು ಅನುಸರಿಸುತ್ತಿರುವವರಾಗಿರಬೇಕು. ಇವರಲ್ಲಿ ಒಂದು ಸಾಮಾನ್ಯ ಆರ್ಥಿಕ ಅವಶ್ಯಕತೆ ಇರಬೇಕು. ಇವರನ್ನು ಪ್ರವರ್ತಕರೆಂದು (Promoters) ಕರೆಯುತ್ತಾರೆ. ಇವರು ನಿಗಧಿತ ನಮೂನೆಯಲ್ಲಿ ಎಲ್ಲಾ ವಿವರಗಳನ್ನು ಸಿದ್ಧಪಡಿಸಿ ಆ ಜಿಲ್ಲಾ ಮಟ್ಟದ ಸಹಕಾರಿ ಸಂಘಗಳ ನೋಂದಣಾಧಿಕಾರಿಗೆ ನಿಗದಿತ ದಸ್ತಾವೇಜು ಸೇರಿಸಿ ಸಲ್ಲಿಸಬೇಕು. ಈ ನಮೂನೆಯಲ್ಲಿ ಸಂಘದ ಹೆಸರು, ಸ್ಥಾಪಿಸಲ್ಪಡುವ ಜಾಗದ ವಿಳಾಸ, ಸಂಘದ ಗುರಿಗಳು ಮತ್ತು ಉದ್ದೇಶಗಳು, ಸಂಘದ ಕಾರ್ಯಕ್ಷೇತ್ರದ ವ್ಯಾಪ್ತಿ, ಷೇರುಗಳ ನೀಡಿಕೆಯಿಂದ ಸಂಗ್ರಹಿಸಬಹುದಾದ ಬಂಡವಾಳ, ಸದಸ್ಯರ ಹೊಂದಾಣಿಕೆ ಮುಂತಾದವು ಪೂರ್ಣವಾಗಿ ನಮೂದಿಸಿರಬೇಕು. ಈ ನಿಬಂಧನೆಗಳು ಮತ್ತು ಉಪನಿಬಂಧನೆಗಳನ್ನು ಸಂಘದ ನಿಬಂಧನೆಗಳು (By-laws) ಎನ್ನುತ್ತಾರೆ. ಅರ್ಜಿ ಮತ್ತು ಉಪನಿಬಂಧನೆಗಳನ್ನು ಪಡೆದ ಬಳಿಕ ಆ ಪ್ರಾಂತ್ಯದ ನೋಂದಣಾಧಿಕಾರಿಗಳು ಕೂಲಂಕುಶವಾಗಿ ಪರಿಶೀಲಿಸಿ ತಮಗೆ ನಿಯಮಾನುಸಾರವಾಗಿದೆ ಎಂದು ತೃಪ್ತಿಯಾದರೆ ಸಂಘವನ್ನು ನೋಂದಣಿ ಮಾಡಿಕೊಂಡು ನೋಂದಣಿ ಪ್ರಮಾಣ ಪತ್ರವನ್ನು ನೀಡುತ್ತಾರೆ. ಈ ಪತ್ರ ಬಂದ ಮೇಲೆ ಸಂಘವು ಕಾನೂನು ಬದ್ಧವಾಗಿ ಅಸ್ತಿತ್ವಕ್ಕೆ ಬರುತ್ತದೆ.

**ಸಹಕಾರಿ ಸಂಘಗಳ ಸಾಮಾನ್ಯ ಲಕ್ಷಣಗಳು**

- ಇವು ವ್ಯಕ್ತಿಗಳ ಸ್ವಯಂ ಪ್ರೇರಿತ ಸಂಸ್ಥೆಗಳಾಗಿವೆ.
- ಇಲ್ಲಿನ ಸದಸ್ಯತ್ವವು ಜಾತಿ, ಧರ್ಮ, ವರ್ಗ ಮತ್ತು ಲಿಂಗ ಬೇಧವಿಲ್ಲದೆ ಎಲ್ಲ ವಯಸ್ಕರಿಗೂ ತೆರೆದಿರುತ್ತದೆ.
- ಇಲ್ಲಿ ಸದಸ್ಯರ ಸಂಖ್ಯೆಗೆ ಗರಿಷ್ಠ ಮಿತಿ ಇರುವುದಿಲ್ಲ.
- ಇಲ್ಲಿ ಪ್ರಜಾಪ್ರಭುತ್ವದ ಮಾದರಿಯ ಆಡಳಿತ ಇರುತ್ತದೆ ಅಂದರೆ ಸಂಘದ ಸರ್ವ ಸಾಮಾನ್ಯ ಸಭೆಗೆ ಎಲ್ಲ ಸದಸ್ಯರೂ ಹಾಜರಾಗಬಹುದು ಮತ್ತು ಪ್ರತಿ ಸದಸ್ಯನಿಗೂ ಎಷ್ಟೇ ಬಂಡವಾಳ ಹೂಡಿದ್ದರೂ ಒಂದೇ ಮತ ಚಲಾಯಿಸಲು ಹಕ್ಕಿರುತ್ತದೆ.
- ಸಂಸ್ಥೆಯ ಲಾಭವನ್ನು ಬಂಡವಾಳ ಹೂಡಿಕೆಗನುಗುಣವಾದ ಪ್ರಮಾಣದಲ್ಲಿ ಹಂಚಲಾಗುತ್ತದೆ. (ಶೇ. 6.25 ಕ್ಕಿಂತ ಕಡಿಮೆ ಇಲ್ಲದಂತೆ)
- ಲಾಭದ ಒಂದು ಭಾಗ ಸಂಘದ ಸಾಮಾನ್ಯ ನಿಧಿಗೆ ವರ್ಗಾಯಿಸಲಾಗುತ್ತದೆ.
- ಇವುಗಳ ಸ್ಥಾನಮಾನ ಹಾಗೂ ನಿಯಂತ್ರಣ ಸರ್ಕಾರದ ಮೇಲ್ವಿಚಾರಣೆಗೆ ಒಳಗಾಗಿರುತ್ತದೆ.

**ಸಹಕಾರಿ ಸಂಘಗಳ ವಿಧಗಳು**

1 ಸಾಲದ ಸಹಕಾರಿ ಸಂಘಗಳು (Credit Co-operative societies)

2 ಮಾರುಕಟ್ಟೆ ಸಹಕಾರಿ ಸಂಘಗಳು (Co-operative Marketing societies)

3 ಉತ್ಪಾದಕರ ಸಹಕಾರಿ ಸಂಘಗಳು (Producers Co-operative societies)

4 ಗ್ರಾಹಕರ ಸಹಕಾರಿ ಸಂಘಗಳು (Consumers Co-operative societies)

5 ಬೇಸಾಯಗಾರರ ಸಹಕಾರಿ ಸಂಘಗಳು (Farmers Co-operative societies)

6 ಗೃಹನಿರ್ಮಾಣ ಸಹಕಾರಿ ಸಂಘಗಳು (House building Co-operative societies)

7 ವಿವಿಧ ರೀತಿಯ ಸೇವೆಗಳಿಗಾಗಿ ಸಹಕಾರಿ ಸಂಘಗಳು (Co-opertive societies for different services) ಉದಾ: ವಿದ್ಯಾಭ್ಯಾಸ ಸಂಸ್ಥೆಗಳ ಸ್ಥಾಪನೆ, ನಿರ್ವಹಣೆ, ನೀರು ಸರಬರಾಜು ಮಾಡುವುದು ಮುಂತಾದವು.

**ಸಹಕಾರಿ ಸಂಘಗಳ ಪ್ರಯೋಜನಗಳು:**_ಇವುಗಳ ರಚನೆ ಸುಲಭ. ಹೆಚ್ಚು ಬಂಡವಾಳದ ಅಗತ್ಯವಿಲ್ಲ. ಎಲ್ಲ ಸದಸ್ಯರಿಗೂ ಸಮನಾದ ಹಕ್ಕು ಬಾಧ್ಯತೆಗಳಿರುತ್ತವೆ. ಸದಸ್ಯರಲ್ಲಿ ತಾರತಮ್ಯವಿರುವುದಿಲ್ಲ. ಪ್ರಜಾಪ್ರಭುತ್ವ ಮಾದರಿಯ ರೀತಿಯಲ್ಲಿ ನಡೆಯುತ್ತದೆ. ಪ್ರತಿಸದಸ್ಯನಿಗೂ ಒಂದೇ ಮತದಾನದ ಹಕ್ಕಿರುತ್ತದೆ. ಸದಸ್ಯರ ಹೊಣೆಗಾರಿಕೆ ಸೀಮಿತವಾಗಿರುತ್ತದೆ. ಸದಸ್ಯರು ಉಳಿತಾಯ ಮಾಡುವ ಅಭ್ಯಾಸ ಮಾಡಿಕೊಳ್ಳುತ್ತಾರೆ. ಇದು ಬಂಡವಾಳಶಾಹಿ ಮತ್ತು ಸಮಾಜಶಾಹಿ ಪದ್ಧತಿಗಳ ಮಧ್ಯೆ ಉತ್ತಮ ವ್ಯವಸ್ಥೆಯಾಗಿದೆ. 'ಎಲ್ಲರಿಗಾಗಿ ಒಬ್ಬನು ಮತ್ತು ಒಬ್ಬನಿಗಾಗಿ ಎಲ್ಲರು' ಎಂಬುದು ಸಹಕಾರಿ ಸಂಘಗಳ ಪ್ರಮುಖ ಧ್ಯೆಯವಾಗಿದೆ.

**ಸಹಕಾರಿ ಸಂಘಗಳ ದೋಷಗಳು :** ಬಂಡವಾಳದ ಮಿತಿ ಇರುವುದರಿಂದ ದೊಡ್ಡಪ್ರಮಾಣದ ವಹಿವಾಟನ್ನು ಮಾಡಲು ಸಾಧ್ಯವಿಲ್ಲ. ಸರಿಯಾದ ನೌಕರರು ಸಿಗುವುದು ಕಷ್ಟವಾಗುತ್ತದೆ. ಆಡಳಿತದ ದುರುಪಯೋಗ ಮಾಡಿಕೊಳ್ಳುವ ಸಾಧ್ಯತೆಗಳಿವೆ. ಹಣವನ್ನು ದುರುಪಯೋಗ ಮಾಡಿಕೊಳ್ಳುವ ಅವಕಾಶಗಳಿರುತ್ತವೆ. ಪಕ್ಷಪಾತ ಮತ್ತು ಲಂಚಗುಳಿತನಕ್ಕೆ ಅವಕಾಶಗಳಿರುತ್ತವೆ.

**ಭಾರತದಲ್ಲಿ ಸಹಕಾರಿ ಪದ್ಧತಿಯ ಆಂದೋಲನ :**_ಭಾರತದಲ್ಲಿ ಸಹಕಾರಿ ಸಂಘಗಳ ಕಾಯಿದೆಯನ್ನು ಜಾರಿಗೆ ತರುವುದರ ಮೂಲಕ 1904ರಲ್ಲಿ ಸಹಕಾರಿ ಸಂಘಗಳು ಪ್ರಾರಂಭವಾದವು. 1912ರಲ್ಲಿ ಒಂದು ಶಾಸನವು ಜಾರಿಗೆ ಬಂದು ನೋಂದಣಿ ಮಾಡುವುದನ್ನು ಕಡ್ಡಾಯಗೊಳಿಸಲಾಯಿತು. ಸ್ವಾತಂತ್ರ್ಯ ನಂತರ ಪಂಚವಾರ್ಷಿಕ ಯೋಜನೆಗಳ ಅಡಿಯಲ್ಲಿ ಸಹಕಾರಿ ಸಂಘಗಳು ಹೆಚ್ಚು ಪ್ರವರ್ಧಮಾನಕ್ಕೆ ಬಂದವು. ಈಗ ನಮ್ಮ ದೇಶದಲ್ಲಿ ಸುಮಾರು ಎಂಟು ಲಕ್ಷ ಸಹಕಾರಿ ಸಂಘಗಳಿವೆ. ಕರ್ನಾಟಕದಲ್ಲಿ ಮೊದಲ ಸಹಕಾರಿ ಸಂಘವು ಈಗಿನ ಗದಗ್ ಜಿಲ್ಲೆಯ ಗದಗ್ ತಾಲ್ಲೂಕಿನ 'ಕಣಗಿನಹಾಳ್' ಎಂಬಲ್ಲಿ ಪ್ರಾರಂಭವಾಯಿತು. ಬೆಂಗಳೂರು ನಗರ ಕೇಂದ್ರ ಸಹಕಾರಿ ಸಂಘವು 1905ರಲ್ಲಿ ಪ್ರಾರಂಭವಾಯಿತು. ಧಾರವಾಡ ಜಿಲ್ಲೆಯು ಸಹಕಾರಿ ಸಂಘಗಳ ಸ್ಥಾಪನೆಗೆ ಹೆಚ್ಚು ಮಹತ್ವಕೊಟ್ಟಿದ್ದರಿಂದ ಈ ಜಿಲ್ಲೆಯನ್ನು 'ಸಹಕಾರಿ ಸಂಘಗಳ ತೊಟ್ಟಿಲು' ಎಂದು ಕರೆಯುತ್ತಾರೆ.

### 2. ಕೂಡು ಬಂಡವಾಳ ಸಂಸ್ಥೆಗಳು (Joint Stock Companies):

ಈ ಸಂಸ್ಥೆಗಳ ಸ್ಥಾಪನೆ, ಕಾರ್ಯಾಚರಣೆ ವಿಸ್ತರಣೆ ಮಾನ್ಯತೆ ಮತ್ತು ವಿಸರ್ಜನೆಯನ್ನು ಭಾರತದ ಕಂಪನಿ ಕಾಯಿದೆ 1956 ನಿಯಂತ್ರಿಸುತ್ತದೆ. ಇದರ ಪ್ರಕಾರ 'ಒಂದು ಕಂಪನಿ ಎಂದರೆ ಕಾನೂನಿಂದ ಸೃಷ್ಟಿಯಾದ, ಒಬ್ಬ ಕೃತಕ ವ್ಯಕ್ತಿ, ಅದು ನಿರಂತರ ಉತ್ತರಾಧಿಕಾರಿ ಮತ್ತು ಸಾಮಾನ್ಯ ಮುದ್ರೆಯೊಂದಿಗೆ ಪ್ರತ್ಯೇಕ ಕಾನೂನು ಬದ್ದ ಅಸ್ತಿತ್ವವನ್ನು ಹೊಂದಿರುತ್ತದೆ.'

ಹೆನಿಯ ಪ್ರಕಾರ 'ಬಂಡವಾಳ ಸಂಸ್ಥೆಯು ಪ್ರತಿಯೊಬ್ಬರ ಸ್ವಯಂ ಪ್ರೇರಿತ ಸಂಸ್ಥೆಯಾಗಿದ್ದು. ಇದರ ಬಂಡವಾಳವು ವರ್ಗಾವಣೆ ಮಾಡಬಹುದಾದ ಷೇರುಗಳ ರೂಪದಲ್ಲಿರುತ್ತಿದೆ. ಮಾಲೀಕತ್ವವು ಸದಸ್ಯತ್ವದ ನಿಬಿಂದನೆಗೊಳಿಪಟ್ಟಿರುವುದು.'

**ಕೂಡು ಬಂಡವಾಳ ಸಂಸ್ಥೆಗಳ ವಿಧಗಳು**

1. ಚಾರ್ಟರ್ಡ್ ಕಂಪನಿಗಳು
2. ಶಾಸನಬದ್ಧ ಕಂಪನಿಗಳು
3. ನೋಂದಾಯಿಸಿದ ಕಂಪನಿಗಳು
4. ಷೇರುಗಳಿಂದ ನಿಯಮಿತವಾದ ಕಂಪನಿಗಳು
5. ಖಾತರಿ ಅಥವಾ ಭರವಸೆಯಿಂದ ನಿಯಮಿತವಾದ ಕಂಪನಿಗಳು
6. ಅನಿಯಮಿತ ಕಂಪನಿಗಳು
7. ಸರ್ಕಾರಿ ಕಂಪನಿಗಳು
8. ವಿದೇಶಿ ಕಂಪನಿಗಳು
9. ಹಿಡುವಳಿ ಕಂಪನಿಗಳು
10. ಅಧೀನ ಕಂಪನಿಗಳು

**ಕೂಡು ಬಂಡವಾಳ ಕಂಪನಿಗಳ ಪ್ರವರ್ತನೆ /ರಚನೆ (Promotion of Joint Stock Companies)**



ಕೂಡು ಬಂಡವಾಳ ಕಂಪನಿಗಳ ಸ್ಥಾಪನೆಯು ಕೆಲವು ಹಂತಗಳಿಂದ ಕೂಡಿರುತ್ತದೆ. ಆ ಹಂತಗಳು ಯಾವುವೆಂದರೆ:

1. ಪ್ರವರ್ತನೆ / ರಚನೆ
2. ನೋಂದಣಿ
3. ಬಂಡವಾಳ ವಂತಿಕೆ ಅಥವಾ ಷೇರು ಬಂಡವಾಳವನ್ನು ಸಂಗ್ರಹಿಸುವುದು
4. ವ್ಯಾಪಾರದ ಆರಂಭ

**1. ಪ್ರವರ್ತನೆ :** ಕಂಪನಿಯ ಸ್ಥಾಪನೆಯ ಉದ್ದೇಶದಿಂದ ಕೆಲವು ವ್ಯಕ್ತಿಗಳು ಒಟ್ಟುಗೂಡಿ, ಸಂಸ್ಥೆ ಸ್ಥಾಪಿಸಲು ಕ್ರಮಗಳನ್ನು ಕೈಗೊಳ್ಳುತ್ತಾರೆ. ಇವರನ್ನು ಪ್ರವರ್ತಕರೆಂದು ಕರೆಯುತ್ತಾರೆ. ಇವರು ವ್ಯಾಪಾರದ ಪ್ರಸ್ತಾವನೆಯ ವಿವರ ಮತ್ತು ಅಗತ್ಯಗಳನ್ನು ಒಟ್ಟುಗೂಡಿಸಿ, ವ್ಯಾಪಾರದ ಪ್ರಾರಂಭಕ್ಕೆ ಹಣಕಾಸಿನ ಪೂರೈಕೆ ಇತ್ಯಾದಿಗಳನ್ನು ನಿರ್ವಹಿಸುತ್ತಾರೆ. ಕಂಪನಿಯ ನೋಂದಣಿಗೆ ಬೇಕಾದ ಸಂಘಟನೆಯ ಮನವಿ ಪತ್ರ, ಲಿಖಿತ ಕಟ್ಟಳೆಗಳು ಇತ್ಯಾದಿ ಅಗತ್ಯ ದಾಖಲೆಗಳನ್ನು ತಯಾರಿಸಿ ಕಂಪನಿಗಳ ನೋಂದಣಾಧಿಕಾರಿಗೆ ನೋಂದಣಿಗಾಗಿ ಸಲ್ಲಿಸುತ್ತಾರೆ. ಷೇರು ಬಂಡವಾಳ ಹೊಂದಿರುವ ಸಾರ್ವಜನಿಕ ಕಂಪನಿಯಲ್ಲಿ ವ್ಯಾಪಾರಕ್ಕೆ ಅಗತ್ಯವಾದ ಬಂಡವಾಳ ಸಂಗ್ರಹಣೆಯ ಕಾರ್ಯ ಕೈಗೊಳ್ಳುತ್ತಾರೆ ಮತ್ತು ವ್ಯಾಪಾರದ ಆರಂಭದ ಪ್ರಮಾಣಪತ್ರ ಪಡೆಯುವ ಕೆಲಸವನ್ನು ನಿರ್ವಹಿಸುತ್ತಾರೆ. ಇವರು ಕಂಪನಿಯ ಮೊದಲ ನಿರ್ದೇಶಕರಾಗಿ ಕಂಪನಿಯ ಪಾಲನೆ ಮತ್ತು ಪೋಷಣೆ ಮಾಡುತ್ತಾರೆ.

**2. ನೋಂದಣಿ :** ಸಾರ್ವಜನಿಕ ಕಂಪನಿಯ ನೋಂದಣಿಗೆ ಕಂಪನಿಯು ಒಂದು ಹೆಸರನ್ನು ಆರಿಸಬೇಕು. ಈ ಹೆಸರು ಈಗಾಗಲೆ ಅಸ್ತಿತ್ವದಲ್ಲಿರುವ ಕಂಪನಿಯ ಹೆಸರಿನಂತಿರಬಾರದು ಹಾಗೂ ಸರ್ಕಾರದ ಆಶ್ರಿತ ಕಂಪನಿಯ ಅರ್ಥವನ್ನು ಕೊಡಬಾರದು. ಕಂಪನಿಯ ನೋಂದಣಿಗೆ ಸಂಘಟನೆಯ ಮನವಿಪತ್ರ ಮತ್ತು ಲಿಖಿತ ಕಟ್ಟಲೆಗಳನ್ನು ತಯಾರಿಸಿ ಕಂಪನಿಗಳ ನೋಂದಣಾಧಿಕಾರಿಗೆ ಸಲ್ಲಿಸಬೇಕು. ಈ ಲಿಖಿತ

ಕಟ್ಟಲೆಯಲ್ಲಿ ನಿಗದಿತ ವಿಷಯಗಳನ್ನು ಕೂಲಂಕುಶವಾಗಿ ಅಳವಡಿಸಿರಬೇಕು. ಉದಾ:– ಕಂಪನಿಯ ಹೆಸರು, ಮೊದಲ ಏಳುಜನ ಪ್ರವರ್ತಕರ ಸಹಿ, ಅವರ ವಿಳಾಸ, ಅನುಮತಿ ಪತ್ರಗಳು, ಒಬ್ಬರು ಸಾಕ್ಷಿದಾರರು. ಕಂಪನಿಯ ಒಟ್ಟು ಬಂಡವಾಳ, ಇವುಗಳ ಬೇರೆ ಬೇರೆ ವರ್ಗದ ಷೇರುಗಳು, ಅವುಗಳ ವಿಭಜನೆ ಮತ್ತು ಎಲ್ಲ ವಿಷಯಗಳು ಸಮರ್ಪಕವಾಗಿದೆ ಎಂದು ಶಾಸನಬದ್ಧ ಘೋಷಣೆಯನ್ನು ಒಬ್ಬ ಸರ್ವೋಚ್ಚ ನ್ಯಾಯಾಲಯದ ವಕೀಲರಾಗಲಿ ಅಥವ ಲೆಕ್ಕ ಪರಿಶೋಧಕರಾಗಲಿ ಸಹಿಮಾಡಬೇಕು. ಇವೆಲ್ಲವುಗಳನ್ನು ಸಮರ್ಪಕವಾಗಿ ಪೂರೈಸಿ ನಿಗಧಿತ ಶುಲ್ಕದೊಂದಿಗೆ ನೋಂದಣಾಧಿಕಾರಿಗೆ ಸಲ್ಲಿಸಬೇಕು. ಇವೆಲ್ಲವುಗಳನ್ನು ನೋಂದಣಾಧಿಕಾರಿಗಳು ಕೂಲಂಕುಶವಾಗಿ ಪರಿಶೀಲಿಸಿ ಆತನಿಗೆ ಎಲ್ಲವೂ ಸಮರ್ಪಕವಾಗಿದೆ ಎಂದು ಮನವರಿಕೆಯಾದರೆ ದಾಖಲೆಪುಸ್ತಕದಲ್ಲಿ ನೋಂದಣಿ ಮಾಡಿಕೊಂಡು ನೋಂದಣಿ ಪ್ರಮಾಣಪತ್ರ ನೀಡುತ್ತಾರೆ.

**ಕಂಪನಿಯ ಸ್ಥಾಪನೆಗೆ ಬೇಕಾದ ಅತ್ಯಂತ ಪ್ರಮುಖ ಪತ್ರಗಳು**

- ಸಂಘಟನೆಯ ಮನವಿಪತ್ರ (Memorandum of Association)
- ಲಿಖಿತ ಕಟ್ಟಲೆಗಳು (Articles of Assocication)

ಸಂಘಟನೆಯ ಮನವಿಪತ್ರವು ಕಂಪನಿಯ ಗುರಿಗಳು, ಉದ್ದೇಶಗಳು, ಒಟ್ಟು ಬಂಡವಾಳ, ವಿವಿಧ ವರ್ಗಗಳ ಷೇರುಗಳು, ಷೇರುಗಳ ಪಾವತಿಯ ರೀತಿ ಮುಂತಾದುವನ್ನು ಒಳಗೊಂಡಿರುತ್ತದೆ. ಸಂಘಟನೆಯ ಲಿಖಿತ ಕಟ್ಟಲೆಗಳು ಕಂಪನಿಯ ಆಡಳಿತಕ್ಕೆ ಸಂಬಂಧ ಪಟ್ಟ ಎಲ್ಲ ವಿವರಗಳನ್ನು ಹೊಂದಿರುತ್ತದೆ.

**3. ಬಂಡವಾಳ ವಂತಿಕೆ ಹಂತ :** ನೋಂದಣಿ ಪತ್ರ ಬಂದ ಮೇಲೆ ನಿರ್ದೇಶಕರು ಸಾರ್ವಜನಿಕರಿಂದ ಬಂಡವಾಳ ಸಂಗ್ರಹಿಸಲು ಪರಿಚಯ ಪತ್ರಿಕೆ (Prospectus) ಪ್ರಚಾರಪಡಿಸುತ್ತಾರೆ. ಇದರಂತೆ ಸಾರ್ವಜನಿಕರಿಂದ ಷೇರು ಬಂಡವಾಳದ ಸಂಗ್ರಹಣೆ ಪ್ರಾರಂಭವಾಗುತ್ತದೆ. ಖಾಸಗಿ ಕೂಡು ಬಂಡವಾಳ ಸಂಸ್ಥೆ ಪರಿಚಯ ಪತ್ರವನ್ನು ಪ್ರಚರಪಡಿಸುವಂತಿಲ್ಲ. ಇದರ ಬದಲಾಗಿ ವಿವರಣಾ ಪತ್ರವನ್ನು ನೋಂದಣಿ ಅಧಿಕಾರಿಗೆ ನೀಡುತ್ತಾರೆ.

**4. ವ್ಯಾಪಾರ ಆರಂಭದ ಹಂತ:** ನೋಂದಣಿ ಅಧಿಕಾರಿ ಘೋಷಣಾ ಪತ್ರವನ್ನು ಪರಿಶೀಲಿಸಿದ ನಂತರ ಎಲ್ಲ ಷರತ್ತುಗಳನ್ನು ಈಡೇರಿಸಲಾಗಿದೆಯೆಂದು ಕಂಡು ಬಂದಲ್ಲಿ, ಕಂಪನಿಗೆ 'ವ್ಯವಹಾರ ಆರಂಭದ ಪ್ರಮಾಣ ಪತ್ರ'ವನ್ನು ನೀಡುತ್ತಾರೆ. ತದ ನಂತರ ಸಾರ್ವಜನಿಕ ಕಂಪನಿಯು ತನ್ನ ವ್ಯಾಪಾರವನ್ನು ಪ್ರಾರಂಭಿಸಬಹುದು.

**ಕೂಡು ಬಂಡವಾಳ ಸಂಸ್ಥೆಗಳ ಅನುಕೂಲಗಳು**

- ಈ ಸಂಸ್ಥೆಗಳ ಸದಸ್ಯರ (ಷೇರುದಾರರ) ಹೊಣೆಗಾರಿಕೆ ಅಥವಾ ಜವಾಬ್ದಾರಿ ಮಿತವಾಗಿರುತ್ತದೆ. ಅಂದರೆ ಕಂಪನಿ ಏನಾದರೂ ನಷ್ಟ ಅನುಭವಿಸಿದಾಗ ಮತ್ತು ಸಾಲಗಾರರಿಗೆ ಅವರ ಸಾಲ ಹಿಂದಿರುಗಿಸಲು ಸಾಧ್ಯವಿಲ್ಲದೆ ಹೋದಾಗ ಷೇರುದಾರರ ಜವಾಬ್ದಾರಿ ಅವರು ಹೂಡಿರುವ ಷೇರುಗಳ ಮೊತ್ತದಷ್ಟಕ್ಕೆ ಸೀಮಿತವಾಗಿರುತ್ತದೆ.
- ಕೂಡು ಬಂಡವಾಳ ಸಂಸ್ಥೆಗಳಲ್ಲಿ ಷೇರುದಾರರ ಗರಿಷ್ಠ ಮಿತಿ ಇರುವುದಿಲ್ಲ. ಆದುದರಿಂದ ಹೆಚ್ಚು ಬಂಡವಾಳ ದೊರಕುವ ಸಾಧ್ಯತೆ ಇರುತ್ತದೆ.

- ಷೇರುದಾರರು ತಮ್ಮ ಷೇರುಗಳನ್ನು ಬೇರೆಯವರಿಗೆ ವರ್ಗಾಯಿಸುವ ಅವಕಾಶ ಇರುವುದರಿಂದ ಸಾರ್ವಜನಿಕರು ಹೆಚ್ಚು ಹೆಚ್ಚಾಗಿ ಬಂಡವಾಳ ಹೂಡಲು ಮುಂದೆ ಬರುತ್ತಾರೆ.
- ಕೂಡು ಬಂಡವಾಳ ಸಂಸ್ಥೆಗೆ ಕಾನೂನಿನ ರಕ್ಷಣೆ ಇರುವುದರಿಂದ ಯಾವುದೇ ನಿರ್ದೇಶಕನಾಗಲಿ ಅಥವಾ ಷೇರುದಾರನಾಗಲಿ ಮರಣ ಹೊಂದಿದರೆ ಅಥವ ದಿವಾಳಿಯಾದರೆ ಕಂಪನಿಯನ್ನು ಮುಚ್ಚಬೇಕಾಗಿಲ್ಲ, ವ್ಯವಹಾರ ನಡೆದುಕೊಂಡು ಹೋಗುತ್ತದೆ.
- ಹೆಚ್ಚು ಬಂಡವಾಳ ಹಾಗೂ ಕಾರ್ಯಕೌಶಲತೆ ಇರುವುದರಿಂದ ದೊಡ್ಡಪ್ರಮಾಣದ ವ್ಯವಹಾರಗಳನ್ನು ನಡೆಸಲು ಸಾಧ್ಯವಾಗುತ್ತದೆ.
- ಹೆಚ್ಚು ಪ್ರಮಾಣದ ಉತ್ಪಾದನೆಗೆ ಅವಕಾಶವಿರುವುದರಿಂದ ಸಾಮಾನ್ಯವಾಗಿ ಉತ್ಪಾದನೆಯಾಗುವ ವಸ್ತುಗಳ ಬೆಲೆ ಕಡಿಮೆ ಇರುತ್ತದೆ ಹಾಗೂ ಸ್ಪರ್ಧಾತ್ಮಕ ಬೆರೆಗೆ ಮಾರಲು ಸಾಧ್ಯವಾಗುತ್ತದೆ.
- ಹೆಚ್ಚು ಜನರಿಗೆ ಉದ್ಯೋಗಾವಕಾಶ ಕಲ್ಪಿಸುತ್ತವೆ. ಜನರಲ್ಲಿ ಉಳಿತಾಯ ಮನೋಭಾವ ಬೆಳೆಸುತ್ತವೆ ಹಾಗೂ ಸರ್ಕಾರಕ್ಕೆ ಕರ, ತೆರಿಗೆಗಳನ್ನು ಪಾವತಿ ಮಾಡುವುದರಿಂದ ದೇಶದ ಆದಾಯ ಹೆಚ್ಚಾಗುತ್ತದೆ.
- ವಿದೇಶಿ ವಿನಿಮಯಕ್ಕೆ ಹೆಚ್ಚು ಸಹಾಯ ಮಾಡುವುದರೊಂದಿಗೆ ದೇಶಕ್ಕೆ ಗಳಿಗೆ ಹೆಚ್ಚಾಗುವುದು.
- ತಜ್ಞರ ಸೇವೆಯಿಂದ ಆಡಳಿತ ನಡೆಸಬಹುದು.

**ಕೂಡು ಬಂಡವಾಳ ಸಂಸ್ಥೆಗಳ ದೋಷಗಳು:**

- ಅಸ್ತಿತ್ವಕ್ಕೆ ತರುವುದು ಹೆಚ್ಚು ವೆಚ್ಚದಿಂದ ಕೂಡಿರುತ್ತದೆ ಮತ್ತು ಅನೇಕ ನಿಯಮಗಳನ್ನು ಅನುಸರಿಸಬೇಕಾಗಿರುವುದರಿಂದ ಕಷ್ಟವೂ ಹೌದು.
- ಷೇರುದಾರರು ಕಂಪನಿಯ ನಿಜಮಾಲೀಕರಾಗಿರುತ್ತಾರೆ. ಆದರೆ ಅವರು ಕಂಪನಿಯ ವಹಿವಾಟುಗಳಲ್ಲಿ ಭಾಗವಹಿಸುವುದಿಲ್ಲ. ನಿರ್ದೇಶಕರು ಮಾತ್ರ ಕಂಪನಿಯ ವಹಿವಾಟುಗಳನ್ನು ನೋಡಿಕೊಳ್ಳುತ್ತಾರೆ. ಷೇರುದಾರರು ವಾರ್ಷಿಕ ಸಾಮಾನ್ಯ ಸಭೆಗಳಲ್ಲೂ ಹೆಚ್ಚಾಗಿ ಭಾಗವಹಿಸುವುದಿಲ್ಲ.
- ನಿಜಮಾಲೀಕರ ಮತ್ತು ಕೆಲಸಗಾರರ ಮಧ್ಯೆ ಯಾವುದೆ ನಿಕಟ ಸಂಬಂಧವಿರುವುದಿಲ್ಲ.
- ಮಿತಿಯಾದ ಹೊಣೆಗಾರಿಕೆ ಅಥವಾ ಜವಾಬ್ದಾರಿಯಿಂದಾಗಿ ನಿರ್ದೇಶಕರು ತಪ್ಪು ತೀರ್ಮಾನಗಳನ್ನು ತೆಗೆದುಕೊಳ್ಳುವ ಸಾಧ್ಯತೆಗಳು ಇರುತ್ತವೆ.
- ಕಂಪನಿಯ ಎಲ್ಲ ಅಧಿಕಾರವೂ ಕೇವಲ ಕೆಲವು ವ್ಯಕ್ತಿಗಳ ಕೈಯಲ್ಲಿರುತ್ತದೆ. ಇವರು ಅನೇಕ ವೇಳೆ ಸರ್ವಾಧಿಕಾರಿಗಳಂತೆ ವರ್ತಿಸುತ್ತಾರೆ.
- ಅನೇಕ ಸಂದರ್ಭಗಳಲ್ಲಿ ದೊಡ್ಡ ದೊಡ್ಡ ಸಾರ್ವಜನಿಕ ಕೂಡು ಬಂಡವಾಳ ಸಂಸ್ಥೆಗಳು ಸರ್ಕಾರವನ್ನು ತಮ್ಮ ಹಿಡಿತಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತದೆ.

### 3. ಬಹುರಾಷ್ಟ್ರೀಯ ಕಂಪನಿಗಳು (Multi National Companies)

ಈ ರೀತಿಯ ವ್ಯವಹಾರ ಸಂಸ್ಥೆಗಳು 1860 ರಷ್ಟು ಹಿಂದೆಯೇ ಜನ್ಮತಾಳಿದವು. ಆದರೆ ಎರಡನೆ ಪ್ರಪಂಚ ಯುದ್ಧದ ನಂತರ ಪ್ರಾಮುಖ್ಯತೆಗೊಂಡವು. ಪ್ರಾರಂಭದಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನಗಳು ಇವುಗಳ ತವರೂರಾಗಿತ್ತು. ನಂತರ ಯೂರೋಪಿನ ಕೆಲವು ದೇಶಗಳಲ್ಲಿ ಮತ್ತು ಜಪಾನ್ ದೇಶಗಳಲ್ಲಿ ಉದಯಿಸಿದವು. ಈಗ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೂ ಬೆಳೆದಿದೆ. ಉದಾ:– ದಕ್ಷಿಣ ಕೊರಿಯ, (ಭಾರತೀಯ ಸಂಸ್ಥೆಗಳಾದ ಟಾಟಾ, ಬಿರ್ಲಾ ಭಾರತದ ಬಹುರಾಷ್ಟ್ರೀಯ ಕಂಪನಿಗಳಾಗಿವೆ).

**ಬಹುರಾಷ್ಟ್ರೀಯ ಕಂಪನಿಗಳ ಅರ್ಥ ಮತ್ತು ವಿವರಣೆ :** ಇವು ಎರಡು ಅಥವಾ ಎರಡಕ್ಕಿಂತ ಹೆಚ್ಚು ದೇಶಗಳಲ್ಲಿ ಉದ್ಯಮದ ಒಡೆತನವನ್ನು ಹೊಂದಿರುತ್ತವೆ ಮತ್ತು ಕಾರ್ಯ ನಿರ್ವಹಿಸುತ್ತದೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ (I L O) ವರದಿಯಂತೆ ಇವುಗಳ ನಿರ್ವಹಣೆಯ ಕೇಂದ್ರವು ಒಂದು ದೇಶದಲ್ಲಿದ್ದು ಅವು ಇತರ ಅನೇಕ ದೇಶಗಳಲ್ಲಿ ತಮ್ಮ ವ್ಯವಹಾರ ನಡೆಸುತ್ತವೆ. ಉದಾ: ಸೋನಿ (ಜಪಾನ್), ಕೋಕಕೋಲ (U.S.A), ಸ್ಯಾಮ್‌ಸಂಗ್ (ದ.ಕೊರಿಯ), ಹಿಂದುಸ್ಥಾನ್ ಲಿವರ್ (U.K), ಫಿಲಿಪ್ಸ್ (ಹಾಲೆಂಡ್), ಗ್ಲಾಸ್ಕೊ (U.K) ಮುಂತಾದವು. ಕೇಂದ್ರ ಕಛೇರಿ ಇರುವ ದೇಶವನ್ನು ತವರು ದೇಶವೆನ್ನುತ್ತಾರೆ, ವ್ಯಾಪ್ತಿಗೆ ಬರುವ ದೇಶಗಳನ್ನು ಆಶ್ರಯದಾತ ದೇಶಗಳೆನ್ನುತ್ತಾರೆ

**ಲಕ್ಷಣಗಳು :**

1 ಇವು ಬೃಹತ್ ಕಂಪನಿಗಳಾಗಿರುತ್ತವೆ. ಆಸ್ತಿಗಳು ಮತ್ತು ವಹಿವಾಟುಗಳು ದೊಡ್ಡ ಪ್ರಮಾಣದಲ್ಲಿರುತ್ತವೆ.

2 ಇವು ಕನಿಷ್ಠ ಆರು ದೇಶಗಳಲ್ಲಿ ತಮ್ಮ ಕಾರ್ಯ ನಿರ್ವಹಿಸುತ್ತವೆ.

3 ಇವು ತಮ್ಮ ವ್ಯಾಪಾರದ ವ್ಯಾಪ್ತಿಯಲ್ಲಿರುವ ದೇಶಗಳಲ್ಲೂ ಸರಕುಗಳನ್ನು ಉತ್ಪಾದಿಸುತ್ತವೆ.

4 ಇವು ಅನೇಕ ದೇಶಗಳಲ್ಲಿ ಉತ್ಪಾದನೆ, ವಿಕ್ರಯ ಮತ್ತು ಇತರ ಸೌಲಭ್ಯಗಳನ್ನು ಹೊಂದಿರುತ್ತವೆ.

5 ಕೇಂದ್ರ ಕಛೇರಿಯು ಕೇಂದ್ರೀಕೃತ ನಿಯಂತ್ರಣ ಹೊಂದಿರುತ್ತದೆ.

6 ಇವು ವಿಶ್ವ ಮಾರುಕಟ್ಟೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

7 ತಮ್ಮ ವ್ಯಾಪ್ತಿಯಲ್ಲಿರುವ ದೇಶಗಳಲ್ಲೂ ತಂತ್ರಜ್ಞಾನದ ಸೌಲಭ್ಯ ಒದಗಿಸುತ್ತವೆ.

**ಪ್ರಯೋಜನಗಳು**

**ತವರು ದೇಶಕ್ಕೆ :**

1 ಕಡಿಮೆ ಬೆಲೆಯಲ್ಲಿ ಆಶ್ರಯದಾತ ದೇಶಗಳಿಂದ ಕಚ್ಚಾ ಪದಾರ್ಥಗಳನ್ನು ಪಡೆಯಬಹುದಾಗಿದೆ

2 ಆಶ್ರಯದಾತ ದೇಶಗಳಿಂದ ತಂತ್ರಜ್ಞಾನ ಹಾಗೂ ಆಡಳಿತ ಕೌಶಲ್ಯಗಳನ್ನು ಪಡೆಯಬಹುದು.

3 ಆಶ್ರಯದಾತ ದೇಶಗಳಿಗೆ ಕಚ್ಚಾ ಪದಾರ್ಥಗಳನ್ನು ಮತ್ತು ಸಿದ್ಧಪಡಿಸಿದ ವಸ್ತುಗಳನ್ನು ರಫ್ತು ಮಾಡುವುದರಿಂದ ಲಾಭದ ಪ್ರಮಾಣ ಹೆಚ್ಚಾಗಿರುತ್ತದೆ.

4 ಆಶ್ರಯದಾತ ದೇಶಗಳಿಂದ ಲಾಭಾಂಶದ ಜೊತೆಗೆ ರಾಜಧನ (Royalty) ಮತ್ತು ಆಡಳಿತಾತ್ಮಕ ಒಪ್ಪಂದಗಳಿಂದಲೂ ಭಾರಿ ಆದಾಯ ಗಳಿಸಲು ಸಾಧ್ಯವಾಗುತ್ತದೆ.

5 ತವರು ದೇಶದಲ್ಲಿ ಹೆಚ್ಚು ಉದ್ಯೋಗಾವಕಾಶಗಳನ್ನು ಕಲ್ಪಿಸುತ್ತದೆ.

**ಆಶ್ರಯದಾತ ದೇಶಗಳಿಗಾಗುವ ಪ್ರಯೋಜನಗಳು**

1 ಆಶ್ರಯದಾತ ದೇಶಗಳಲ್ಲೂ ಬಂಡವಾಳ ಹೂಡಿಕೆಯ ಮಟ್ಟ ಹೆಚ್ಚಿಸುತ್ತವೆ.

2 ಆಶ್ರಯದಾತ ದೇಶಗಳು ಅಭಿವೃದ್ಧಿಶೀಲ ರಾಷ್ಟ್ರಗಳಾಗಿದ್ದಲ್ಲಿ ಅವುಗಳಿಗೆ ತಂತ್ರಜ್ಞಾನದ ಸೌಲಭ್ಯ ಒದಗಿಸುತ್ತವೆ ಮತ್ತು ಆಡಳಿತಾತ್ಮಕ ತಂತ್ರಗಳ ಮೂಲಕ ಕ್ರಾಂತಿ ಉಂಟುಮಾಡುತ್ತವೆ.

3 ಆಶ್ರಯದಾತ ರಾಷ್ಟ್ರಗಳ ರಫ್ತನ್ನು ಹೆಚ್ಚಿಸಿ ಆಮದು ಕಡಿಮೆ ಮಾಡಲು ಸಹಾಯವಾಗುತ್ತದೆ.

4 ಉತ್ತಮ ಮಟ್ಟದ ವಸ್ತುಗಳ ತಯಾರಿಕೆಗೆ ಸಾಧ್ಯವಾಗುತ್ತದೆ.

5 ಆಶ್ರಯದಾತ ದೇಶಗಳಲ್ಲಿ ಉದ್ಯೋಗಾವಕಾಶಗಳು ಹೆಚ್ಚುತ್ತವೆ. ಸಂಶೋಧನೆ ಮತ್ತು ಅಭಿವೃದ್ಧಿ ವ್ಯವಸ್ಥೆ ಹೆಚ್ಚಲು ಸಹಾಯಮಾಡುತ್ತವೆ.

6 ಆಂತರಿಕ ಸಂಪನ್ಮೂಲಗಳು ಹೆಚ್ಚು ಬಳಕೆಯಾಗಲು ಸಹಾಯ ಮಾಡುತ್ತವೆ.

**ಬಹುರಾಷ್ಟ್ರೀಯ ಕಂಪನಿಗಳ ದೋಷಗಳು**

ಗರಿಷ್ಟ ಲಾಭ ತವರು ದೇಶಕ್ಕೆ ಹೋಗುತ್ತದೆ. ಇವುಗಳ ಪ್ರಾಬಲ್ಯದಿಂದ ಆಶ್ರಯದಾತ ರಾಷ್ಟ್ರಗಳ ಹಿತಾಸಕ್ತಿಗೆದಕ್ಕೆ ಉಂಟಾಗುತ್ತದೆ. ಆಶ್ರಯ ರಾಷ್ಟ್ರಗಳಲ್ಲಿ ಪೈಪೋಟಿ ನಾಶವಾಗಿ ಏಕಸ್ವಾಮ್ಯ ಉಂಟಾಗುತ್ತದೆ. ಇವುಗಳ ಮೇಲೆ ಮಾನವಹಕ್ಕುಗಳನ್ನು ಉಲ್ಲಂಘಿಸುವ ಆರೋಪಗಳಿವೆ. ಆಶ್ರಯ ರಾಷ್ಟ್ರಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳು ಕಡಿಮೆಯಾಗುವ ಸಾಧ್ಯತೆಗಳಿವೆ. ಈ ಕಂಪನಿಗಳು ಅನೇಕ ಸಂದರ್ಭಗಳಲ್ಲಿ ತೆರಿಗೆಗಳ ಪಾವತಿಯನ್ನು ತಪ್ಪಿಸುವ ಮಾರ್ಗಗಳನ್ನು ಅನುಸರಿಸುತ್ತಾರೆ. ಇವು ಆಶ್ರಯ ದೇಶದಲ್ಲಿ ಕಾರ್ಮಿಕ ಶೋಷಣೆ ನಡೆಸುತ್ತವೆ. ಆಶ್ರಯ ರಾಷ್ಟ್ರಗಳು ಹೆಚ್ಚು ಬಂಡವಾಳ ಹೂಡುವಂತೆ ಮಾಡುತ್ತವೆ. ಅನೇಕ ವೇಳೆ ತಂತ್ರಜ್ಞಾನದ ಕೊಡುಗೆ ಸಮಂಜಸವಾಗಿರುವುದಿಲ್ಲ. ಇವು ಅನೇಕ ವೇಳೆ ಆಶ್ರಯ ರಾಷ್ಟ್ರಗಳ ರಾಜಕೀಯ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡುತ್ತವೆ.

ಭಾರತದಲ್ಲಿ ಹಿಂದೆ ಕೈಗಾರಿಕಾ ನೀತಿಯಿಂದ ವಿದೇಶ ಬಂಡವಾಳ ಹೂಡಿಕೆಗೆ ಅನೇಕ ನಿರ್ಬಂಧಗಳಿದ್ದವು. 1991 ರ ಆರ್ಥಿಕ ನೀತಿಯ ಉದಾರೀಕರಣದಿಂದಾಗಿ ಅನೇಕ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ವ್ಯವಹಾರವನ್ನು ವಿಸ್ತರಿಸಿವೆ ಹಾಗೂ ಅನೇಕ ಭಾರತೀಯ ಕಂಪನಿಗಳು ಕೂಡ ವಿದೇಶಗಳಲ್ಲಿ ತಮ್ಮ ವ್ಯವಹಾರಗಳ ಮೂಲಕ ಬಹುರಾಷ್ಟ್ರೀಯ ಕಂಪನಿಗಳಾಗಿವೆ. ಉದಾ: ವಿಪ್ರೋ, ಇನ್‌ಫೋಸಿಸ್. ಈಗ ಸುಮಾರು 40 ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿವೆ.

ವ್ಯವಹಾರ ಸಂಘಟನೆಗಳ ವಿವಿಧ ರೀತಿಗಳಲ್ಲಿ ಖಾಸಗಿರಂಗದ ಏಕಸ್ವಾಮ್ಯ ಸಂಸ್ಥೆಗಳು, ಪಾಲುಗಾರಿಕೆ ಸಂಸ್ಥೆಗಳು, ಹಿಂದೂ ಅವಿಭಕ್ತ ಕುಟುಂಬ ವ್ಯವಹಾರ ಸಂಸ್ಥೆಗಳು, ಸಹಕಾರಿ ಸಂಘಗಳು, ಕೂಡು ಬಂಡವಾಳ ಸಂಸ್ಥೆಗಳು ಮತ್ತು ಬಹುರಾಷ್ಟ್ರೀಯ ಕಂಪನಿಗಳ ಬಗ್ಗೆ ಸಂಕ್ಷಿಪ್ತವಾದ ಮಾಹಿತಿ ತಿಳಿದು ಕೊಂಡಿದ್ದೇವೆ. ಇವೇ ಅಲ್ಲದೆ, ಸರ್ಕಾರಿ ಉದ್ಯಮಗಳು, ಜಂಟಿರಂಗದ ಸಂಸ್ಥೆಗಳು, ಲೋಕೋಪಯೋಗಿ ಸೇವಾಸಂಸ್ಥೆಗಳು ರೂಢಿಯಲ್ಲಿವೆ

**1. ಸರ್ಕಾರಿ ಉದ್ಯಮಗಳು:** ಸರ್ಕಾರಿ ಉದ್ಯಮಗಳು ಸಾರ್ವಜನಿಕ ಉದ್ಯಮಗಳಾಗಿವೆ. ಸಾರ್ವಜನಿಕರ ಪ್ರಯೋಜನಕ್ಕಾಗಿ ಸರ್ಕಾರದ ಮಾಲೀಕತ್ವದಲ್ಲಿರುತ್ತವೆ. ಈ ಸಂಸ್ಥೆಗಳನ್ನು ಸರ್ಕಾರದ ಒಂದು ಇಲಾಖೆಯಾಗಿ ಸಂಬಂಧಿಸಿದ ಸಚಿವರ ನಿಯಂತ್ರಣದಲ್ಲಿ ನಡೆಸಲಾಗುತ್ತದೆ. ಇವುಗಳನ್ನು ಕೇಂದ್ರಸರ್ಕಾರ, ರಾಜ್ಯಸರ್ಕಾರ ಅಥವಾ ಪುರಸಭೆಯು ಪ್ರಾರಂಭ ಮಾಡಿ ತಮ್ಮ ನಿಯಂತ್ರಣದಲ್ಲಿ ಒಳಪಡಿಸಿಕೊಂಡಿರುತ್ತಾರೆ. ಉದಾ : ಗಣಿಗಾರಿಕೆ, ಲೋಹಗಾರಿಕೆ, ಹಡಗು ನಿರ್ಮಾಣ, ವಿಮಾನ ಯಂತ್ರಗಳು ಮುಂತಾದವು.

**2. ಜಂಟಿರಂಗದ ಸಂಸ್ಥೆಗಳು:** ಸರ್ಕಾರ ಮತ್ತು ಸಾರ್ವಜನಿಕರ ಜಂಟಿ ಮಾಲಿಕತ್ವದಲ್ಲಿರುತ್ತವೆ. ಉದಾ : ಭಾರತದಲ್ಲಿ ಗುಜರಾತ್ ರಾಜ್ಯ ರಸಗೊಬ್ಬರ ಕಂಪನಿ, ಕೊಚ್ಚಿನ್ ರಿಫೈನರೀಸ್ ಮುಂತಾದವು.

**3. ಲೋಕೋಪಯೋಗಿ ಸೇವಾಸಂಸ್ಥೆಗಳು:** ಇವು ಕೂಡ ಸರ್ಕಾರಿ ಉದ್ಯಮಗಳು. ಆದರೆ ಇವು ಸಾರ್ವಜನಿಕರಿಗೆ ಅತಿ ಹೆಚ್ಚಿನ ಅವಶ್ಯವೆನಿಸುವ ಸರಕುಗಳ ಮತ್ತು ಸೇವೆಗಳ ದಕ್ಷ ಪೂರೈಕೆಯ ವ್ಯವಸ್ಥೆಗಾಗಿ ಸ್ಥಾಪಿಸಲಾಗಿವೆ ಹಾಗೂ ಲಾಭ ಗಳಿಕೆಯ ಉದ್ದೇಶವಿರುವುದಿಲ್ಲ. ಉದಾ : ಅಡಿಗೆ ಅನಿಲ, ನೀರು, ವಿದ್ಯುತ್ ಸರಬರಾಜು, ರೈಲ್ವೆಗಳು, ಅಂಚೆ, ದೂರವಾಣಿ ಮುಂತಾದವು.

**ಷೇರು ಮಾರುಕಟ್ಟೆ:** ಕೂಡು ಬಂಡವಾಳ ಸಂಸ್ಥೆಗಳ ಬಂಡವಾಳವನ್ನು ಸಣ್ಣ ಸಣ್ಣ ವಿಭಾಗಗಳಾಗಿ ವಿಂಗಡಿಸಿರುತ್ತಾರೆ. ಈ ಬಂಡವಾಳದ ಪ್ರತಿ ಅಂಶವನ್ನು ಷೇರು ಎಂದು ಕರೆಯುತ್ತಾರೆ. ಈ ಷೇರುಗಳನ್ನು ಮತ್ತು ಸಾಲ ಪತ್ರಗಳನ್ನು (Debentures) ಕೊಳ್ಳುವ ಮತ್ತು ಮಾರಾಟ ಮಾಡುವ ಅನುಕೂಲವಿದೆ. ಕೂಡು ಬಂಡವಾಳ ಸಂಸ್ಥೆಯ ಕಾಯಿದೆಯ ಪ್ರಕಾರ ಷೇರುದಾರರು ತಮ್ಮ ಒಡೆತನದಲ್ಲಿರುವ ಷೇರುಗಳನ್ನು ಯಾವಾಗ ಬೇಕಾದರು ಮಾರಬಹುದು ಹಾಗೂ ಯಾರು ಬೇಕಾದರೂ ಖರೀದಿಸಿ ಷೇರುದಾರರಾಗಬಹುದು.

ಭಾರತದಲ್ಲಿ 1875ರಲ್ಲಿ ಮುಂಬೈಯಲ್ಲಿ ಮೊಟ್ಟಮೊದಲು ಷೇರುಮಾರುಕಟ್ಟೆಯ ವ್ಯವಸ್ಥೆಯಾಗಿದ್ದು, ಈಗಲೂ ಕೂಡ ಪ್ರಪಂಚದಲ್ಲಿ ಈ ಮಾರುಕಟ್ಟೆ ಅತ್ಯಂತ ಪ್ರತಿಷ್ಠಿತ ಷೇರುಮಾರುಕಟ್ಟೆಗಳಲ್ಲಿ ಒಂದಾಗಿದೆ. ಷೇರುಮಾರುಕಟ್ಟೆಗಳು ದ್ವಿತೀಯಕ ಷೇರುಮಾರುಕಟ್ಟೆಗಳಾಗಿದ್ದು ಕೇವಲ ನೋಂದಾಯಿತ ಕಂಪನಿಗಳ ಷೇರುಗಳ ಕ್ರಯ ಮತ್ತು ವಿಕ್ರಯಗಳಿಗೆ ಅವಕಾಶ ನೀಡುತ್ತವೆ. ಈಗ ಕೊಲ್ಕತ್ತಾ ಷೇರು ಮಾರುಕಟ್ಟೆ, ಬೆಂಗಳೂರು ಷೇರು ಮಾರುಕಟ್ಟೆ ಮುಂತಾದುವು ಮಾಹಿತಿ ತಂತ್ರಜ್ಞಾನದ ಮೂಲಕ ಷೇರುಗಳ ಕ್ರಯ ಮತ್ತು ವಿಕ್ರಯವನ್ನು ಅಂತರ್ಜಾಲದ ಮೂಲಕ ವ್ಯವಹರಿಸಲು ಅನುಕೂಲ ಮಾಡಿಕೊಟ್ಟಿವೆ. ಈ ಎಲ್ಲ ಷೇರು ಮಾರುಕಟ್ಟೆಗಳು ಸೆಬಿ SEBI [Securities exchange Board of India] ಎಂಬ ಭಾರತೀಯ ಸೆಕ್ಯೂರಿಟೀಸ್ ವಿನಿಮಯ ಮಂಡಳಿಯ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ.

## ಅಭ್ಯಾಸಗಳು

**I ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಜಾಗಗಳನ್ನು ಸರಿಯಾದ ಪದಗಳಿಂದ ತುಂಬಿರಿ.**

1 ಭಾರತದಲ್ಲಿ ಸಹಕಾರಿ ಸಂಘಗಳ ರಚನೆ ಭಾರತದ ಸಹಕಾರಿ ಸಂಘಗಳ ಕಾಯಿದೆ ——— ರಂತೆ ನಿಯಂತ್ರಿಸಲ್ಪಡುತ್ತದೆ.

2 ಪ್ರಪಂಚದಲ್ಲಿ ಮೊದಲ ಸಹಕಾರಿ ಸಂಘ ———ದೇಶದಲ್ಲಿ ———ಎಂಬುವವರಿಂದ ಸ್ಥಾಪಿತವಾಯಿತು.

3 ಸಹಕಾರಿ ಸಂಘಗಳ ಸದಸ್ಯರ ಸಂಖ್ಯೆಯ ಕನಿಷ್ಟ ಮಿತಿ ———

4 ಸಹಕಾರಿ ಸಂಘಗಳು ——— ಅಧಿಕಾರಿಗಳಿಂದ ——— ಪ್ರಮಾಣ ಪತ್ರ ಬಂದ ಮೇಲೆ ಅಸ್ತಿತ್ವಕ್ಕೆ ಬರುತ್ತವೆ.

5 ಕರ್ನಾಟಕದಲ್ಲಿ ಮೊದಲ ಸಹಕಾರಿ ಸಂಘವು ——— ಎಂಬಲ್ಲಿ ಪ್ರಾರಂಭವಾಯಿತು.

6 ಕೂಡು ಬಂಡವಾಳ ಸಂಸ್ಥೆಗಳ ಸ್ಥಾಪನೆಯ ಮೊದಲ ಹಂತ ——— ಆಗಿದೆ.

7 ಕೂಡು ಬಂಡವಾಳ ಸಂಸ್ಥೆಗಳ ಸ್ಥಾಪನೆಗೆ ಬೇಕಾದ ಅತ್ಯಂತ ಪ್ರಮುಖ ಪತ್ರಗಳು——— ಮತ್ತು ——— ಆಗಿವೆ.

8 ಬಹುರಾಷ್ಟ್ರೀಯ ಕಂಪನಿಗಳು ಮೊದಲು———ದೇಶದಲ್ಲಿ ಪ್ರಾರಂಭವಾದುವು.

9 ಭಾರತದ ತವರನ್ನು ಹೊಂದಿರುವ ಬಹುರಾಷ್ಟ್ರೀಯ ಕಂಪನಿಗಳಿಗೆ ——— ಮತ್ತು ——— ಉದಾಹರಣೆಯಾಗಿವೆ

10 ಭಾರತದಲ್ಲಿ ಮೊಟ್ಟ ಮೊದಲ ಷೇರುಪೇಟೆ ——— ಎಂಬಲ್ಲಿ ಪ್ರಾರಂಭವಾಯಿತು.

**II ಈ ಕೆಳಗಿನ ಪ್ರಶ್ನೆಗಳಿಗೆ ಸೂಕ್ತ ಉತ್ತರಗಳನ್ನು ಬರೆಯಿರಿ.**

1 ಲೋಕೋಪಯೋಗಿ ಸೇವಾಸಂಸ್ಥೆಗಳಿಗೆ ನಾಲ್ಕು ಉದಾಹರಣೆಗಳನ್ನು ಕೊಡಿ.

2 ಸಹಕಾರಿ ಸಂಘಗಳ ಯಾವುದಾದರೂ ಆರು ಲಕ್ಷಣ ಮತ್ತು ತತ್ವಗಳನ್ನು ತಿಳಿಸಿ.

3 ಸಹಕಾರಿ ಸಂಘಗಳ ವಿಧಗಳಾವುವು?

4 ಸಹಕಾರಿ ಸಂಘಗಳ ಮುಖ್ಯ ಪ್ರಯೋಜನಗಳು ಮತ್ತು ದೋಷಗಳನ್ನು ಪಟ್ಟಿ ಮಾಡಿ.

5 ಕೂಡು ಬಂಡವಾಳ ಕಂಪನಿಗಳ ಸ್ಥಾಪನೆಯ ಹಂತಗಳಾವುವು?

6 ಕೂಡು ಬಂಡವಾಳ ಸಂಸ್ಥೆಗಳ ಅನುಕೂಲಗಳನ್ನು ತಿಳಿಸಿ.

7 ಬಹುರಾಷ್ಟ್ರೀಯ ಕಂಪನಿಗಳಿಂದ ತವರು ದೇಶಕ್ಕೆ ಆಗುವ ಪ್ರಯೋಜನಗಳೇನು?

8 ಷೇರು ಮಾರುಕಟ್ಟೆಯ ಪ್ರಮುಖ ಕೆಲಸಗಳೇನು?

**III ಚಟುವಟಿಕೆಗಳು.**

ನಿಮ್ಮ ಉಪಾಧ್ಯಾಯರ ಸಹಾಯದಿಂದ ನಿಮ್ಮ ಶಾಲೆಯಲ್ಲಿ ಒಂದು ವಿದ್ಯಾರ್ಥಿ ಸಹಕಾರಿ ಸಂಘ ಪ್ರಾರಂಭಿಸಿ.

